ಶ್ರೀ.

ವಾಗ್ಭೂಷಣ ಗ್ರಂಥಮಾಲೆ ಸಂಖ್ಯೆ. ೯೧.

# ಜೈನಧರ್ಮಪರಿಭಾಷೆ.

ಇದನ್ನು

**ಮಹಾದೇವ ಪ್ರಭಾಕರ ಪೂಜಾರ,**

ಕನ್ನಡ ಪಂಡಿತ, ಟ್ರೇನಿಂಗ್ ಕಾಲೇಜ್

**ಧಾರವಾಡ.**

ಇವರು ರಚಿಸಿದರು



[illegible]

೧೯೩೦

ಬೆಲೆ ೧-೪-೦

Checked 1965

ಮುದ್ರಕರು:— ಅಣ್ಣಾಚಾರ್ಯ ಹೊಸಕೇರಿ.
ಮಂಗಳವಾರ ಪೇಠ ಧಾರವಾಡ

ಪ್ರಕಾಶಕರು:— ಕೆ. ಬಿ. ಅಂಕಲಗಿ. ವ್ಯವಸ್ಥಾಪಕ ವಾಗ್ಭೂಷಣ.

ಮುದ್ರಣಾಲಯ:— ವಿಜಯ ಪ್ರೆಸ್ ಧಾರವಾಡ.

ಪ್ರಕಾಶನ ಸ್ಥಳ:— ಕ. ವಿ. ವರ್ಧಕ ಸಂಘ ಧಾರವಾಡ.

# ಮುನ್ನುಡಿ.

ಜೈನಧರ್ಮವು ಅತಿಪ್ರಾಚೀನವಾದುದು. ಹಿಂದುಗಳು, ವೇದಗಳು ಅನಾದಿಗಳೆಂದು ಹೇಳುವರು; ಜೈನರು ಜೈನಸಿದ್ಧಾಂತಗಳು ಅನಾದಿಗಳೆಂದು ಹೇಳುವರು. ಪ್ರತಿಕಲ್ಪದಲ್ಲಿ ವೇದಗಳು ಪರಮೇಶ್ವರನ ನಿಶ್ವಸಿತರೂಪವಾಗಿ ಹೊರಬೀಳುವುವೆಂದು ಹಿಂದುಗಳು ಹೇಳುವರು. ಪ್ರತಿಕಲ್ಪದಲ್ಲಿ ತೀರ್ಥಂಕರರೆಂಬ ಈಶ್ವರರಿಂದ ಜೈನಸಿದ್ಧಾಂತಗಳು ಪ್ರಕಟಿತವಾಗುವುವೆಂದು ಜೈನರು ಹೇಳುವರು. ವರ್ತಮಾನಕಲ್ಪದ ಪ್ರಥಮತೀರ್ಥಂಕರನಾದ ಋಷಭದೇವನು ವಿಷ್ಣುವಿನ ಅವತಾರವೆಂದು ಹಿಂದುಗಳಿಂದ ಮನ್ನಣೆಯನ್ನು ಪಡೆದಿರುವನು. ಋಷಭದೇವನು ವಾಮನಾದಿ-ಅವತಾರಗಳಿಗಿಂತ ಮೊದಲಿನವನಾದುದರಿಂದ ಅವನಿಂದ ಪ್ರತಿಪಾದಿತವಾದ ಜೈನಧರ್ಮವೂ ಅತಿಪ್ರಾಚೀನವಾಗಿರಬೇಕೆಂಬುದನ್ನು ಹಿಂದುಗಳೂ ಒಪ್ಪಬೇಕಾಗುವುದು. ೨೨ ನೆಯ ತೀರ್ಥಂಕರನಾದ ನೇಮಿನಾಥನು ಶ್ರೀಕೃಷ್ಣನ ಸಮೀಪದ ಬಳಗದವನಾದುದರಿಂದ ಅವನ ಕಾಲದವನು. ೨೩ ನೆಯ ತೀರ್ಥಂಕರನಾದ ಪಾರ್ಶ್ವನಾಥನು ಗೌತಮಬುದ್ಧನಿಗಿಂತ ಬಹಳ ಮೊದಲಿನವನು. ಜೈನಪುರಾಣಗಳ ಈ ಮತಗಳು, ಜೈನಸಿದ್ಧಾಂತವು ಅತಿಪ್ರಾಚೀನವೆಂಬುವನ್ನು ಸಮರ್ಥಿಸುವುವು.

ಜೈನಧರ್ಮವು ಬೌದ್ಧಧರ್ಮದ ಅವನತಿಯ ತರುವಾಯ ಉಂಟಾಯಿತೆಂದೂ, ಬೌದ್ಧಧರ್ಮದ ಅವನತಿಯ ಕಾಲವು ಕ್ರಿ. ಶ. ೮ನೆಯ ಶತಮಾನವೆಂದು ಹಿಡಿದರೆ ಜೈನಧರ್ಮವು ಕ್ರಿ. ಶ ೮ನೆಯ ಶತಮಾನದ ಈಚೆಯದೆಂದೂ ವಿಲ್ಸನ್ ಮುಂತಾದ ವಿದ್ವಾಂಸರ ಮತವು. ಆದರೆ ಈ ಮತವು ಭ್ರಾಂತಿಮೂಲಕವೆಂಬುದನ್ನು ಸಹಜವಾಗಿ ತೋರಿಸಬಹುದು. ವ್ಯಾಸಮಹರ್ಷಿಕೃತ ಬ್ರಹ್ಮಸೂತ್ರಗಳ ದ್ವಿತೀಯಾಧ್ಯಾಯದಲ್ಲಿ ( ಸೂ–೩೩-೩೬) ಜೈನಮತದ ಖಂಡನವುಂಟೆಂದು ಶ್ರೀ. ಶಂಕರಾಚಾರ್ಯರು ತಮ್ಮ ಭಾಷ್ಯದಲ್ಲಿ ತೋರಿಸುವರು. ವ್ಯಾಸಋಷಿಗಳೂ ಶಂಕರಾಚಾರ್ಯರೂ ಕ್ರಿ. ೮ನೆಯ ಶತಮಾನದ ಈಚೆಯವರಲ್ಲವೆಂಬುದು ನಿರ್ವಿವಾದವು. ಆದುದರಿಂದ ಕ್ರಿ. ಶ. ೮ನೆಯ ಶತಮಾನಕ್ಕಿಂತ ಪೂರ್ವದಲ್ಲಿಯೇ ಜೈನಮತವು ಪ್ರಚಲಿತವಾಗಿದ್ದಿತೆಂಬುದು ಸಹಜವು. ಮಹಾವೈಯಾಕರಣನಾದ ಪಾಣಿನಿಯು ತನ್ನ ವ್ಯಾಕರಣದಲ್ಲಿ ಹಲವೆಡೆಗಳಲ್ಲಿ ತನಗಿಂತ ಮೊದಲಿನವನಾದ ಶಾಕಟಾಯನನೆಂಬ ವೈಯಾಕರಣನನ್ನು ಉಲ್ಲೇಖಿಸಿರುವನು. ಶಾಕಟಾಯನನು ಜೈನನು. ಪಾಣಿನಿಯು ಕ್ರಿ. ಶ. ೨ನೆಯ ಶತಮಾ

ನಕ್ಕಿಂತ ಮೊದಲಿನವನೆಂಬುದನ್ನು ಎಲ್ಲರೂ ಒಪ್ಪುವರು. ಆದುದರಿಂದ ಪಾಣಿನಿಗಿಂತ ಮೊದಲಿನವನಾದ ಶಾಕಟಾಯನನ ಧರ್ಮವು ಕ್ರಿ. ಶ. ೨ನೆಯ ಶತಮಾನಕ್ಕಿಂತ ಮೊದಲಿನದೆಂಬುದನ್ನು ಒಪ್ಪಬೇಕಾಗುವುದು. ಓರಿಸಾಪ್ರಾಂತದಲ್ಲಿರುವ ಸುಪ್ರಸಿದ್ಧ ಗುಹೆಗಳೂ ಮಂದಿರಗಳೂ ಕ್ರಿ. ಪೂ. ೩ನೆಯ ಶತಮಾನದಲ್ಲಿ ಜೈನಧರ್ಮವಿದ್ದಿತೆಂಬುದಕ್ಕೆ ಪ್ರಮಾಣಭೂತವಾಗಿವೆ. ಈ ಕಾರಣಗಳಿಂದ ಜೈನಧರ್ಮವು ಕ್ರಿ. ಶ. ೮ನೆಯ ಶತಮಾನದಿಂದೀಚೆಗೆ ಉಂಟಾಯಿತೆಂದು ಹೇಳುವುದು ಅಸಂಗತವು.

ಪ್ರೊ. ಲ್ಯಾಸೆನ್ ಮತ್ತು ವೇಬರ್ ಎಂಬವರು ಜೈನಧರ್ಮವು ಬೌದ್ಧಧರ್ಮದ ಶಾಖೆಯೆಂದು ಹೇಳಿರುವರು. ಬೌದ್ಧಧರ್ಮದಲ್ಲಿ ಪ್ರಚಲಿತವಾಗಿರುವ ಜಿನ, ಅರ್ಹತ್, ಮಹಾವೀರ, ಸರ್ವಜ್ಞ, ಸುಗತ, ತಥಾಗತ, ಸಿದ್ಧ, ಬುದ್ಧ, ಸಂಬುದ್ಧ ಎಂಬೀ ಶಬ್ದಗಳು ಜೈನಧರ್ಮದಲ್ಲಿಯೂ ಇರುವುವೆಂಬುದನ್ನೇ ಪ್ರೊ. ಲ್ಯಾಸೆನ್ ಎಂಬವರು ತಮ್ಮ ಮತಕ್ಕೆ ಆಧಾರವಾಗಿ ಇಟ್ಟುಕೊಂಡಿರುವರು. ಆದರೆ ಈ ಹೆಸರುಗಳು ಜೈನಧರ್ಮದಲ್ಲಿರುವುದರಿಂದ ಅದು ಬೌದ್ಧಧರ್ಮದ ಶಾಖೆಯೆಂದು ಹೇಳುವುದು ಯೋಗ್ಯವಾಗಲಾರದು. ಅರ್ಹತ್ ಶಬ್ದವು ವೇದದಲ್ಲಿ ಬಂದಿರುವುದರಿಂದ ಲ್ಯಾಸೆನರವರ ಯುಕ್ತಿಯಿಂದ ವೇದವು ಬೌದ್ಧಧರ್ಮದ ಶಾಖೆಯೆಂದು ಹೇಳಬೇಕಾಗುವುದು. ಮಹಾವೀರಶಬ್ದವು ಹಿಂದುಶಾಸ್ತ್ರಗಳಲ್ಲಿ ಹಲವೆಡೆ ಉಂಟು. ಸರ್ವಜ್ಞ ಶಬ್ದವು ಯೋಗಸೂತ್ರದಲ್ಲಿ ಬಂದಿದೆ. ಬುದ್ಧಶಬ್ದವು ಸಾಂಖ್ಯದರ್ಶನದಲ್ಲಿ ಆತ್ಮನನ್ನು ಕುರಿತು ಪ್ರಯೋಗಿಸಲ್ಪಟ್ಟಿದೆ. ಸಿದ್ಧ ಎಂಬ ಶಬ್ದವು ಬಾರದ ಹಿಂದು ಧರ್ಮಗ್ರಂಥವೇ ಇಲ್ಲ. ಲ್ಯಾಸೆನರವರ ಮತವನ್ನು ಒಪ್ಪಿದರೆ ಇವೆಲ್ಲವೂ ಬೌದ್ಧಧರ್ಮದ ಶಾಖಾಪ್ರಶಾಖೆಗಳೆಂದು ಹೇಳಬೇಕು. ಈ ಶಬ್ದಗಳು ಪ್ರಾಚೀನ ಕಾಲದಲ್ಲಿ ಭರತಖಂಡದ ಎಲ್ಲ ಧರ್ಮಗಳಲ್ಲಿ ಪ್ರಚಲಿತವಾಗಿದ್ದುವೆಂದೂ, ಶಬ್ದಪ್ರಚಾರದ ಸಾಮ್ಯದಿಂದ ಒಂದು ಧರ್ಮವು ಇನ್ನೊಂದು ಧರ್ಮದ ಶಾಖೆಯೆಂದು ಹೇಳುವುದು ಸರಿಯಾಗಲಾರದೆಂದೂ ಬಲ್ಲವರ ಮತವು.

ಲ್ಯಾಸೆನರ ಇನ್ನೊಂದು ಯುಕ್ತಿಯೇನೆಂದರೆ ಬೌದ್ಧರೂ, ಜೈನರೂ ತಮ್ಮ ಮಹಾಪುರುಷರನ್ನು ದೇವತೆಗಳಂತೆ ಪೂಜಿಸುವರು; ಮತ್ತು ಮಂದಿರಗಳಲ್ಲಿ ಅವರ ಮೂರ್ತಿಗಳನ್ನು ಸ್ಥಾಪಿಸುವರು. ಈ ಮಹಾಪುರುಷರು ನಿಜವಾಗಿ ಮರ್ತ್ಯರು, ದೇವತೆಗಳಲ್ಲ; ಈ ಯುಕ್ತಿಯಿಂದ ಜೈನಧರ್ಮವು ಬೌದ್ಧಧರ್ಮದ ಶಾಖೆಯೆಂಬುದು ಹೇಗೆ ಸಿದ್ಧವಾಗುವುದೋ ತಿಳಿಯದು. ಇದೇ ಯುಕ್ತಿಯಿಂದ ಬೌದ್ಧಧರ್ಮವನ್ನು ಜೈನಧರ್ಮದ ಶಾಖೆಯೆಂದು ಹೇಳಬಹುದು. ಈ ವಿಷಯದ ನಿಜಾಂಶವೇನೆಂದರೆ, ಮಹಾಪುರುಷಪೂಜೆಯು ಭರತಖಂಡದ

ಚಿರಂತನಪದ್ಧತಿಯು. ವೇದದಲ್ಲಿ ಮನುಷ್ಯರಾದ ಋಭುಗಳ ಸ್ತುತಿಯುಂಟು. ಋಷಿಗಳ, ತಪಸ್ವಿಗಳ ಪೂಜಾಪುರಸ್ಕಾರಾದಿಗಳು ಭರತಖಂಡದ ಚಿರರೂಢ ಪದ್ಧತಿ ಯೆಂಬುದನ್ನು ಪರದೇಶೀಯರು ಅರಿಯರಾದರೂ ಭರತವರ್ಷೀಯರೆಲ್ಲರೂ ಬಲ್ಲರು. ಏಕಲವ್ಯನು ಅರಣ್ಯದಲ್ಲಿ ದ್ರೋಣಾಚಾರ್ಯರ ಮೂರ್ತಿಯನ್ನು ಇಟ್ಟುಕೊಂಡು ಪೂಜಿಸುತ್ತಿದ್ದನೆಂಬುದನ್ನು ಮಹಾಭಾರತವನ್ನೋದಿದವರು ಬಲ್ಲರು. ಈ ಕಾರಣಗಳಿಂದ ಮಹಾಪುರುಷಪೂಜಾಪದ್ಧತಿಯಿಂದ ಜೈನಧರ್ಮವು ಬೌದ್ಧಧರ್ಮದ ಶಾಖೆಯೆಂದು ಸಿದ್ಧವಾಗುವುದಿಲ್ಲ.

ಲ್ಯಾಸೆನರು ಮತ್ತೆ ಹೇಳುವುದೇನೆಂದರೆ, ಜೈನಬೌದ್ಧಧರ್ಮಗಳೆರಡೂ ಕಾಲವಿಚಾರದಲ್ಲಿ ಅನಂತಾನಂತ ಅಪರಿಸೀಮ ಯುಗಯುಗಾಂತರಗಳನ್ನು ಹೇಳು ವುವು. ಆ ಕಾಲ ಕಲ್ಪನೆಯನ್ನು ತಂದುಕೊಳ್ಳುವಲ್ಲಿ ಮನುಷ್ಯನು ದಿಙ್ಮೂಢ ನಾಗುವನು. ಈ ಕಾರಣದಿಂದಲೂ ಜೈನಧರ್ಮವು ಬೌದ್ಧಧರ್ಮದ ಶಾಖೆ ಯೆಂದು ಹೇಳಲಾಗುವುದಿಲ್ಲ. ಲ್ಯಾಸೆನರ ಈ ಯುಕ್ತಿಯು ಭರತಖಂಡದ ವಿಷಯವಾಗಿ ಅವರ ಅಜ್ಞತೆಯನ್ನು ಮಾತ್ರ ತೋರ್ಪಡಿಸುವುದು. ಯುಗ ಯುಗಾಂತರಗಳ ವಿವರಣೆ, ಕಲ್ಪಕಲ್ಪಾಂತರ ಸಮಾಚಾರ ಇವುಗಳನ್ನು ಹಿಂದು ಧರ್ಮಗ್ರಂಥಗಳೂ ಹೇಳುವುವು. ಜೈನಬೌದ್ಧಧರ್ಮಗ್ರಂಥಗಳೂ ಹೇಳುವುವು ಇದು ಭರತಖಂಡದ ಸರ್ವಸಾಧಾರಣ ಪದ್ಧತಿಯು.

ಲ್ಯಾಸೆನರ ಕೊನೆಯ ಯುಕ್ತಿಯೇನೆಂದರೆ, ಜೈನಬೌದ್ಧಧರ್ಮಗಳೆರಡೂ ಅಹಿಂಸಾಧರ್ಮವನ್ನು ಆದರಿಸುವುವು. ಈ ಯುಕ್ತಿಯೂ ಜೈನಧರ್ಮವು ಬೌದ್ಧ ಧರ್ಮದ ಶಾಖೆಯೆಂಬುದನ್ನು ಸಾಧಿಸುವುದಿಲ್ಲ. ಅಹಿಂಸಾಧರ್ಮವು ಮುಖ್ಯ ವಾದುದೆಂಬುದನ್ನು ಜೈನಬೌದ್ಧಸಂಪ್ರದಾಯಗಳೆರಡೂ ಒಪ್ಪುವುವೆಂಬುದು ನಿರ್ವಿವಾದವಾದುದು. ಆದರೆ ಇಷ್ಟರಿಂದಲೇ ಜೈನಧರ್ಮವು ಬೌದ್ಧಧರ್ಮ ದಿಂದ ಉಂಟಾದುದೆಂದು ಹೇಗೆ ಹೇಳುವುದು? ಅಹಿಂಸಾಧರ್ಮವು ಶ್ರೇಷ್ಠ ವಾದುದೆಂದು ಹೇಳುವುದು ಭರತಖಂಡದ ಚಿರಕಾಲದ ವೈಶಿಷ್ಟ್ಯವು. ವೇದದ ಲ್ಲಿ ಪಶುಯಾಗವನ್ನು ಹೇಳಿದ್ದರೂ ಆ ವೇದದಲ್ಲಿಯೇ ಯಾವ ಪ್ರಾಣಿಯನ್ನೂ ಹಿಂಸಿಸಬಾರದೆಂದೂ ಹೇಳಿರುವುದು. ಕೆಲವರು ಅಹಿಂಸಾಯಾಗವನ್ನೂ ಮಾ ಡುವರು. ಮುಕ್ತಿಮಾರ್ಗದಲ್ಲಿದ್ದ ಋಷಿಗಳೂ, ಯತಿಗಳೂ ಅಹಿಂಸಕರಾಗಿಯೇ ಇದ್ದರು. ಅನುಕಂಪಾಮೃದುರೇಷ ಶ್ರೋತ್ರಿಯಃ ಎಂದು ಕವಿಗಳು ವರ್ಣಿಸಿರು ವರು- ಬ್ರಾಹ್ಮಣರಲ್ಲಿ ಯಜ್ಞಗಳು ನಡೆಯುತ್ತಿದ್ದರೂ ಅವರು ಮಾಂಸಭಕ್ಷಣ ಮಾಡುವುದಿಲ್ಲ. ಹೀಗಿರುವುದರಿಂದ ಅಹಿಂಸಾಧರ್ಮವು ಸಮಗ್ರ ಭರತಖಂ ಡದ ಧರ್ಮವೆಂದು ಹೇಳುವುದು ಅಯೋಗ್ಯವಾಗಲಾರದು. ಹೀಗಿರುವಾಗ

ಅಹಿಂಸಾಧರ್ಮದ ಆಚರಣೆಯನ್ನು ಜೈನಧರ್ಮವು ಮಾಡುವುದರಿಂದ ಬೌದ್ಧ ಧರ್ಮದ ಶಾಖೆಯೆಂದು ಹೇಳುವುದು ಯುಕ್ತಿಯುಕ್ತವಾಗಲಾರದು.

ಜೈನಧರ್ಮಕ್ಕೂ ಬೌದ್ಧಧರ್ಮಕ್ಕೂ ಹೋಲಿಕೆಯಿರುವುದನ್ನು ಕಂಡು ಪ್ರೊ. ಲ್ಯಾಸೆನ್ ಮತ್ತು ವೇಬರ್ ಇವರು ಜೈನಧರ್ಮವು ಬೌದ್ಧಧರ್ಮದ ಶಾಖೆಯೆಂದು ಭ್ರಾಂತಿಸಿರುವರು. ಈ ಎರಡು ಧರ್ಮಗಳಲ್ಲಿರುವ ಹೋಲಿಕೆಯು ಹೊರಗಿನ ಹೋಲಿಕೆಯು. ಇಂತಹ ಹೋಲಿಕೆಯು ಜೈನಧರ್ಮಕ್ಕೂ ಹಿಂದು ಧರ್ಮಕ್ಕೂ ಉಂಟು; ಹಿಂದು ಧರ್ಮಕ್ಕೂ ಬೌದ್ಧಧರ್ಮಕ್ಕೂ ಉಂಟು. ಆದರೆ ಜೈನಧರ್ಮಕ್ಕೂ ಬೌದ್ಧಧರ್ಮಕ್ಕೂ ಇರುವ ಭೇದಗಳೂ ಬಹಳ ಉಂಟು. ಈ ಭೇದಗಳನ್ನು ಆಲೋಚಿಸಿದ್ದರೆ ಜೈನಧರ್ಮವು ಬೌದ್ಧ ಧರ್ಮದ ಶಾಖೆಯೆಂದು ಲ್ಯಾಸೆನನು ಎಂದೂ ಹೇಳುತ್ತಿರಲಿಲ್ಲ.

ಬೌದ್ಧಧರ್ಮವು ನಿರಾತ್ಮವಾದಿಯು. ಆದರೆ ಜೈನರು ಆತ್ಮನ ಅನಾದ್ಯನಂತಸತ್ತೆಯನ್ನು ಹೇಳುವರು. ಬೌದ್ಧರು ಶೂನ್ಯವಾದಿಗಳು; ಆದರೆ ಜೈನರಲ್ಲಿ ಜೀವನ ಹೊರತು ಇನ್ನೂ ಐದು ಅಜೀವ ಸತ್ಪದಾರ್ಥಗಳುಂಟು. ಬೌದ್ಧ ಧರ್ಮದಲ್ಲಿ ಕರ್ಮವೆಂದರೆ ಒಂದು ಭಾವವು ಇಲ್ಲವೆ ನಿಯಮವು (Law.) ಆದರೆ ಜೈನರಲ್ಲಿ ಕರ್ಮವು ಪುದ್ಗಲಪದಾರ್ಥವು. ಬೌದ್ಧಧರ್ಮದಲ್ಲಿ ನಿರ್ವಾಣವು ನಿಜವಾಗಿ ಆತ್ಮನ ನಿರ್ವಾಣವು. ಜೈನಮತದಲ್ಲಿ ಅದು ಜೀವನ ಮುಕ್ತಾವಸ್ಥೆಯು- ಪರಮಾನಂದದ ಅವಸ್ಥೆಯು. ಈ ಕಾರಣಗಳಿಂದ ಜೈನಧರ್ಮವು ಬೌದ್ಧಧರ್ಮದ ಶಾಖೆಯೆಂದು ಎಂದೂ ಸಿದ್ಧವಾಗುವುದಿಲ್ಲ. ಬುದ್ಧನು ಆತ್ಮವಿಚಾರವನ್ನು ಕಂಠೋಕ್ತವಾಗಿ ಹೇಳದಿದ್ದರೂ ಆತನು ಆತ್ಮವಾದಿಯೆಂದೂ, ನಿರ್ವಾಣವು ಆತನ ಮತದಂತೆ ಕೇವಲ ಆತ್ಮನಿರ್ವಾಣವಲ್ಲದೆ ಆನಂದಮಯವಾದ ಮೋಕ್ಷಾವಸ್ಥೆಯೆಂದೂ ಸಿದ್ಧಮಾಡಬಹುದಾದರೂ ಬೌದ್ಧಧರ್ಮಕ್ಕೂ ಜೈನಧರ್ಮಕ್ಕೂ ಬೇರೆ ಹಲವು ಭೇದಗಳುಂಟು.

ಈ ವಿಷಯದಲ್ಲಿ ಇನ್ನೂ ಕೆಲವು ವಿಚಾರಗಳನ್ನು ಇಲ್ಲಿ ಹೇಳಬಹುದು. ಜೈನಧರ್ಮವು ಬೌದ್ಧಧರ್ಮದಿಂದ ಉಂಟಾದುದಿದ್ದರೆ ಬೌದ್ಧಧರ್ಮಗ್ರಂಥಗಳಲ್ಲಿ ಎಲ್ಲಿಯಾದರೂ ಇದರ ಉಲ್ಲೇಖವಿರಬೇಕಾಗಿದ್ದಿತು. ತಿರುಗಿ ಕೇಳಿದರೆ, ಜೈನ ಸಂಪ್ರದಾಯವು ಸ್ವತಂತ್ರವಾದುದೆಂದೇ ಉಲ್ಲೇಖವುಂಟು. ಇನ್ನು ಜೈನ ಧರ್ಮಗ್ರಂಥಗಳಲ್ಲಿ ಮಾತ್ರ ಬುದ್ಧನು ಮೊದಲು ಜೈನಧರ್ಮಾವಲಂಬಿಯಾಗಿದ್ದನೆಂದೂ ಜೈನಧರ್ಮದ ಆಚರಣೆಗಳ ಕಠೋರತೆಯನ್ನು ಸಹಿಸಲಾರದೆ ಹೊಸದೊಂದು ಧರ್ಮವನ್ನು ಪ್ರಚಾರಪಡಿಸಿದನೆಂದೂ ಉಲ್ಲೇಖವುಂಟು. ಈ ಕಥೆಯಲ್ಲಿ ಐತಿಹಾಸಿಕ ಸತ್ಯಾಂಶವು ಎಷ್ಟೇ ಇದ್ದರೂ ಇವರಿಂದ ಜೈನಧರ್ಮವು ಬೌದ್ಧ ಧರ್ಮದಿಂದ ಉಂಟಾದುದಲ್ಲವೆಂದು ವ್ಯಕ್ತವಾಗುವುದು.

ಕೆಲವರು ಮಹಾವೀರಸ್ವಾಮಿಯಿಂದ ಜೈನ ಧರ್ಮವು ಸ್ಥಾಪಿಸಲ್ಪಟ್ಟಿತೆಂದು ಹೇಳುವರು. ಆದರೆ ಮಹಾವೀರ ಸ್ವಾಮಿಯು ಜೈನಧರ್ಮದ ಉದ್ಧಾರಕನಲ್ಲದೆ ಸ್ಥಾಪಕನಲ್ಲ. ಜೈನಧರ್ಮವು ಮಹಾವೀರಸ್ವಾಮಿಗಿಂತ ಮೊದಲೇ ಪ್ರಚಾರದಲ್ಲಿದ್ದಿತೆಂದು ಉತ್ತರಾಧ್ಯಯನಸೂತ್ರವೆಂಬ ಜೈನಗ್ರಂಥದಿಂದ ಸಿದ್ಧವಾಗುವುದು. ಆ ಗ್ರಂಥದಲ್ಲಿ ಮಹಾವೀರ ಶಿಷ್ಯನಾದ ಗೌತಮನಿಗೂ, ಪಾರ್ಶ್ವನಾಥಶಿಷ್ಯನಾದ ಕೇಶಿಗೂ ವಾದವಿವಾದವಾಯಿತೆಂದೂ, ವಾದವಿವಾದದ ಕೊನೆಯಲ್ಲಿ ಕೇಶಿಗೌತಮರೂ ಪಾರ್ಶ್ವನಾಥ ಮಹಾವೀರರೂ ಒಂದೇ ತತ್ತ್ವವನ್ನು ಪ್ರಚಾರಪಡಿಸುವವರೆಂದು ಗೊತ್ತಾಯಿತೆಂದೂ ಉಲ್ಲೇಖವುಂಟು. ಇದರಿಂದ ಮಹಾವೀರನಿಗಿಂತ ಪೂರ್ವದಲ್ಲಿ- ಎಂದರೆ ಗೌತಮಬುದ್ಧನಿಗಿಂತ ಬಹು ಪೂರ್ವದಲ್ಲಿ— ಪಾರ್ಶ್ವನಾಥ ಪ್ರಚಾರಿತವಾದ ಜೈನಧರ್ಮವಿದ್ದಿತೆಂದು ಒಪ್ಪಬೇಕಾಗುವುದು. ಇದಲ್ಲದೆ ಹಲವು ಬೌದ್ಧಗ್ರಂಥಗಳಲ್ಲಿ ಜೈನತತ್ತ್ವಗಳ ವಿಚಾರವುಂಟು. ಈ ಎಲ್ಲ ಕಾರಣಗಳಿಂದ ಜೈನಧರ್ಮವು ಬೌದ್ಧಧರ್ಮಕ್ಕಿಂತ ಪ್ರಾಚೀನವಾದುದೆಂದು ಸಿದ್ಧವಾಗುವುದು.

ವೃಕ್ಷಾದಿಗಳಲ್ಲಿ ಜೀವವುಂಟೆಂದು ಹೇಳುವುದೂ, ಧರ್ಮ, ಅಧರ್ಮಗಳು ಪದಾರ್ಥಗಳೆಂದು ಹೇಳುವುದೂ ಜೈನಮತದ ಒಂದು ವಿಶೇಷವು. ಪ್ರೊ. ಜೇಕಬಿ ಎಂಬವರು ಈ ತರದ ಪ್ರಾಣವಾದ ( Animism ) ಪದಾರ್ಥವಾದಗಳು ಪ್ರಾಚೀನತಮ ಧರ್ಮದಲ್ಲಿಯೇ ಇರುವ ಸಂಭವವುಂಟೆಂದು ಹೇಳುವರು.

ಯಜುರ್ವೇದದ ೨೫ನೆಯ ಅಧ್ಯಾಯದ ೧೯ನೆಯ ಮಂತ್ರದಲ್ಲಿ ಋಷಭ, ನೇಮಿ, ಸುಪಾರ್ಶ್ವ ಎಂಬೀ ಮೂರು ಹೆಸರುಗಳ ಉಲ್ಲೇಖವುಂಟು. ಅದೇ ವೇದದ ೯ನೆಯ ಅಧ್ಯಾಯದ ೨೫ನೆಯ ಮಂತ್ರದಲ್ಲಿ ನೇಮಿನಾಥನಿಗಾಗಿ ಆಹುತಿಯನ್ನು ಕೊಡುವ ಉಲ್ಲೇಖವುಂಟು. ಋಗ್ವೇದದ ೨ ನೆಯ ಅಷ್ಟಕದ ೧೭ನೆಯ ವರ್ಗದಲ್ಲಿ ಅರ್ಹತ್ ಶಬ್ದವು ಬಂದಿದೆ. ಜೈನಮತೀಯರು ಈ ಶಬ್ದಗಳು ತಮ್ಮ ಮತದ ಮಹಾಪುರುಷರನ್ನನುಲಕ್ಷಿಸಿಯೇ ಅಲ್ಲಿ ಬಂದಿರುವುವೆಂದು ಹೇಳುವರು. ಈ ಕಾರಣಗಳಿಂದ ಜೈನಧರ್ಮವು ಪ್ರಾಚೀನತಮವಾದುದೆಂದು ಸಿದ್ಧವಾಗುವುದು.

ಹಿಂದು ಜನರ ಧರ್ಮಗ್ರಂಥದಲ್ಲಿ— ಆನೆಯು ಬೆನ್ನಟ್ಟಿದರೂ ಜೈನರ ಬಸದಿಯನ್ನು ಹೊಗಬೇಡ ಎಂದು ಹೇಳಿದೆ. ಇದನ್ನು ನೋಡಿ ಕೆಲವರು ಹಿಂದುಮತಕ್ಕೂ ಜೈನಮತಕ್ಕೂ ವಿರೋಧವುಂಟೆಂದೂ, ಹಿಂದುಮತದಿಂದಲೇ ವಿರುದ್ಧತತ್ತ್ವದಿಂದ ಜೈನಮತವುಂಟಾಯಿತೆಂದೂ ಹೇಳುವರು. ವೇದದಲ್ಲಿ ಹೇಳಿದ ವಿಧಾನಗಳಿಗೂ ಜೈನಮತಕ್ಕೂ ವಿರೋಧವಿರುವುದೆಂಬುದು ನಿಜವು. ಆದರೆ ವಿರೋಧವಿದ್ದಷ್ಟಕ್ಕೇ ಜೈನಮತವು ಹಿಂದುಮತದಿಂದ ಉತ್ಪನ್ನವಾಯಿತೆಂದು ಹೇಳು

ವುದು ಯೋಗ್ಯವಾಗಲಾರದು. ಏಕೆಂದರೆ, ಇದೇ ಯುಕ್ತಿಯಿಂದ ವೈದಿಕಮತವು ಜೈನಮತದಿಂದ ಉಂಟಾದುದೆಂದು ಏಕೆ ಹೇಳಬಾರದು? ಜೈನಪುರಾಣದಲ್ಲಿ "ಪವಿತ್ರವಾದ ಜೈನಾಚಾರದ ಅಪಾರ್ಥವನ್ನು ಪ್ರಕಾಶಗೊಳಿಸಿ ಲೋಕದ ಸರ್ವನಾಶಕ್ಕಾಗಿ ಪಾಪಿಯಾದ ಕಾಲಾಸುರನು ಋಗ್ವೇದಾದಿ ವೇದಗಳನ್ನು ರಚಿಸಿದನೆಂದು ಉಲ್ಲೇಖವುಂಟು. ಇದರ ತಾತ್ಪರ್ಯವೇನೆಂದರೆ– ಜೈನಸಿದ್ಧಾಂತವೇ ನಿಜವಾಗಿ ಅನಾದಿಯೂ ವಿಶುದ್ಧವೂ ಆದುದು; ಋಗ್ವೇದಾದಿಗಳು ಜೈನಾಗಮಗಳ ವಿಕಾರಗಳು.

ಒಂದು ಮತಕ್ಕೂ ಇನ್ನೊಂದು ಮತಕ್ಕೂ ವಿರೋಧವಿರುವುದು ಮೊದಲಿನಿಂದ ನಡೆದು ಬಂದುದು- ವೇದಾಂತ ಮತಕ್ಕೂ ಸಾಂಖ್ಯಮತಕ್ಕೂ ವಿರೋಧವುಂಟು. ಆದುದರಿಂದ ವೇದಾಂತವು ಸಾಂಖ್ಯಕ್ಕೆ "ದುರ್ಮತಿ" ಎಂದು ಹೆಸರಿಟ್ಟಿದೆ. ವೇದಾಂತವೂ "ಪ್ರಚ್ಛನ್ನಬೌದ್ಧಂ" ಎಂದು ಸಾಂಖ್ಯರಿಂದ ನಿಂದಿಸಲ್ಪಟ್ಟಿದೆ. ನ್ಯಾಯ-ವೇದಾಂತಗಳಿಗೆ ಪರಸ್ಪರ ವಿರೋಧವಿರುವುದರಿಂದ ಒಂದನ್ನೊಂದು ಯಥೇಷ್ಟವಾಗಿ ಬಯ್ದಿವೆ. ವಿರೋಧವಿದ್ದಷ್ಟಕ್ಕೇ ಒಂದರಿಂದೊಂದು ಉಂಟಾದುವೆಂದು ಹೇಳುವುದು ಸರಿಯಾಗದು.

ಜೈನಮತವು ವೈದಿಕಮತದಿಂದ ಉಂಟಾದುದೋ ವೈದಿಕಮತವು ಜೈನಮತದಿಂದ ಉಂಟಾದುದೋ ಎಂಬೀ ಜಗಳದಿಂದ ಪ್ರಯೋಜನವೇನೂ ಇಲ್ಲ. ಇಂತಹ ಕಲಹಗಳ ನಿರ್ಣಯವಾಗುವುದೂ ಕಡಿಮೆ. ಆದರೂ ಜೈನಮತವು ಅತಿ ಪ್ರಾಚೀನವೆಂಬ ವಿಷಯದಲ್ಲಿ ಸಂಶಯವಿಲ್ಲ. ಔಪನಿಷದವಾದ ವೇದಾಂತಮತವು ವೈದಿಕಕರ್ಮಕಾಂಡದ ತರುವಾಯ ಪ್ರಚಾರಿತವಾಯಿತೆಂಬುದನ್ನು ನಾವು ಒಪ್ಪಲಾರೆವು. ಮನುಷ್ಯಸಮಾಜದಲ್ಲಿ ಕರ್ಮಕಾಂಡದ ಪಾರ್ಶ್ವದಲ್ಲಿಯೇ ಜ್ಞಾನಕಾಂಡವಿರುವುದನ್ನು ಕಾಣಬಹುದು. ವೈದಿಕಕರ್ಮಕಾಂಡದ ಪಾರ್ಶ್ವದಲ್ಲಿಯೇ ಆ ಕಾಲದಲ್ಲಿಯೇ ಔಪನಿಷದಮತವು ಪ್ರಚಲಿತವಾಗಿದ್ದಿತೆಂದೂ, ಅವೈದಿಕವಾದ ಜೈನಮತವೂ ಆಗಲೇ ಪ್ರಚಲಿತವಾಗಿದ್ದಿತೆಂದೂ ನಮ್ಮ ಅಭಿಪ್ರಾಯವು.

ಹಿಂದುಸ್ತಾನದಲ್ಲಿ ಜೈನಧರ್ಮೀಯರ ಸಂಖ್ಯೆ ಸ್ವಲ್ಪವಾಗಿದ್ದರೂ ಜೈನಧರ್ಮವು ಹಿಂದುಸ್ತಾನದ ಪ್ರಮುಖ ಧರ್ಮಗಳಲ್ಲೊಂದಾಗಿದೆ. ಜೈನಧರ್ಮವು ತಾತ್ತ್ವಿಕ ದೃಷ್ಟಿಯಿಂದಲೂ, ಲೋಕದ ಕಲ್ಯಾಣದ ದೃಷ್ಟಿಯಿಂದಲೂ ಉದಾತ್ತವಾದುದು. ಅನೇಕ ವಿದ್ವಾಂಸರಿಂದಲೂ, ಚಂದ್ರಗುಪ್ತ ಮೊದಲಾದ ಮಹಾರಾಜರಿಂದಲೂ ಅವಲಂಬಿಸಲ್ಪಟ್ಟ ಧರ್ಮವು. ಆದುದರಿಂದ ತತ್ತ್ವಜಿಜ್ಞಾಸುಗಳು ಜೈನಮತ ವಿಚಾರವನ್ನು ಮಾಡದಿದ್ದರೆ ಅವರ ತತ್ತ್ವಜ್ಞಾನವು ಪೂರ್ಣವಾಗಲಾರದು. ಜೈನರಲ್ಲಿ ದಿಗಂಬರ ಶ್ವೇತಾಂಬರ ಎಂಬ ಎರಡು ಪಂಗಡಗಳುಂಟು. ತತ್ತ್ವ

ವಿಚಾರದಲ್ಲಿ ಅವರಲ್ಲಿ ಯಾವ ಭೇದವೂ ಇಲ್ಲ. ತೀರ್ಥಂಕರರು ಆಹಾರವಿಲ್ಲದೆ ಜೀವಿಸುವರೆಂದು ದಿಗಂಬರರೂ, ಆಹಾರದಿಂದ ಜೀವಿಸುವರೆಂದು ಶ್ವೇತಾಂಬರರೂ ಹೇಳುವರು; ವಸ್ತ್ರವನ್ನು ಧರಿಸಿದ ಸಂನ್ಯಾಸಿಯು ಮೋಕ್ಷವನ್ನೈದಲಾರನೆಂದೂ ಸ್ತ್ರೀಯರಿಗೆ ಮೋಕ್ಷವಿಲ್ಲವೆಂದೂ ದಿಗಂಬರರು ಹೇಳುವರು. ಆದರೆ ಶ್ವೇತಾಂಬರರು ಇದನ್ನೊಪ್ಪುವುದಿಲ್ಲ. ಮಹಾವೀರಸ್ವಾಮಿಯ ಗರ್ಭಪಿಂಡವು ಶ್ವೇತಾಂಬರರು ಹೇಳುವಂತೆ ದೇವಾನಂದೆಯ ಗರ್ಭದಿಂದಲೆ ತ್ರಿಶಲೆಯ ಗರ್ಭಕ್ಕೆ ತರಲ್ಪಡಲಿಲ್ಲವೆಂದು ದಿಗಂಬರರು ಹೇಳುವರು. ಕರ್ನಾಟಕದಲ್ಲಿ ದಿಗಂಬರ ಜೈನರೇ ಉಂಟು. ಜೈನರಲ್ಲಿ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಎಂಬ ಮೂರು ವರ್ಣಗಳುಂಟು. ಭರತಖಂಡದ ಬಹುಭಾಗಗಳಲ್ಲಿ ಜೈನರು ವಾಸವಾಗಿದ್ದರೂ ಕರ್ನಾಟಕದಲ್ಲಿ ಅವರ ವಸತಿಯು ಹೆಚ್ಚಾಗಿ ಇರುವುದು. ಶ್ರವಣ ಬೆಳಗೊಳ ಮುಂತಾದ ಜೈನ ಕ್ಷೇತ್ರಗಳು ಕರ್ನಾಟಕದಲ್ಲಿವೆ. ಚಂದ್ರಗುಪ್ತ ಮಹಾರಾಜನು ಉತ್ತರ ಹಿಂದುಸ್ಥಾನದ ದ್ವಾದಶ ವಾರ್ಷಿಕ ಕ್ಷಾಮದ ನಿಮಿತ್ತದಿಂದ ಜೈನಧರ್ಮಸಂಘದೊಡನೆ ದಕ್ಷಿಣದೇಶಕ್ಕೆ ಬಂದು ಶ್ರವಣ ಬೆಳಗೊಳದ ಚಂದ್ರದ್ರೋಣಗಿರಿಗಳಲ್ಲಿ ವಾಸಮಾಡಿದುದು ಸುಪ್ರಸಿದ್ಧವಾದುದು.

ಜೈನವಿದ್ವಾಂಸರು ಸಂಸ್ಕೃತವಾಙ್ಮಯದಲ್ಲಿ ಮಾಡಿದ ಕಾರ್ಯವು ಅನ್ಯಾದೃಶವಾಗಿರುವುದು. ಅವರು ದೇಶಭಾಷೆಗಳ ವಾಙ್ಮಯಾಭಿವೃದ್ಧಿಗೂ ಬಹಳ ಪರಿಶ್ರಮವನ್ನು ಮಾಡಿದರು. ಆರಂಭದ ಕನ್ನಡ ವಾಙ್ಮಯವೆಂದರೆ ಜೈನರದೆಂದೇ ಹೇಳಬಹುದು. ಅವರ ಪುರಾಣಗಳೂ, ಧರ್ಮಗ್ರಂಥಗಳೂ ಕನ್ನಡದಲ್ಲಿ ವಿಪುಲವಾಗಿವೆ. ಕನ್ನಡದ ಪ್ರಾಚೀನ ಕಾವ್ಯಗಳೆಂದರೆ ಜೈನರ ಪುರಾಣಗಳೇ. ಈ ಪುರಾಣಗಳಲ್ಲೆಲ್ಲ ತೀರ್ಥಂಕರರ ಅನೇಕ ಜನ್ಮಗಳ ಚರಿತ್ರಗಳೂ, ಧರ್ಮಸಾಂಪ್ರದಾಯಗಳೂ, ಆಚಾರವಿಚಾರಗಳೂ ವರ್ಣಿತವಾಗಿರುವುವು. ಪ್ರಾಚೀನ ಕನ್ನಡವಾಙ್ಮಯವನ್ನೂ ಭಾಷೆಯನ್ನೂ ಪರಿಶೀಲಿಸುವುದಕ್ಕೆ ಜೈನರ ಈ ಧರ್ಮ ಪುರಾಣ ಗ್ರಂಥಗಳನ್ನೇ ಅವಲಂಬಿಸಬೇಕಾಗುವುದು. ಅವುಗಳಲ್ಲಿ ಬಂದ ಜೈನ ಧರ್ಮವಿಚಾರಗಳನ್ನು ತಿಳಿದುಕೊಂಡಹೊರತು ಆ ಗ್ರಂಥಗಳನ್ನು ಓದಿದಂತಾಗುವುದಿಲ್ಲ. ಜೈನಧರ್ಮ ವಿಚಾರಗಳನ್ನೇ ಮುಖ್ಯವಾಗಿ ತಿಳಿದುಕೊಳ್ಳುವುದಾದರೆ ಕನ್ನಡದಲ್ಲಿ ಸಾರತ್ರಯ (ಪಂಚಾಸ್ತಿಕಾಯ, ಸಮಯಸಾರ, ಪ್ರವಚನಸಾರ) ಪದಾರ್ಥ ಸಮುಚ್ಚಯ, ಗೋಮಟಸಾರ, ತತ್ತ್ವಾರ್ಥಸೂತ್ರವೃತ್ತಿ, ಜೀವಸಂಬೋಧನ ಮೊದಲಾದ ಗ್ರಂಥಗಳನ್ನೋದಬೇಕು.

ನಾನು ಸುಮಾರು ೨೨ ವರ್ಷಗಳ ಹಿಂದೆ ಮೈಸೂರಲ್ಲಿ ಪಂಡಿತಪರೀಕ್ಷೆಗೆ ಓದುತ್ತಿರುವಾಗ ಕೆಲವು ಜೈನಪುರಾಣಗಳ ವ್ಯಾಸಂಗವನ್ನು ಮಾಡಬೇಕಾಯಿತು.

ಆಗ ಆ ಪುರಾಣಗಳಲ್ಲಿ ಬಂದ ಜೈನಧರ್ಮಪ್ರಕ್ರಿಯೆಗಳ ಜ್ಞಾನವು ಸರಿಯಾಗಿ ಇಲ್ಲದುದರಿಂದ ಆ ಗ್ರಂಥಗಳ ಹಲವು ಭಾಗಗಳನ್ನು ನಿಷ್ಕೃಷ್ಟವಾಗಿ ತಿಳಿದು ಕೊಳ್ಳದೆ ಸುಮ್ಮನೆ ಓದಿದೆನು. ಜೈನಧರ್ಮದ ಸಾಮಾನ್ಯವಾದ ಕೆಲವು ವಿಚಾರಗಳನ್ನಾದರೂ ತಿಳಿದುಕೊಂಡಹೊರತು ಕನ್ನಡದಲ್ಲಿರುವ ಅತ್ಯುತ್ತಮ ವಾದ ಜೈನಪುರಾಣಗಳನ್ನು ಸರಿಯಾಗಿ ತಿಳಿದುಕೊಳ್ಳುವುದಕ್ಕಾಗುವುದಿಲ್ಲವೆಂದು ಆಗಲೇ ನನ್ನ ನಂಬುಗೆಯಾಯಿತು.

ಈಗ ಸುಮಾರು ೫-೬ ವರ್ಷಗಳ ಹಿಂದೆ ಜೈನಧರ್ಮ ಪ್ರಕ್ರಿಯೆಗಳನ್ನು ವಿವರಿಸುವ ಪ್ರಾಚೀನ ಕನ್ನಡ ವಾಙ್ಮಯವನ್ನು ಒದುವವರಿಗೆ ನೆರವಾಗು ವಹ ಪುಸ್ತಕವೊಂದನ್ನು ಬರೆಯಬೇಕೆಂದು ಪ್ರಯತ್ನಿಸಿದೆನು. ವಿದ್ಯಾರ್ಥಿ ದಸೆಯಲ್ಲಿ ಬರೆದಿಟ್ಟ ಕೆಲವು ಟಿಪ್ಪಣಿಗಳಷ್ಟೇ ನನ್ನ ಬಳಿಯಲ್ಲಿದ್ದುವು. ಅವುಗಳ ಸಹಾಯದಿಂದಲೂ ಇನ್ನೂ ಒಂದೆರಡು ಸಣ್ಣ ಪುಸ್ತಕಗಳ ಸಹಾಯದಿಂದಲೂ ಒಂದು ಚಿಕ್ಕ ಪುಸ್ತಕವನ್ನು ಬರೆದೆನು. ಆ ಪುಸ್ತಕವನ್ನು ಧಾರವಾಡದ ಕ. ವಿ. ವ. ಸಂಘದವರು ಪುರಸ್ಕರಿಸಿದರು. ಆದರೆ ಆ ಪುಸ್ತಕವನ್ನು ಅವರು ವಾಗ್ಭೂಷಣ ಮಾಸಪತ್ರಿಕೆಯಲ್ಲಿ ಪ್ರಕಟಿಸುವುದಕ್ಕೆ ತೊಡಗಿದಾಗ ಆ ಪುಸ್ತಕವು ಇದ್ದ ರೂಪದಲ್ಲಿಯೇ ಪ್ರಕಟಿತವಾದರೆ ಆಗತಕ್ಕಷ್ಟು ಪ್ರಯೋಜನ ವಾಗಲಾರದೆಂದು ತೋರಿತು. ಮತ್ತೆ ಕೆಲವು ಪುಸ್ತಕಗಳನ್ನು ನೋಡಿ ಆ ಪುಸ್ತ ಕವನ್ನು ಪರಿಷ್ಕರಿಸಬೇಕೆಂದು ಬಯಸಿದೆನು. ಆ ಹೊತ್ತಿಗೆ ಬೆಳಗಾವ ಡಿ. ತಿಗ ಡೊಳ್ಳಿಯ ಪಾಟೀಲರಾದ ಮು॥ ರಾ॥ ಶ್ರೀ. ಚಂದ್ರಕಾಂತ ನಿಂಗರಾಜ ಪಾಟೀಲ ರವರ ದರ್ಶನವಾಯಿತು. ಅವರು ನನ್ನ ಇಚ್ಛೆಯ ಮೇರೆಗೆ ಅನೇಕ ಪುಸ್ತಕಗ ಳನ್ನು ಕಳುಹಿದ್ದಲ್ಲದೆ ಇನ್ನೂ ಬೇಕಾದ ಪುಸ್ತಕಗಳನ್ನು ಕಳುಹುವೆನೆಂದು ಹೇಳಿ ದರು. ನನಗೆ ಮೊದಲಿನ ಪುಸ್ತಕವನ್ನು ಪರಿಷ್ಕರಿಸುವ ಮಾರ್ಗವನ್ನು ತೋರಿ ದರು; ನಾನು ಬರೆದ ಬಹುಭಾಗವನ್ನು ನೋಡಿ ಅಲ್ಲಲ್ಲಿ ತಕ್ಕ ಸೂಚನೆಗಳನ್ನು ಮಾಡಿದರು. ಅವರು ಕೊಟ್ಟ ಪುಸ್ತಕಗಳ ಸಹಾಯವೂ, ಪರಿಷ್ಕರಣ ಕಾರ್ಯ ದಲ್ಲಿ ಮಾಡಿದ ಸಹಾಯವೂ ನನಗೆ ದೊರೆಯದಿದ್ದರೆ ಈ ಪುಸ್ತಕವು ಪ್ರಕಟಿತ ವಾಗುತ್ತಿರಲಿಲ್ಲವೆಂದು ಹೇಳದಿರಲಾರೆನು. ಅವರು ಉದಾರ ಬುದ್ಧಿಯಿಂದ ನನ ಗಾಗಿ ಬಹು ವೇಳೆಯನ್ನು ವೆಚ್ಚಮಾಡಿ ನೆರವಾದುದಕ್ಕಾಗಿ ಪ್ರಕೃತಲೇಖಕನು ಆ ಧರ್ಮನಿಷ್ಠ ಸದ್ಗೃಹಸ್ಥರಿಗೆ ತುಂಬ ಋಣಿಯಾಗಿರುವನು.

ಈಗಲಾದರೂ ಪ್ರಕೃತಪುಸ್ತಕವು ಜೈನಧರ್ಮದ ಸಮಗ್ರವಿಚಾರಗಳನ್ನೊ ಳಗೊಂಡಿರುವುದೆಂದು ನಾನು ಹೇಳಲಾರೆನು. ಇದರಲ್ಲಿ ಬಂದಿರುವ ವಿಚಾರಗಳಿ ಗಿಂತ ಬಾರದಿರುವ ವಿಚಾರಗಳೇ ಹೆಚ್ಚಾಗಿ ಇರುವುವೆಂದು ನಾನು ಬಲ್ಲೆನು. ಆದರೂ ಕನ್ನಡ ವಾಙ್ಮಯದ ವ್ಯಾಸಂಗಿಗಳ ಉಪಯೋಗವನ್ನೇ ನಾನು ಮುಖ್ಯ

ವಾಗಿ ಇಟ್ಟುಕೊಂಡುದರಿಂದ ಅವರಿಗೆ ತಕ್ಕಮಟ್ಟಿಗೆ ಪ್ರಯೋಜನವಾದೀತೆಂದು ನಂಬಿರುವೆನು.

ಈ ಪುಸ್ತಕವನ್ನು ಬರೆಯುವುದರಲ್ಲಿ ಸಹಾಯಕಗಳಾದ ಶಾಸ್ತ್ರಸಾರ ಸಮುಚ್ಚಯ, ತತ್ತ್ವಾರ್ಥಸೂತ್ರ, ಪಂಚಾಸ್ತಿಕಾಯ ಸಮಯಸಾರ, ದ್ರವ್ಯಸಂಗ್ರಹ, 'ಜಿನವಾಣಿ' (ಮಾಸಪತ್ರಿಕೆ) ಮೊದಲಾದ ಗ್ರಂಥಗಳ ಕರ್ತೃಗಳಿಗೆ ಪ್ರಕೃತ ಲೇಖಕನು ಋಣಿಯಾಗಿರುವನು.

ಈ ಪುಸ್ತಕವನ್ನು ಸಂಭಾವನೆಯಿಂದ ಮನ್ನಿಸಿ ಪ್ರಕಟಿಸಿದ ಕ. ವಿ. ವ. ಸಂಘದ ಉಪಕಾರವು ಚಿರಸ್ಮರಣೀಯವಾಗಿದೆ.

೨ ವರ್ಷಗಳ ಪೂರ್ವದಲ್ಲಿ ಈ ಪುಸ್ತಕದಆರಂಭದ ಕೆಲವು ಪುಟಗಳ ಮುದ್ರಣವಾದ ಬಳಿಕ ಕೆಲವೊಂದು ವಿಘ್ನವೊದಗಲು ಮುದ್ರಣ ಕೆಲಸವು ಹಾಗೆಯೇ ಉಳಿದಿತ್ತು. ಮತ್ತೆ ಅದರ ಮುದ್ರಣಯೋಗವನ್ನೊದಗಿಸಿ ಪುಸ್ತಕವನ್ನು ಮುಗಿಸುವಂತೆ ಅನುಗ್ರಹಿಸಿದ ದಯಾಮಯ ಪರಮೇಶ್ವರನಿಗೆ ಅನಂತವಂದನೆಗಳು.

ತಾ. ೧೨-೯-೧೯೩೦
ಧಾರವಾಡ.

ಮ. ಪ್ರ. ಪೂಜಾರ.

# ಒಪ್ಪೋಲೆ.

| ಪುಟ. | ಸಾಲು. | ತಪ್ಪು. | ಒಪ್ಪು. |
|---|---|---|---|
| ೭ | ೧೬ | ಮನುಷಾದಿ | ಮನುಷ್ಯಾದಿ |
| ೧೬ | ೨೦ | ವ್ಯಾಕವಾದ | ವ್ಯಾಪಕವಾದ |
| ೨೩ | ೨೬ | ನಿಶ್ಚಯನಯಾಪೇಕ್ಷೆ | (ಅಶುದ್ಧ) ನಿಶ್ಚಯನಯಾಪೇಕ್ಷೆ |
| ೪೩ | ೧೪ | ೬೩ | ೧೭ |
| ೪೪ | ೨೯ | ೮೪೫೭೨೩ | ೮೪೯೭೦೨೩ |
| ೪೫ | ೨೯ | ೧೯೦ | ೭೯೦ |
| ೪೬ | ೨ | ೩ | ೪ |
| ,, | ೩ | ೩ | ೪ |
| ,, | ೫ | ೮ | ೩ |
| ,, | ೫ | ನಾಲ್ಕು | ೩ |
| | | ಮೇಲೆ | ಮೇಲೆ ಶುಕ್ರನು, ಶುಕ್ರನಿಂದ ೩ ಯೋಜನಗಳ ಮೇಲೆ |
| ,, | ೬ | ೧೯೦ | ೭೯೦ |
| ೪೮ | ೨೭ | ಅಚೀತನ | ಅಚೇತನ |
| ೫೨ | ೭, ೯, ೧೨ | ಆಧಾರಧೇಯ | ಆಧಾರಾಧೇಯ |
| ೬೯ | ೩ | ಧರ್ಮರ್ಮ | ಧರ್ಮ |
| ೬೭ | ೨೦ | ಅಣುವೃತ | ಅಣುವ್ರತ |
| ೬೮ | ೫ | ಆದಾನನಿಕ್ಷೇಪಣ | ಆದಾನನಿಕ್ಷೇಷಣ |
| ೭೧ | ೨೧ | ಯೋಗಗೂ | ಯೋಗಗಳೂ |
| ೮೭ | ೨೬ | ಸಂಘ, ಮನೋಜ್ಞ | ಸಂಘ, ಸಾಧು, ಮನೋಜ್ಞ |
| ೮೯ | | ಸ್ವೇಯ | ಸ್ತೇಯ |

| | | | |
|---|---|---|---|
| ೯೦ | ೨ | ತತ್ವಾರ್ಥಸಾರ | ತತ್ತ್ವಾರ್ಥಸೂತ್ರ |
| ೯೪ | ೭ | ಈಶ್ವರನಿಲ್ಲದಿದ್ದರೂ | ಈಶ್ವರರೆಂದೆಣಿಸಲ್ಪಟ್ಟ |
| ,, | ೨೬ | ನಿಷ್ವಯ | ನಿಶ್ಚಯ |
| ೯೬ | ೮ | ಮಾಡಲ್ಪವುವು | ಮಾಡಲ್ಪಡುವುವು |
| ೧೦೦ | ೧೧ | ಶುದ್ಧತ್ಮ | ಶುದ್ಧಾತ್ಮ |
| ೧೦೨ | ೧೯ | ಪುಣಕಾರಣ | ಪುಣ್ಯಕಾರಣ |
| ೧೦೪ | ೨೦ | ಖಡನೆ | ಖಂಡನೆ |
| ೧೦೫ | ೧೨ | ನಿಶಯ | ನಿಶ್ಚಯ |
| ೧೧೪ | ೧೧ | ಪರಮುಧ್ಯಾನಿ | ಪರಮಧ್ಯಾನಿ |
| ೧೧೫ | ೪ | ಸಮುಕ್ತ್ವ | ಸಮ್ಯಕ್ತ್ವ |
| ೧೧೮ | ೬ | ಸಂವರ | ಶಂಬರ |
| ,, | ೨೧ | ಜಯವಾಮೆ | ಜಯಶ್ಯಾಮೆ |
| ,, | ೨೩ | ಜಯಶ್ಯಾಮೆ | ಲಕ್ಷ್ಮೀಮತಿ |
| ,, | ೩೯ | ಅಶ್ವಸೇನ | ವಿಶ್ವಸೇನ |
| ,, | ,, | ವಾಮೆ | (ತ್ರಿಶಲಾ) |
| ೧೨೪ | ೩ | ಮಿತ್ರನಾನ | ಮಿತ್ರನಾದ |
| ೧೩೩ | ೧ | ಕರಣಾನುಯೋಗ | ಚರಣಾನುಯೋಗ |
| ೧೩೫ | ೧೨ | ಕಂದಲತೆ | ಕುಂದಲತೆ |

# ಜೈನಧರ್ಮ ಪರಿಭಾಷೆ.

## ಉಪೋದ್ಘಾತ.

### ಸಂಕ್ಷಿಪ್ತ ಜೈನ ಮತ ವಿಚಾರ.

ಜಿನರು ಪ್ರತಿಪಾದಿಸಿನ ಮತವು ಜೈನಮತವು. ಜಿನರು ಸರ್ವಜ್ಞರೂ, ರಾಗದ್ವೇಷಾದಿದೋಷರಹಿತರೂ, ತ್ರೀಲೋಕಪೂಜ್ಯರೂ, ಯಥಾರ್ಥವಾದಿಗಳೂ ಆಗಿರುವರು.

ಜಗತ್ತು, ಜೀವಾಜೀವಗಳೆಂಬ ಎರಡು ತತ್ತ್ವಗಳಿಂದ ಕೂಡಿದುದೆಂದು ಜೈನಮತವು ಹೇಳುವುದು. ಜೀವವೆಂಬುದು ಆತ್ಮವು, ಅಜೀವವೆಂಬುದು ಜೀವ ಭಿನ್ನ ಪದಾರ್ಥವು. ಅಜೀವತತ್ತ್ವವು ಪುದ್ಗಲ, ಧರ್ಮ, ಅಧರ್ಮ, ಆಕಾಶ, ಕಾಲ ಎಂದು ಐದು ಬಗೆಯಾಗಿದೆ. ಪುದ್ಗಲವೆಂಬುದು ಸಾಧಾರಣವಾಗಿ ಇಂಗ್ಲಿಶ್ ಭಾಷೆಯಲ್ಲಿ ಮ್ಯಾಟರ್ (Matter) ಎಂಬ ಶಬ್ದವು ಹೇಳುವ ಅರ್ಥವನ್ನು ಹೇಳುವುದು. ಪುದ್ಗಲಗಳು ಅಸಂಖ್ಯವಾಗಿವೆ. ಅವು ರೂಪ, ರಸ, ಗಂಧ, ವರ್ಣಗಳೆಂಬ ಗುಣಗಳಿಂದ ಕೂಡಿವೆ. ಶಬ್ದ, ಬಂಧ ಇಲ್ಲವೆ ಸೇರುವಿಕೆ, ಸೂಕ್ಷ್ಮತೆ, ಸ್ಥೂಲತೆ, ಆಕಾರ, ಭೇದ, ಕತ್ತಲೆ, ಬೆಳಕು, ನೆಳಲು, ಉಷ್ಣತೆ ಇವೆಲ್ಲವು ಪುದ್ಗಲಗಳ ಪರ್ಯಾಯಗಳು, ಎಂದರೆ ಪುದ್ಗಲಗಳಿಂದ ಉಂಟಾದಂತಹುವು. ಶಬ್ದ, ಬೆಳಕು, ಉಷ್ಣತೆ ಎಂಬಿವು ಪುದ್ಗಲಜನ್ಯಗಳೆಂದು ಜೈನರು ಹೇಳಿದುದರಲ್ಲಿ ಕೆಲಮಟ್ಟಿಗೆ ಆಧುನಿಕವಿಜ್ಞಾನದ ಸೂಚನೆಯನ್ನು ಕಾಣಬಹುದು. ನೆಳಲು ಕತ್ತಲೆಗಳು ಪೌದ್ಗಲಿಕಗಳೆಂದು ಹೇಳಿದುದು ನ್ಯಾಯಮತಕ್ಕೆ ವಿರೋಧವಾದುದು. ನೈಯಾಯಿಕರು ಅವು ಅಭಾವರೂಪವೆಂದು ಹೇಳುವರು.

**ಧರ್ಮ**— ಜೈನಮತದಲ್ಲಿ ಧರ್ಮವೆಂದರೆ ಪುಣ್ಯಕಾರ್ಯವೆಂಬುದೊಂದೇ ಅಲ್ಲ. ಇಂಗ್ಲಿಶ್‌ಭಾಷೆಯಲ್ಲಿ "ಪ್ರಿನ್ಸಿಪಲ್ ಆಫ್ ಮೋಶನ್" ಎಂದರೆ ಯಾವ ಅರ್ಥವೋ ಆ ಅರ್ಥದಲ್ಲಿಯೂ ಜೈನರು ಧರ್ಮ ಶಬ್ದವನ್ನು ಉಪಯೋಗಿಸುವರು. ಜಲವು ಗತಿಶೀಲವಾದ ಮೀನಿಗೆ ಅದರ ಗಮನಕ್ಕೆ ಸಹಾಯಕವಾಗಿರುವಂತೆ ಧರ್ಮವು ಪುದ್ಗಲಗಳಿಗೂ ಜೀವಕ್ಕೂ ಗತಿವಿಷಯದಲ್ಲಿ ಸಹಾಯಕವಾಗಿರುವುದು. ಧರ್ಮವು ಅಮೂರ್ತವೂ ನಿಷ್ಕ್ರಿಯವೂ ನಿತ್ಯವೂ ಆಗಿರುವುದು. ಇದು ಜೀವ, ಪುದ್ಗಲ ಇವುಗಳ ಗತಿಗೆ ಸಹಾಯಕವಷ್ಟೇ ಹೊರತು ಅವುಗಳ ಗತಿಯನ್ನುಂಟು ಮಾಡುವುದಲ್ಲ.

**ಅಧರ್ಮ**– ಜೈನ ಮತದಲ್ಲಿ ಧರ್ಮದಂತೆ ಅಧರ್ಮದ ವ್ಯಾಖ್ಯೆಯೂ ಬೇರೆಯಾಗಿದೆ; ಅಧರ್ಮವೆಂದರೆ ಪಾಪವೆಂಬುದೊಂದೇ ಅಲ್ಲ; ಪ್ರಿನ್ಸಿಪಲ್ ಆಫ್ ರೆಸ್ಟ್ ಎಂಬ ಅರ್ಥವನ್ನು ಅಧರ್ಮ ಶಬ್ದವು ಹೇಳುವುದು; ಇದಿರಿಗೆ ಕವಿದಿರುವ ಕತ್ತಲೆಯನ್ನು ಕಂಡು ದಾರಿತಪ್ಪಿದ ದಾರಿಕಾರನು ರಾತ್ರಿಯಲ್ಲಿ ಅಲ್ಲಿಯೇ ತಂಗುವನು. ಆತನು ತಂಗುವುದಕ್ಕೆ ಕತ್ತಲೆ ಹೇಗೆ ನಿಮಿತ್ತವೋ ಹಾಗೆ ಜೀವ, ಪುದ್ಗಲಗಳ ಸ್ಥಿತಿಗೆ (ಗತ್ಯಭಾವಕ್ಕೆ) ಸಹಾಯಕವಾದುದು ಅಧರ್ಮವು. ಧರ್ಮದಂತೆ ಅಧರ್ಮವೂ ಅಮೂರ್ತವೂ ನಿಷ್ಕ್ರಿಯವೂ ನಿತ್ಯವೂ ಆಗಿದೆ.

ಜೀವಾದಿ ಪದಾರ್ಥಗಳನ್ನು ತನ್ನೊಳಗೆ ಇಟ್ಟುಕೊಂಡುದು **ಆಕಾಶವು;** ಪಾಶ್ಚಾತ್ಯ ಶಾಸ್ತ್ರಜ್ಞರ ಸ್ಪೇಸ್ ಶಬ್ದವು ಹೇಳುವ ಅರ್ಥವನ್ನೇ ಆಕಾಶ ಶಬ್ದವು ಹೇಳುವುದು. ಆಕಾಶವು ನಿತ್ಯವೂ ವ್ಯಾಪಕವೂ ಜೀವ, ಪುದ್ಗಲ, ಧರ್ಮ, ಅಧರ್ಮ, ಕಾಲ ಇವುಗಳ ಆಶ್ರಯವೂ ಆಗಿದೆ. ಜೈನರು ಆಕಾಶದಲ್ಲಿ ಲೋಕಾಕಾಶವೆಂದೂ, ಅಲೋಕಾಕಾಶವೆಂದೂ ಎರಡು ಭಾಗಗಳನ್ನು ಹೇಳುವರು. ಜೀವಾದಿ ಪದಾರ್ಥಗಳಿರುವುದು ಲೋಕಾಕಾಶದಲ್ಲಿಯೇ. ಲೋಕಾಕಾಶದ ಸುತ್ತಲೂ ಅನಂತವೂ ಶೂನ್ಯವೂ ಆದ ಅಲೋಕಾಕಾಶವುಂಟು. ಪದಾರ್ಥಗಳ ಪರಿವರ್ತನಕ್ಕೆ ಸಹಾಯವಾದ ಅಜೀವತತ್ತ್ವವು **ಕಾಲ**ವೆನಿಸುವುದು. ಕಾಲವು ನಿತ್ಯವೂ ಅಮೂರ್ತವೂ, ಲೋಕಾಕಾಶ ಪರಿಪೂರ್ಣವೂ ಅಸಂಖ್ಯವೂ ಆದುದು.

ಜೀವನು ಕರ್ಮಲೇಪದಿಂದ ಮೇಲೆ ಹೇಳಿದ ಪುದ್ಗಲವೆಂಬ ಅಜೀವ ಪದಾರ್ಥದೊಡನೆ ಕೂಡಿಕೊಂಡು ಬದ್ಧಾವಸ್ಥೆಯಲ್ಲಿರುವನು.

**ಜೀವ**– ಜೈನರ ಜೀವ ಮತ್ತು ವೇದಾಂತಮತವು ಹೇಳುವ ಬ್ರಹ್ಮ ಇವೆರಡೂ ಒಂದೇ ಅಲ್ಲ. ಬ್ರಹ್ಮವು ಏಕವೂ ಅದ್ವಿತೀಯವೂ ಆದುದು. ಆದರೆ ಜೈನ ಮತದಲ್ಲಿ ಜೀವರು ಅಸಂಖ್ಯರು. ಜೀವ ಮತ್ತು ಸಾಂಖ್ಯರ ಪುರುಷ ಇವರು ಒಂದೇ ಅಲ್ಲ. ಏಕೆಂದರೆ ಜೀವನು ನಿತ್ಯಶುದ್ಧನೂ ನಿತ್ಯಮುಕ್ತನೂ ಅಲ್ಲ; ಜೀವನ ಬಂಧನವು ಸತ್ಯವು. ಜೈನರ ಜೀವ ಮತ್ತು ನ್ಯಾಯ ವೈಶೇಷಿಕರ ಆತ್ಮ ಇವು ಒಂದೇ ಅಲ್ಲ. ಏಕೆಂದರೆ ಜೈನ ಮತದ ಜೀವನು ಜಡನಲ್ಲ; ಸಾಕ್ಷಾತ್ಕರ್ತೃವು; ಜೈನರ ಜೀವ ಮತ್ತು ಬೌದ್ಧರ ಕ್ಷಣಿಕ ವಿಜ್ಞಾನ ಪ್ರವಾಹ ಇವೆರಡೂ ಒಂದೇ ಅಲ್ಲ. ಏಕೆಂದರೆ ಜೀವನು ಸದ್ರೂಪವೂ ಸತ್ಯವೂ ನಿತ್ಯವೂ ಆದ ಪದಾರ್ಥವು.

ಜೈನ ಮತವು ಸಂಸಾರಿಜೀವನಲ್ಲಿ ಅಸ್ತಿತ್ವ, ಚೇತನೆ, ಉಪಯೋಗ, ಪ್ರಭುತ್ವ, ಕರ್ತೃತ್ವ, ಭೋಕ್ತೃತ್ವ, ದೇಹಪರಿಮಾಣತ್ವ, ಅಮೂರ್ತತ್ವ ಎಂಬ ಗುಣಗಳನ್ನು ಹೇಳುವುದು.

ಜೈನರ ಪ್ರಾಚೀನ ಜೀವತತ್ತ್ವವಿಚಾರದಲ್ಲಿ ಪ್ರಾಣವಿದ್ಯೆ (Biology) ಯ ಒಂದೆರಡು ಈಗಿನ ಹೊಸಶೋಧಗಳು ಅಡಕವಾಗಿರುವುವೆಂದು ಕಾಣಬರುವುದು ಜೈನರು ಪೃಥ್ವೀ-ಜಲ-ವಾಯುಗಳಲ್ಲಿ ಸೂಕ್ಷ್ಮ-ಏಕೇಂದ್ರಿಯ ಜೀವಗಳುಂಟೆಂದು ಹೇಳುವರು. ಈಗಿನ ಪ್ರಾಣಿಶಾಸ್ತ್ರಜ್ಞರು ಈ ಸೂಕ್ಷ್ಮ-ಏಕೇಂದ್ರಿಯ ಜೀವಗಳನ್ನು "Microspic Organisms" ಎಂದು ಹೇಳುವರು. ಜೈನರು ಉದ್ಭಿಜ್ಜಗಳನ್ನೆಲ್ಲ ಏಕೇಂದ್ರಿಯ ಜೀವಗಳೆಂದು ಹೇಳುವರು. ಉದ್ಭಿಜ್ಜಗಳಲ್ಲಿ ಪ್ರಾಣವೂ, ಸ್ಪರ್ಶಾನುಭವಶಕ್ತಿಯೂ ಉಂಟು. ಜಗದೀಶಚಂದ್ರ ಬಸು ಮಹಾಶಯರು ಉದ್ಭಿಜ್ಜಗಳ ವಿಷಯವಾಗಿ ಕಂಡು ಹಿಡಿದ ವಿಚಾರಗಳು ಜೈನರ ಏಕೇಂದ್ರಿಯ ಜೀವ ವಿಚಾರದಲ್ಲಿ ಅಡಕವಾಗಿರುವುವು ಜೈನರ ಜೀವತತ್ತ್ವವಿಚಾರದಲ್ಲಿ ಮನಃಶಾಸ್ತ್ರದ (Psychology) ಹಲವು ಹೊಸವಿಚಾರಗಳು ಕಾಣಬರುವುವು. ಜೀವನ ಗುಣಗಳಲ್ಲಿ ಚೇತನೆ ಮತ್ತು ಉಪಯೋಗ ಇವು ಮುಖ್ಯವಾದುವು. ಅವುಗಳಲ್ಲಿ ಚೇತನೆಯು ಕರ್ಮಫಲಾನುಭೂತಿ, ಕಾರ್ಯಾನುಭೂತಿ ಜ್ಞಾನಾನುಭೂತಿ ಎಂದು ಮೂರು ಬಗೆಯಾಗಿದೆ. ಹರ್ಷವಿಷಾದಗಳ ನಿಶ್ಚೇಷ್ಟ-ಅನುಭೂತಿಯು ಕರ್ಮಫಲಾನುಭೂತಿಯು. ಲಕ್ಷ್ಯ ಬುದ್ಧಿಪರಿಚಾಲಿತ- ಕ್ರಿಯಾಶಕ್ತಿಯ ಅನುಭೂತಿಯು ಕಾರ್ಯಾನುಭೂತಿಯು. ಜ್ಞಾನದ ಅನುಭೂತಿಯು ಜ್ಞಾನಾನುಭೂತಿಯು. ಜೈನಮತದಲ್ಲಿ ಸ್ಥಾವರಜೀವಗಳು (ಎಂದರೆ ಪೃಥಿವಿ, ಅಗ್ನಿ ಜಲ, ವಾಯು, ವೃಕ್ಷಾದಿ ಏಕೇಂದ್ರಿಯಗಳು) ಕರ್ಮ ಫಲವನ್ನು ಮಾತ್ರ ಅನುಭವಿಸುವುವು. ತ್ರಸ ಜೀವಗಳಿಗೆ (ದ್ವೀಂದ್ರಿಯ, ತ್ರೀಂದ್ರಿಯ, ಚತುರಿಂದ್ರಿಯ, ಪಂಚೇಂದ್ರಿಯ ಜೀವಗಳಿಗೆ) ಸ್ವಕಾರ್ಯದ ಅನುಭವವಾಗುವುದು. ಉಚ್ಚವರ್ಗದ ತ್ರಸಗಳು ಜ್ಞಾನಾನುಭೂತಿಯುಳ್ಳವು. ಚೇತನೆಯ ಈ ಮೂರು ಪ್ರಕಾರಗಳನ್ನು ಪೂರ್ಣಚೈತನ್ಯದ ವಿಕಾಸದ ಮೂರು ಸ್ತರಗಳೆಂದು ಹೇಳಬಹುದು. ಮನುಷ್ಯೇತರ ಪ್ರಾಣಿಗಳು ಕೇವಲ ಅಚೇತನಯಂತ್ರ (Cartesian) ಗಳೆಂಬ ಪಾಶ್ಚಾತ್ಯರ ಮತವನ್ನು ಜೈನರು ಬಹು ಪ್ರಾಚೀನ ಕಾಲದಲ್ಲಿಯೇ ಖಂಡಿಸಿರುವರು. ಆಧುನಿಕ ಕ್ರಮವಿಕಾಸವಾದಿಯಾದ ಮನಃಶಾಸ್ತ್ರ (Evolutionary Psychology)ದಲ್ಲಿ ಹೇಳಿದ ಕೆಳಗಿನ ಎರಡು ಮೂಲ ತತ್ತ್ವಗಳು ಜೈನ ಮತದಲ್ಲಿ ಪೂರ್ವದಲ್ಲಿಯೇ ಹೇಳಲ್ಪಟ್ಟಿವೆಯೆಂದು ಹೇಳಬಹುದು. (೧) ಮನುಷ್ಯೇತರ ನಿಮ್ನಸ್ತರದ ಪ್ರಾಣಿಗಳಲ್ಲಿ ಕಾಣಬಹುದಾದ ಕಡಿಮೆ ತರಗತಿಯ ಚೈತನ್ಯ (Subhnman consciousness) ದಿಂದಲೇ ಮನುಷ್ಯಚೈತನ್ಯವು ಉಂಟಾಗಿರುವುದು. (೨) ಪ್ರಾಣನ ಮತ್ತು ಚೈತನ್ಯ ಇವು (Life and conseiousness ) ತಪ್ಪದೆ ಸಹಗಾಮಿಗಳು- Co- extensive)

**ಉಪಯೋಗ**- ಉಪಯೋಗವೆಂಬುದು ಜೀವನ ಎರಡನೆಯ ಲಕ್ಷಣವು. ಉಪಯೋಗವು ದರ್ಶನ, ಜ್ಞಾನ ಎಂದು ಎರಡು ಬಗೆಯಾಗಿದೆ.

**ದರ್ಶನ**- ರೂಪಾದಿ ವಿಶೇಷ ವಿಷಯಗಳ ಜ್ಞಾನವಿಲ್ಲದೆ ಉಂಟಾಗುವ ಸಾಮಾನ್ಯದ ಅನುಭೂತಿಯು ದರ್ಶನವು. ಇದು ಚಕ್ಷುರ್ದರ್ಶನ, ಅಚಕ್ಷುರ್ದರ್ಶನ, ಅವಧಿದರ್ಶನ, ಕೇವಲದರ್ಶನ ಎಂದು ನಾಲ್ಕುಬಗೆಯಾಗಿದೆ. ಚಾಕ್ಷುಷ ಅನುಭೂತಿಯೆಲ್ಲವೂ ಚಕ್ಷುರ್ದರ್ಶನವು. ಉಳಿದ ಇಂದ್ರಿಯಗಳ ಅನುಭೂತಿಯು ಅಚಕ್ಷುರ್ದರ್ಶನವು. ಸ್ಥೂಲೇಂದ್ರಿಯಗಳಿಗೆ ಅಗಮ್ಯವಾದ ವಿಷಯಗಳ ಅನುಭೂತಿಯು ಅವಧಿದರ್ಶನವು; ಇದು Theosophist ಮತದ Clairvoyance ಎಂಬುದನ್ನು ಹೋಲುವುದು. ವಿಶ್ವದೊಳಗಿನ ಎಲ್ಲ ವಸ್ತುಗಳ ಅಪರೋಕ್ಷ- ಅನುಭೂತಿಯು ಕೇವಲದರ್ಶನವು.

**ಜ್ಞಾನ**- ದರ್ಶನದ ತರುವಾಯ ಉಂಟಾಗುವ ಜ್ಞಾನವು ಉಪಯೋಗದ ಎರಡನೆಯ ಭೇದವು. ಜ್ಞಾನವು ಪ್ರತ್ಯಕ್ಷ ಮತ್ತು ಪರೋಕ್ಷ ಎಂದು ಎರಡು ಬಗೆಯಾಗಿದೆ. ಮತಿ, ಶ್ರುತ ಮುಂತಾದ ಎಂಟು ತರದ ಜ್ಞಾನಗಳೂ ಈ ಎರಡು ಜ್ಞಾನಗಳಲ್ಲಿಯೇ ಅಂತರ್ಗತವಾಗುವುವು. ಅವುಗಳಲ್ಲಿ ಕುಮತಿ ಎಂಬುದು ಮತಿಜ್ಞಾನದ, ಕುಶ್ರುತ ಎಂಬುದು ಶ್ರುತಜ್ಞಾನದ, ವಿಭಂಗ ಎಂಬುದು ಅವಧಿಜ್ಞಾನದ ಆಭಾಸಗಳು: ಎಂದರೆ Fallacious forms ಎಂದು ಹೇಳಬಹುದು. ಉಳಿದ ಐದು ತರದ ಜ್ಞಾನಗಳನ್ನು ಕೆಳಗೆ ಹೇಳುವೆವು.

**ಮತಿಜ್ಞಾನ**- ದರ್ಶನದ ತರುವಾಯವೇ ಉಂಟಾಗುವ, ಇಂದ್ರಿಯಜ್ಞಾನಾಪೇಕ್ಷವಾದ ಜ್ಞಾನವು ಮತಿಜ್ಞಾನವೆನಿಸುವುದು. ಇದು ಉಪಲಬ್ಧಿ, ಭಾವನೆ, ಉಪಯೋಗ ಎಂದು ಮೂರು ಬಗೆಯಾಗಿರುವುದು; ಈ ತ್ರಿವಿಧ ಮತಿಜ್ಞಾನವನ್ನೇ ಕೆಲವರು ಮತಿ, ಸ್ಮೃತಿ, ಸಂಜ್ಞಾ, ಚಿಂತೆ, ಅಭಿನಿಬೋಧ ಎಂಬೀ ಐದು ಬಗೆಯೆಂದು ಹೇಳುವರು.

**(ಶುದ್ಧ)ಮತಿ**- ದರ್ಶನದ ಅವ್ಯವಹಿತೋತ್ತರದಲ್ಲಿ ಉಂಟಾಗುವ ವೃತ್ತಿಗೆ ಉಪಲಬ್ಧಿ ಇಲ್ಲವೆ ಶುದ್ಧ ಮತಿಜ್ಞಾನವೆಂಬ ಹೆಸರು. ಪಾಶ್ಚಾತ್ಯ ಮನಃಶಾಸ್ತ್ರದಲ್ಲಿ ಇದಕ್ಕೆ Sense Instuition ಇಲ್ಲವೆ Perception ಎಂದು ಹೆಸರು. ಜೈನದಾರ್ಶನಿಕರು ಮತಿಜ್ಞಾನದಲ್ಲಿ ಇಂದ್ರಿಯನಿಮಿತ್ತಕವೆಂದೂ, ಅನಿಂದ್ರಿಯನಿಮಿತ್ತಕವೆಂದೂ ಎರಡು ಭೇದಗಳನ್ನು ಹೇಳುವರು. ಬಾಹ್ಯೇಂದ್ರಿಯಗಳ ಅಪೇಕ್ಷೆಯುಳ್ಳುದು ಇಂದ್ರಿಯನಿಮಿತ್ತಕವು; ಅನಿಂದ್ರಿಯವಾದುದು ಇಲ್ಲವೆ ಮನಸ್ಸಿನ ಅಪೇಕ್ಷೆಯುಳ್ಳುದು ಅನಿಂದ್ರಿಯನಿಮಿತ್ತಕವು. ದಾರ್ಶನಿಕನಾದ Locke ಎಂಬಾತನು ಹೇಳಿರುವ Idia of Sensation ಮತ್ತು Idia of

Reflection ಎಂಬ ಎರಡು ಚಿತ್ತವೃತ್ತಿಗಳು, ಮತ್ತು ಆಧುನಿಕ ದಾರ್ಶನಿಕರು Extraspection (ಬಹಿರನುಶೀಲನ) ಮತ್ತು Intorspection (ಅಂತರನುಶೀಲನ) ಇವುಗಳಿಂದ ಸಂಪಾದಿತವಾಗುವ ಜ್ಞಾನಗಳೆಂದು ಹೇಳಿದ ಜ್ಞಾನ ಇವುಗಳನ್ನೇ ಜೈನದಾರ್ಶನಿಕರು ಕ್ರಮದಿಂದ ಇಂದ್ರಿಯನಿಮಿತ್ತಕ, ಅನಿಂದ್ರಿಯನಿಮಿತ್ತಕ, ಮತಿಜ್ಞಾನಗಳೆಂದು ಹೇಳಿರಬಹುದು.

ಈ ಕಾಲದ ಶಾಸ್ತ್ರಜ್ಞರು Perception ದಲ್ಲಿ ಬೇರೆ ಬೇರೆ ಚಿತ್ತವೃತ್ತಿಗಳನ್ನು ಹೇಳಿರುವರು; ಜೈನಪಂಡಿತರು ಪ್ರಾಚೀನ ಕಾಲದಲ್ಲಿಯೇ ಮತಿಜ್ಞಾನದಲ್ಲಿ ಅವಗ್ರಹ, ಈಹೆ, ಅವಾಯ, ಧಾರಣೆ ಎಂಬ ನಾಲ್ಕು ಚಿತ್ತವೃತ್ತಿಗಳನ್ನು ಹೇಳಿರುವರು.

ಅವಗ್ರಹ– ಇಂದ್ರಿಯ ಅರ್ಥ ಇವುಗಳ ಸನ್ನಿಧಾನದಿಂದ ವಸ್ತು ಇರುವದೆಂಬ ತಿಳವಳಿಕೆಯು ಅವಗ್ರಹವು. ಇದು ಬಾಹ್ಯವಸ್ತುವಿನ ಕೇವಲ ಸಾಮಾನ್ಯಾಕಾರವನ್ನು ಬೋಧಿಸುವುದು. ಈ ಬಾಹ್ಯವಸ್ತುವಿನ ಸ್ವರೂಪ ವಿಷಯವಾಗಿ ಅವಗ್ರಹವು ಸುನಿಶ್ಚಿತವಾದ ಸವಿಶೇಷಜ್ಞಾನವನ್ನುಂಟುಮಾಡುವುದಿಲ್ಲ. ಇದು Sensation ದಂತೆ ಕೆಲಮಟ್ಟಿಗೆ Primum Cognitum ಎಂಬಂತೆ ಇರುವುದು.

ಈಹೆ– ಅವಗ್ರಹದಿಂದ ಗೃಹೀತವಾದ ವಿಷಯದಲ್ಲಿ ಈಹೆಯ ವ್ಯಾಪಾರವುಂಟಾಗುವುದು. ಅವಗ್ರಹ ಗೃಹೀತ ವಿಷಯವನ್ನು ಇನ್ನೂ ವಿಶೇಷ ರೂಪದಿಂದ ತಿಳಿದುಕೊಳ್ಳಬೇಕೆಂಬ ಇಚ್ಛೆಯೇ ಈಹೆಯು. ಇದು ಅವಗೃಹೀತ ವಿಷಯದಲ್ಲಿ ಪ್ರಣಿಧಾನವು. (Prceptual Attention)

ಅವಾಯ– ಪರಿಪೂರ್ಣ ಇಂದ್ರಿಯಜ್ಞಾನದ ಮೂರನೆಯ ಸ್ತರವು ಅವಾಯವು. ಈಹಿತವಿಷಯಸಂಬಂಧವಾದ ಸವಿಶೇಷಜ್ಞಾನವು ಅವಾಯವು. ಇದು Prceptual Determination.

ಧಾರಣೆ– ಧಾರಣೆಯು (Peceptual Retention) ಇಂದ್ರಿಯಜ್ಞಾನದ ವಿಷಯವನ್ನು ಸ್ಥಿತಿಶೀಲವಾಗಿ ಮಾಡುವುದು. ಎಂದರೆ ಆ ವಿಷಯವು ಜ್ಞಾನದಲ್ಲಿ ಉಳಿಯುವಂತೆ ಮಾಡುವುದು. ಧಾರಣೆಯಲ್ಲಿ ಬಂದ ಬಳಿಕ ಇಂದ್ರಿಯಜ್ಞಾನವು ಪರಿಪೂರ್ಣವಾಗುವುದು.

**ಸ್ಮೃತಿ**– ಇದು ಮತಿಜ್ಞಾನದ ಎರಡನೆಯ ಪ್ರಕಾರವು. ಇದು ಇಂದ್ರಿಯಜ್ಞಾನದ ವಿಷಯವನ್ನು ಸ್ಮರಣಪಥಕ್ಕೆ ತರುವುದು. ಪಾಶ್ಚಾತ್ಯ ಶಾಸ್ತ್ರದಲ್ಲಿ ಸ್ಮೃತಿಗೆ Recollection ಮತ್ತು Recognition ಎಂದು ಹೇಳುವರು.

**ಸಂಜ್ಞೆ**– ಇದಕ್ಕೆ ಪ್ರತ್ಯಭಿಜ್ಞೆ ಎಂದೂ ಹೆಸರುಂಟು. ಪಾಶ್ಚಾತ್ಯ ಮನಃಶಾಸ್ತ್ರದಲ್ಲಿ ಇದನ್ನು Assimilation Comparison ಇಲ್ಲವೆ Concept-

ion ಎಂದೂ ಹೇಳುವರು. ಅನುಭೂತಿ, ಸ್ಮೃತಿ ಇವುಗಳ ಸಹಾಯದಿಂದ ವಿಷಯಗಳ ತುಲನೆಮಾಡಿ ಇಲ್ಲವೆ ಸಂಕಲನಮಾಡಿ ಜ್ಞಾನಸಂಗ್ರಹ ಮಾಡುವುದು ಪ್ರತ್ಯಭಿಜ್ಞೆ ಎನಿಸುವುದು. ಈ ಪ್ರತ್ಯಭಿಜ್ಞೆಯ ಸಹಾಯದಿಂದ ನಾಲ್ಕು ತರದ ಜ್ಞಾನವನ್ನು ಸಂಪಾದಿಸಬಹುದು.

(೧) "ಗವಯವು (ಕಾಡಾಕಳು) ಗೋಸದೃಶವು;" ಪಾಶ್ಚಾತ್ಯಶಾಸ್ತ್ರದಲ್ಲಿ ಈ ಜ್ಞಾನವನ್ನು Association by Similarity ಎಂದು ಹೇಳುವರು. (೨) ಮಹಿಷವು ಗೋವಿಸದೃಶವು. ಇದನ್ನು ಪಾಶ್ಚಾತ್ಯ ಶಾಸ್ತ್ರದಲ್ಲಿ Association by Contrast ಎಂದು ಹೇಳುವರು. (೩) ಗೋಪಿಂಡಗಳನ್ನು ಎಂದರೆ ಗೋವಿಶೇಷಗಳನ್ನು ನೋಡಿ ನೋಡಿ ಗೋತ್ವದ ಎಂದರೆ ಗೋಸಾಮಾನ್ಯದ (ಜಾತಿಯ) ಜ್ಞಾನವಾಗುವುದು. ಈ ಸಾಮಾನ್ಯದ ಜ್ಞಾನವನ್ನು ಪಾಶ್ಚಾತ್ಯದರ್ಶನಗಳಲ್ಲಿ Conception ಎಂದು ಹೇಳುವರು. ಭಿನ್ನ ಭಿನ್ನ ವಿಷಯಗಳಲ್ಲಿರುವ ಸಾಮಾನ್ಯವನ್ನು ಜೈನದಾರ್ಶನಿಕರು ತಿರ್ಯಕ್ಸಾಮಾನ್ಯವೆಂದು ಹೇಳುವರು. ತಿರ್ಯಕ್ಸಾಮಾನ್ಯಕ್ಕೆ ಪಾಶ್ಚಾತ್ಯದರ್ಶನಗಳಲ್ಲಿ Species Idea ಎಂಬ ಹೆಸರು. (೪) ಒಂದೇ ಪದಾರ್ಥದ ಭಿನ್ನ ಭಿನ್ನ ಪರಿಣಾಮಗಳಲ್ಲಿ ಆ ಒಂದೇ ಅದ್ವಿತೀಯ ಪದಾರ್ಥದ ಉಪಲಬ್ಧಿಯುಂಟಾಗುವುದು. ಸುವರ್ಣವು ಕಟಕಕುಂಡಲಾದಿ ಭಿನ್ನ ಭಿನ್ನ ಅಲಂಕಾರರೂಪವಾಗಿ ಪರಿಣತವಾದರೂ ಪ್ರತ್ಯಭಿಜ್ಞೆಯಿಂದ ಕಟಕಕುಂಡಲಾದಿಗಳ ಮೂಲದಲ್ಲಿ ನಾವು ಆ ಸುವರ್ಣ ಪದಾರ್ಥವೊಂದನ್ನೇ ಕಾಣುವೆವು. ಈ ಭಿನ್ನ ಪರಿಣಾಮಗಳಲ್ಲೆಲ್ಲ ಈ ದ್ರವ್ಯಗತ ಸಾಮಾನ್ಯವನ್ನು ಇಲ್ಲವೆ ಏಕತ್ವವನ್ನು ಜೈನದಾರ್ಶನಿಕರು ಊರ್ಧ್ವತಾಸಾಮಾನ್ಯವೆಂದು ಹೇಳುವರು. ಊರ್ಧ್ವತಾಸಾಮಾನ್ಯವನ್ನು ಪಾಶ್ಚಾತ್ಯರು Substratum ಇಲ್ಲವೆ Esse ಎನ್ನುವರು.

**ಚಿಂತೆ–** ಚಿಂತೆ ಎಂಬುದಕ್ಕೆ ಸಾಮಾನ್ಯವಾಗಿ ಊಹೆ, ತರ್ಕ ಎಂಬ ಪ್ರತಿಶಬ್ದಗಳುಂಟು. ಪ್ರತ್ಯಭಿಜ್ಞೆಯಿಂದ ಗೃಹೀತವಾದ ಎರಡು ವಿಷಯಗಳಲ್ಲಿ ಅಚ್ಛೇದ್ಯಸಂಬಂಧವನ್ನು ಕಂಡುಹಿಡಿಯುವುದು ತರ್ಕವೆನಿಸುವುದು. ಪಾಶ್ಚಾತ್ಯಮನಃಶಾಸ್ತ್ರದಲ್ಲಿ ತರ್ಕಕ್ಕೆ Induction ಎಂಬ ಹೆಸರು. ಯುರೋಪೀಯ ತರ್ಕಶಾಸ್ತ್ರಜ್ಞರ ಮತದಂತೆ Induction ಎಂಬುದು Observation ಎಂದರೆ ಭೂಯೋದರ್ಶನದ ಫಲವು. ಜೈನನೈಯಾಯಿಕರು ಕೂಡ ಉಪಲಬ್ಧ ಮತ್ತು ಅನುಪಲಬ್ಧ ಇವುಗಳಿಂದ ತರ್ಕವುಂಟಾಗುವುದೆಂದು ಇದನ್ನೇ ಹೇಳಿರುವರು. ಪಾಶ್ಚಾತ್ಯತಾರ್ಕಿಕರು Inductive Truth ಎಂಬುದನ್ನು ಕೆಲವುಸಲ Invariable ಮತ್ತು Unconditional Relationship ಎಂದು ಹೇಳುವರು. ಜೈನಾಚಾರ್ಯರು ಪ್ರಾಚೀನಕಾಲದಲ್ಲಿಯೇ ಈ ಮಾತನ್ನು ಹೇಳಿರುವರು. ಆ

ವರೂ ತರ್ಕಲಬ್ಧವಾದ ಸಂಬಂಧವನ್ನು ಅವಿನಾಭಾವನೆಂದೂ ಅನ್ಯಥಾನುಪಪತ್ತಿಯೆಂದೂ ಹೇಳುವರು.

**ಅಭಿನಿಬೋಧ**- ತರ್ಕಲಬ್ಧ ವಿಷಯಗಳ ಸಹಾಯದಿಂದ ಬೇರೆ ವಿಷಯಗಳ ಜ್ಞಾನವಾಗುವುದು ಅಭಿನಿಬೋಧವು. ಅಭಿನಿಬೋಧವನ್ನು ಸಾಮಾನ್ಯವಾಗಿ ಅನುಮಾನವೆಂದು ಹೇಳುವರು. ಪಾಶ್ಚಾತ್ಯ ನ್ಯಾಯಗ್ರಂಥಗಳಲ್ಲಿ ಅನುಮಾನವನ್ನು Deduction, Ratiocination ಇಲ್ಲವೆ Syllogism ಎಂದು ಹೇಳುವರು. ಪರ್ವತವು ವಹ್ನಿಯುಳ್ಳದು; ಏಕೆಂದರೆ ಆದರಲ್ಲಿ ಧೂಮವು ಕಾಣಿಸುವುದು. ಈ ತರದ ಜ್ಞಾನವು ಅನುಮಾನವೆನಿಸುವುದು. ಇದರಲ್ಲಿ ಪರ್ವತವು ಪಕ್ಷವು; ವಹ್ನಿಯು ಸಾಧ್ಯವು; ಧೂಮವು ಹೇತು ಇಲ್ಲವೆ ಲಿಂಗವು. ಪಾಶ್ಚಾತ್ಯ ನ್ಯಾಯಗ್ರಂಥಗಳಲ್ಲಿಯೂ Syllogism ದಲ್ಲಿ ಈ ಮೂರನ್ನು ಹೇಳಿರುವರು. ಅವುಗಳಿಗೆ ಕ್ರಮವಾಗಿ Minor Term, Major Term, Middle Term ಎಂಬ ಹೆಸರುಗಳುಂಟು. ಅನುಮಾನಕ್ಕೆ ವ್ಯಾಪ್ತಿಜ್ಞಾನವೇ ಮುಖ್ಯ ಕಾರಣವು. ಧೂಮವಹ್ನಿಗಳಿಗಿರುವಂತೆ ಇರುವ ಅವಿನಾಭಾವಸಂಬಂಧವನ್ನೇ ವ್ಯಾಪ್ತಿಯೆಂದು ಹೇಳುವರು. ಈ ವ್ಯಾಪ್ತಿವಿಚಾರವು ಪಾಶ್ಚಾತ್ಯನ್ಯಾಯಶಾಸ್ತ್ರದಲ್ಲಿ Distribution of the Middle Term ಎಂಬುದರಲ್ಲಿ ಅಡಕವಾಗಿದೆ. ಜೈನಮತದಲ್ಲಿ ಸ್ವಾರ್ಥಾನುಮಾನ, ಪರಾರ್ಥಾನುಮಾನ ಎಂದು ಅನುಮಾನವು ಎರಡು ಬಗೆಯಾಗಿದೆ. ಅನುಮಾಪಕನು ತಾನು ಯಾವುದೊಂದು ಅನುಮಾನದಿಂದ ಯಾವುದೊಂದು ವಿಷಯವನ್ನು ಕಂಡುಹಿಡಿದರೆ ಅದು ಸ್ವಾರ್ಥಾನುಮಾನವು. ಆ ಅನುಮಾಪಕನು ಆ ವಿಷಯವನ್ನು ಭಾಷೆಯಿಂದ ಇನ್ನೊಬ್ಬನಿಗೆ ತಿಳುಹಿದರೆ ಅದು ಪರಾರ್ಥಾನುಮಾನವು. ಗ್ರೀಕದಾರ್ಶನಿಕನಾದ ಅರಿಸ್ಟಾಟಲನು ಅನುಮಾನದಲ್ಲಿ ಮೂರು ಅವಯವಗಳನ್ನು ಹೇಳಿರುವನು. ಅವು ಯಾವುವೆಂದರೆ, (೧) ಯಾವಯಾವುದು ಧೂಮವುಳ್ಳದೋ ಅದು ಅದು ವಹ್ನಿಯುಳ್ಳದು; (೨) ಈ ಪರ್ವತವು ಧೂಮವುಳ್ಳದು; (೩) ಆದುದರಿಂದಲೇ ಈ ಪರ್ವತವು ವಹ್ನಿಯುಳ್ಳದು. ಬೌದ್ಧರು ಅನುಮಾನದಲ್ಲಿ ಮುಂದೆ ಹೇಳುವ ಮೂರು ಅವಯವಗಳನ್ನು ಹೇಳುವರು (೧) ಯಾವಯಾವುದು ಧೂಮವುಳ್ಳದೋ ಅದು ಅದು ವಹ್ನಿಯುಳ್ಳದು; (೨) ಉದಾಹರಣೆಗಾಗಿ ಮಹಾನಸವು (ಅಡಿಗೆ ಮನೆ) (೩) ಈ ಪರ್ವತವು ಧೂಮವುಳ್ಳದು. ಮೀಮಾಂಸಕರಲ್ಲಿಯೂ ಅನುಮಾನವು ಮೂರು ಅವಯವಗಳುಳ್ಳದು. ಆ ಅವಯವಗಳು ಮುಂದೆ ಹೇಳುವ ಎರಡು ವಿಧವಾಗಿರುವುವು. ಒಂದನೆಯ ಪ್ರಕಾರ- [೧] ಈ ಪರ್ವತವು ವಹ್ನಿಯುಳ್ಳದು. [೨] ಏಕೆಂದರೆ ಈ ಪರ್ವತವು ಧೂಮವುಳ್ಳದು; [೩] ಯಾವಯಾವುದು ಧೂಮವುಳ್ಳದೋ ಅದು ಅದು ವಹ್ನಿಯುಳ್ಳದು. ಉದಾಹರಣೆ ಮಹಾ

ನಸವು. ಎರಡನೆಯ ಪ್ರಕಾರ– [೧] ಯಾವಯಾವುದು ಧೂಮವುಳ್ಳದೋ ಅದು ಅದು ವಹ್ನಿಯುಳ್ಳದು. ಉದಾಹರಣೆ ಮಹಾನಸವು. [೨] ಈ ಪರ್ವತವು ಧೂಮವುಳ್ಳದು; [೩] ಆದುದರಿಂದ ಈ ಪರ್ವತವು ವಹ್ನಿಯುಳ್ಳದು. ನೈಯಾಯಿಕರು ಅನುಮಾನದಲ್ಲಿ ಐದು ಅವಯವಗಳನ್ನು ಹೇಳುವರು. ಹೇಗೆಂದರೆ– [೧] ಈ ಪರ್ವತವು ವಹ್ನಿಯುಳ್ಳದು; [೨] ಏಕೆಂದರೆ ಈ ಪರ್ವತವು ಧೂಮವುಳ್ಳದು. [೩] ಯಾವಯಾವುದು ಧೂಮವುಳ್ಳದೋ ಅದು ಅದು ವಹ್ನಿಯುಳ್ಳದು. ಉದಾಹರಣೆ ಮಹಾನಸವು. [೪] ಈ ಪರ್ವತವು ಧೂಮವುಳ್ಳದು; [೫] ಆದುದರಿಂದ ಈ ಪರ್ವತವು ವಹ್ನಿಯುಳ್ಳದು; ಅನುಮಾನದ ಈ ಐದು ಅವಯವಗಳನ್ನು ಕ್ರಮವಾಗಿ ಪ್ರತಿಜ್ಞೆ, ಹೇತು, ಉದಾಹರಣ, ಉಪನಯ, ನಿಗಮನ ಎಂದು ಹೇಳುವರು. ಜೈನಮತದಂತೆ ಉದಾಹರಣ, ಉಪನಯ, ನಿಗಮನಗಳು ನಿರರ್ಥಕಗಳು. ಜೈನರಲ್ಲಿ ಅನುಮಾನಕ್ಕೆ ಎರಡೇ ಅವಯವಗಳು. [೧] ಈ ಪರ್ವತವು ವಹ್ನಿಯುಳ್ಳದು. [೨] ಏಕೆಂದರೆ ಈ ಪರ್ವತವು ಧೂಮವುಳ್ಳದು. ಬುದ್ಧಿಶಾಲಿಯು ಈ ಎರಡು ಅವಯವಗಳಿಂದಲೇ ಅನುಮಾನ ವಿಷಯವನ್ನು ಅರಿಯಬಲ್ಲನೆಂದೂ ಆದುದರಿಂದಲೇ ಅನುಮಾನದ ಬೇರೆ ಅವಯವಗಳು ವ್ಯರ್ಥವೆಂದೂ ಜೈನರು ಹೇಳುವರು. ಆದರೂ ಶ್ರೋತಾರನು ಅಲ್ಪಬುದ್ಧಿಯಾಗಿರುವಲ್ಲಿ ಅವರು ನೈಯಾಯಿಕರ ಪಂಚಾವಯವಗಳನ್ನು ಸ್ವೀಕರಿಸುವರು; ಇಷ್ಟೇ ಅಲ್ಲ; ಪ್ರತಿಜ್ಞಾಶುದ್ಧಿ, ಹೇತುಶುದ್ಧಿ, ಮೊದಲಾದ ಇನ್ನೂ ಐದು ಅವಯವಗಳನ್ನು ಕಂಡುಹಿಡಿದು, ಅನುಮಾನವು ದಶಾವಯವವೆಂದೂ ಹೇಳಿರುವರು.

**ಶ್ರುತಜ್ಞಾನ**– ಅನುಮಾನದವರೆಗೆ ಹೇಳಿದ ಜ್ಞಾನವು ಮತಿಜ್ಞಾನವು. ಎಂದರೆ ಇಂದ್ರಿಯ ಸಂಶ್ಲಿಷ್ಟವಾದುದು. ಶ್ರುತಜ್ಞಾನವು ನಿತ್ಯಸತ್ಯದ ಭಾಂಡಾರವು. ಅದು ನಮ್ಮ ಇಂದ್ರಿಯಗಳಿಗೆ ಸಂಬಂಧಿಸಿದುದಲ್ಲ. ಇದನ್ನು ಆಗಮವೆಂದು ಹೇಳುವರು. ಜೈನರು ಋಗ್ವೇದಾದಿ ಚತುರ್ವೇದಗಳನ್ನು ಆಗಮಗಳೆಂದು [ಪ್ರಮಾಣವೆಂದು] ಹೇಳುವುದಿಲ್ಲ. ಅವರಲ್ಲಿ ಸರ್ವಜ್ಞರಾದ ತೀರ್ಥಂಕರರ ವಚನಸಮೂಹಗಳೇ ಆಗಮಗಳು. ಜೈನರು ತಮ್ಮ ಆಗಮಗಳನ್ನು ವೇದಗಳೆಂದು ಹೇಳುವರು. ಅವರು ತಮ್ಮ ವೇದಗಳನ್ನು ನಾಲ್ಕು ಭಾಗವಾಗಿ ವಿಂಗಡಿಸಿರುವರು. ಮತಿಜ್ಞಾನದಲ್ಲಿ ಅವಗ್ರಹ ಮೊದಲಾದ ನಾಲ್ಕು ಭಾಗಗಳನ್ನು ಹೇಳಿರುವಂತೆ ಶ್ರುತಜ್ಞಾನದಲ್ಲಿಯೂ ಲಬ್ಧಿ, ಭಾವನೆ, ಉಪಯೋಗ, ನಯ ಎಂದು ನಾಲ್ಕು ಪ್ರಕಾರಗಳನ್ನು ಹೇಳಿರುವರು.

**ಲಬ್ಧಿ**– ಯಾವುದೊಂದು ವಸ್ತುವನ್ನು ಅದರೊಡನೆ ಸಂಬಂಧವಿರುವ ಯಾವುದೊಂದು ವಿಷಯದ ಸಹಾಯದಿಂದ ನಿರ್ದೇಶಿಸುವುದು ಲಬ್ಧಿಯೆನಿಸುವುದು.

ಭಾವನೆ:- ಯಾವುದೊಂದು ವಿಷಯವನ್ನು ಮೊದಲು ನಿರ್ಣಯಿಸಲ್ಪಟ್ಟ ಬೇರೊಂದು ವಿಷಯದ ಸ್ವರೂಪ ಪ್ರಕೃತಿಯು ಇಲ್ಲವೆ ಕ್ರಿಯೆಯ ಸಹಾಯದಿಂದ ನಿರೂಪಿಸುವ ಪ್ರಯತ್ನ ಮಾಡುವುದು ಭಾವನೆಯೆನಿಸುವುದು. ಭಾವನೆಯು ವಿಷಯನಿರೂಪಣದ ಶ್ರೇಷ್ಠಪದ್ಧತಿಯು. ಇದು ಪದಾರ್ಥವನ್ನೂ ಅದರ ಸಂಬಂಧವನ್ನೂ ಕೂಲಂಕಷವಾಗಿ ವಿಚಾರಮಾಡಿ ಪ್ರತಿಪಾದ್ಯ ವಿಷಯದ ನಿರೂಪಣವನ್ನು ಮಾಡುವುದು.

ಉಪಯೋಗ- ಭಾವನೆಯನ್ನು ಪ್ರಯೋಗಿಸಿ ಪದಾರ್ಥದ ಸ್ವರೂಪವನ್ನು ನಿರ್ದೇಶಿಸುವುದು ಉಪಯೋಗವೆನಿಸುವುದು.

**ನಯ**- ಭಾರತೀಯ ದರ್ಶನಗಳಲ್ಲಿ ನಯವಿಚಾರವು ಜೈನದರ್ಶನದ ವಿಶಿಷ್ಟತ್ವವು. ಪದಾರ್ಥದ ಸಂಪೂರ್ಣತೆಯ ಕಡೆಗೆ ಅಷ್ಟೊಂದು ಲಕ್ಷವನ್ನಿಡದೆ ಪ್ರಮಾತೃವಿನ ಅಭಿಪ್ರಾಯಕ್ಕೆ ವಿಷಯವಾದ ಯಾವುದೊಂದೇ ಭಾವವನ್ನು ಅನುಲಕ್ಷಿಸಿ ವಿಷಯವನ್ನು ನಿರೂಪಿಸುವುದು ನಯವೆನಿಸುತ್ತದು. ಅದು ದ್ರವ್ಯಾರ್ಥಿಕನಯವೆಂದೂ ಪರ್ಯಾಯಾರ್ಥಿಕನಯವೆಂದೂ ದ್ವಿವಿಧವಾಗಿದೆ. ದ್ರವ್ಯಾರ್ಥಿಕನಯಕ್ಕೆ ದ್ರವ್ಯವೂ, ಪರ್ಯಾಯಾರ್ಥಿಕನಯಕ್ಕೆ ಪರ್ಯಾಯವೂ ವಿಷಯಗಳು. ದ್ರವ್ಯಾರ್ಥಿಕನಯವು ನೈಗಮ, ಸಂಗ್ರಹ, ವ್ಯವಹಾರ ಎಂದು ಮೂರು ಬಗೆಯಾಗಿದೆ; ಮತ್ತು ಪರ್ಯಾಯಾರ್ಥಿಕನಯವು ಋಜುಸೂತ್ರ, ಶಬ್ದ, ಸಮಭಿರೂಢ, ಏವಂಭೂತ ಎಂದು ನಾಲ್ಕು ಬಗೆಯಾಗಿದೆ.

**ನೈಗಮ**- ವಸ್ತುವಿನ ಸ್ವರೂಪವನ್ನು ವಿವೇಚಿಸದೆ ಯಾವುದೊಂದು ಬಾಹ್ಯ ವಿಷಯದ ಸಂಬಂಧದಿಂದ ವಿಚಾರ ಮಾಡುವುದು ನೈಗಮವು. ಕಟ್ಟಿಗೆ, ನೀರು, ಅಕ್ಕಿ ಮೊದಲಾದ ಉಪಕರಣಗಳನ್ನಿಟ್ಟುಕೊಂಡಿರುವ ಮನುಷ್ಯನನ್ನು ಕುರಿತು ನೀನು ಏನು ಮಾಡುವೆ ಎಂದು ಕೇಳಿದರೆ ಆತನು ಅನ್ನವನ್ನು ಮಾಡುತ್ತೇನೆ ಎಂದು ಹೇಳುವನು. ಈ ಉತ್ತರವು ನೈಗಮನಯವನ್ನನುಸರಿಸಿರುವುದು. ಇಲ್ಲಿ ಕೆಲಸದಲ್ಲಿ ತೊಡಗಿಸಿದ ಕಟ್ಟಿಗೆ, ನೀರು, ಬೆಂಕಿ ಮೊದಲಾದ ಉಪಕರಣಗಳನ್ನು ಸ್ವರೂಪದಿಂದ ನಿರ್ದೇಶಮಾಡದೆ ಅವು ಯಾವ ಉದ್ದೇಶದಿಂದ ತೊಡಗಿಸಲ್ಪಟ್ಟಿವೆಯೋ ಆ ಉದ್ದೇಶವನ್ನನುಲಕ್ಷಿಸಿ ಹೇಳಲ್ಪಟ್ಟಿವೆ.

**ಸಂಗ್ರಹ**- ವಸ್ತುವಿನ ವಿಶೇಷ ಧರ್ಮದ ಕಡೆಗೆ ಲಕ್ಷವನ್ನಿಡದೆ ಯಾವ ಭಾವದ ಸಂಬಂಧದಿಂದ ಈ ವಸ್ತುವು ಆ ಜಾತಿಯ ಬೇರೆ ವಸ್ತುಗಳಿಗೆ ಸಮಾನವಾಗುವದೋ ಅಂತಹ ಸಾಮಾನ್ಯ ಧರ್ಮದ ಕಡೆಗೆ ಲಕ್ಷವನ್ನಿಡುವುದೇ ಸಂಗ್ರಹನಯವು. ಸಂಗ್ರಹನಯಕ್ಕೂ ಪಾಶ್ಚಾತ್ಯರ Classification ಎಂಬುದಕ್ಕೂ ಹೋಲಿಕೆಯುಂಟು.

**ವ್ಯವಹಾರ**– ಸಂಗ್ರಹ ನಯಕ್ಕೆ ವಿರುದ್ಧವಾದುದು ವ್ಯವಹಾರ ನಯವು. ವಸ್ತುವಿನ ಸಾಮಾನ್ಯಭಾವವನ್ನು ಅಲಕ್ಷಿಸಿ ವೈಶಿಷ್ಟ್ಯವನ್ನನುಲಕ್ಷಿಸುವುದೇ ವ್ಯವಹಾರನಯವು. ಪಾಶ್ಚಾತ್ಯದರ್ಶನಗಳಲ್ಲಿ ಇದನ್ನು Specification ಇಲ್ಲವೆ Individuation ಎಂದು ಹೇಳುವರು.

**ಋಜುಸೂತ್ರ**– ವಸ್ತುವಿನ ಪರಿಧಿಯನ್ನು ಇನ್ನೂ ಸಂಕೋಚಪಡಿಸಿ ಅದರ ತಾತ್ಕಾಲಿಕ ಅವಸ್ಥೆಯನ್ನನುಲಕ್ಷಿಸಿ ಅದನ್ನು ನಿರ್ದೇಶಿಸುವುದು ಋಜುಸೂತ್ರವು.

**ಶಬ್ದ** – ಈನಯವೂ ಮುಂದೆ ಹೇಳುವ ಎರಡು ನಯಗಳೂ ಶಬ್ದದ ಅರ್ಥವಿಚಾರವನ್ನು ಕುರಿತಿರುವುವು. ಶಬ್ದನಯವು ಶಬ್ದದಲ್ಲಿ ಅತ್ಯಂತವ್ಯಾಪಕವಾದ ಅರ್ಥವನ್ನು ಆರೋಪಿಸುವುದು. ಏಕಾರ್ಥವಾಚಕವಾದ ಹಲವು ಶಬ್ದಗಳು ಲಿಂಗ, ರಚನೆ ಮೊದಲಾದುವುಗಳಿಂದ ಭಿನ್ನವಾಗಿದ್ದರೂ ಒಂದೇ ಅರ್ಥವನ್ನು ಪ್ರಕಾಶಗೊಳಿಸುವುವೆಂಬುದು ಶಬ್ದನಯದ ಅಭಿಮತವು.

**ಸಮಭಿರೂಢ**· ಸಮಭಿರೂಢನಯವು ಪ್ರತಿಯೊಂದು ಶಬ್ದದ ಮೂಲಧಾತುವನ್ನು ತೋರ್ಪಡಿಸಿ ಏಕಾರ್ಥವಾಚಕವಾದ ಹಲವು ಶಬ್ದಗಳು ನಿಜವಾಗಿ ಭಿನ್ನಾರ್ಥವಾಚಕಗಳೆಂದು ತೋರಿಸುವುದು. ಶಕ್ರ, ಪುರಂದರ ಎಂಬ ಶಬ್ದಗಳು ಶಬ್ದನಯಾನುಸಾರವಾಗಿ ಏಕಾರ್ಥವಾಚಕಗಳು. ಆದರೆ ಸಮಭಿರೂಢನಯಾನುಸಾರವಾಗಿ ಶಕ್ತಿ ಶಾಲಿಯಾದ ಪುರುಷನು ಶಕ್ರನು, ಮತ್ತು ಪುರವಿದಾರಣಮಾಡುವವನು ಪುರಂದರನು. ಆದುದರಿಂದ ಶಕ್ರ, ಪುರಂದರಶಬ್ದಗಳು ಭಿನ್ನಾರ್ಥವಾಚಕಗಳು.

**ಏವಂಭೂತ**– ಯಾವುದೊಂದು ವಸ್ತುವು ಎಲ್ಲಿಯ ವರೆಗೆ ಯಾವುದೊಂದು ಕ್ರಿಯೆಯನ್ನು ಮಾಡುತ್ತಿರುವುದೋ ಅಲ್ಲಿಯವರೆಗೆ ಆ ವಸ್ತುವು ಆಕ್ರಿಯಾವಾಚಕಶಬ್ದದಿಂದ ಹೇಳಲ್ಪಡುವುದು. ಪರಕ್ಷಣದಲ್ಲಿ ಆ ಶಬ್ದದಿಂದ ಆವಸ್ತುವು ಹೇಳಲ್ಪಡಲಾರದು. ಎಲ್ಲಿಯವರೆಗೆ ಪುರುಷನು ಶಕ್ತಿಶಾಲಿಯೋ ಅಲ್ಲಿಯ ವರೆಗೆ ಆತನು ಶಕ್ರನು; ಶಕ್ತಿಹೀನನಾಗಲು ಆತನು ಶಕ್ರಶಬ್ದವಾಚ್ಯನಲ್ಲ. ಇದು ಏವಂಭೂತನಯದ ಅಭಿಪ್ರಾಯವು.

ನಯವು ಪದಾರ್ಥದ ಏಕದೇಶವನ್ನು ಅನುಲಕ್ಷಿಸುವುದು. ವಸ್ತುವಿನ ನಿಜವಾದ ಮತ್ತು ಪರಿಪೂರ್ಣವಾದ ತತ್ತ್ವವನ್ನು ನಿರೂಪಿಸುವುದಾದರೆ ಜೈನಾಗಮಗಳ ಅಂಗಭೂತವಾದ ಸ್ಯಾದ್ವಾದವನ್ನು ಆಶ್ರಯಿಸಬೇಕಾಗುವುದು.

**ಪ್ರಮಾಣ**– ಸಂಶಯ ವಿಪರ್ಯಯ ಅನಧ್ಯವಸಾಯ ಭಿನ್ನವಾದ ಜ್ಞಾನವು ಪ್ರಮಾಣವೆನಿಸುವುದು. ಮುಂದೆ ಕಾಣುವ ವಸ್ತು ಸ್ಥಾಣುವೋ ಪುರುಷನೋ

ಎಂಬ ಜ್ಞಾನವು ಸಂಶಯವು; ಶುಕ್ತಿಯನ್ನು ಕಂಡು ಇದು ರಜತವೆಂದು ತಿಳಿಯು ವುದು ವಿಪರ್ಯಯವು; ದಾರಿಯಲ್ಲಿ ಹೋಗುವಾಗ ಹುಲ್ಲು ತಗುಲಲು ಏನೋ ಒಂದು ವಸ್ತು ತಗುಲಿತೆಂದು ನಿರ್ಧಾರವಿಲ್ಲದೆ ಆಗುವ ಜ್ಞಾನವು ಅನಧ್ಯವಸಾಯವು. ಈ ಮೂರು ಜ್ಞಾನಗಳು ಯಥಾರ್ಥಬೋಧಜನಕಗಳಲ್ಲವಾದುದರಿಂದ ಪ್ರಮಾಣವೆನಿಸವು.

ಪ್ರಮಾಣಜ್ಞಾನದಿಂದ ಪ್ರಮಿತಿಯುಂಟಾಗುವುದು. ಪ್ರಮಿತಿಗೆ ಪ್ರಮಾಣಜ್ಞಾನವು ಕಾರಣವು. ಪ್ರಮಿತಿಯೆಂದರೆ ಸ್ವವಿಷಯದ ಅಜ್ಞಾನನಿವೃತ್ತಿ.

ಒಂದು ವಿಷಯದ ಜ್ಞಾನವುಂಟಾದ ಬಳಿಕ ಉಂಟಾಗುವ ಅದೇ ವಿಷಯದ ಧಾರಾಕಾರವಾದ ಜ್ಞಾನವನ್ನು ಧಾರಾವಾಹಿಜ್ಞಾನ (ಅನುವ್ಯವಸಾಯ)ವೆಂದು ಹೇಳುವರು.

**ಜ್ಞಾನ ಪ್ರಾಮಾಣ್ಯ**- ಪ್ರಾಮಾಣ್ಯವೆಂದರೆ ಒಂದು ವಸ್ತುವನ್ನು ಅದು ಇದ್ದ ತೆರದಲ್ಲಿ ತಿಳಿಯುವುದು. ಸಮ್ಯಗ್ಜ್ಞಾನವೇ ಪ್ರಮಾಣಭೂತವಾದುದು. ಇದು ಪ್ರತ್ಯಕ್ಷ ಮತ್ತು ಪರೋಕ್ಷ ಎಂದು ಎರಡು ತೆರನಾಗಿದೆ.

**ಪ್ರತ್ಯಕ್ಷಜ್ಞಾನ**- ಇದು ಘಟವು ಎಂಬ ಪ್ರತ್ಯಕ್ಷವು ಪ್ರತ್ಯಕ್ಷಜ್ಞಾನವು. ಪ್ರತ್ಯಕ್ಷಜ್ಞಾನವು ವಿಷಯವನ್ನು ಸ್ಪಷ್ಟವಾಗಿಯೂ ನಿರ್ದೋಷವಾಗಿಯೂ ಗ್ರಹಿಸುವುದು.

ಪ್ರತ್ಯಕ್ಷವು ಸಾಂವ್ಯಾವಹಾರಿಕವೆಂದೂ, ಪಾರಮಾರ್ಥಿಕವೆಂದೂ ದ್ವಿವಿಧವಾಗಿದೆ. ಸಾಂವ್ಯಾವಹಾರಿಕದ ಭೇದಗಳಾದ ಅವಗ್ರಹ ಈಹೆ ಮೊದಲಾದುವು ಈ ಮೊದಲು ಹೇಳಲ್ಪಟ್ಟಿವೆ. ಚಕ್ಷುರಾದಿ ಇಂದ್ರಿಯಗಳು, ಅನಿಂದ್ರಿಯ (ಮನಸ್ಸು) ಇವುಗಳಿಂದುಂಟಾಗುವ ಜ್ಞಾನವು ಸಾಂವ್ಯಾವಹಾರಿಕ ಪ್ರತ್ಯಕ್ಷವೆನಿಸುವುದು. ಇವು ಮುಖ್ಯ ಪ್ರತ್ಯಕ್ಷವಲ್ಲ. ಇವನ್ನು ಪರೋಕ್ಷಜ್ಞಾನವೆಂದೂ ಹೇಳುವರು. ಇಂದ್ರಿಯಾದಿಗಳ ಅಪೇಕ್ಷೆಯಿಲ್ಲದೆ ಆತ್ಮನಿಂದಲೇ ಉಂಟಾಗುವ ಜ್ಞಾನವನ್ನು ಪಾರಮಾರ್ಥಿಕ ಪ್ರತ್ಯಕ್ಷವೆಂದೂ ಮುಖ್ಯ ಪ್ರತ್ಯಕ್ಷವೆಂದೂ ಹೇಳುವರು. ಈ ಮುಖ್ಯಪ್ರತ್ಯಕ್ಷವು ವಿಕಲವೆಂದೂ ಸಕಲವೆಂದೂ ಎರಡು ಬಗೆಯಾಗಿದೆ. ಅವಧಿಜ್ಞಾನ, ಮನಃಪರ್ಯಯಜ್ಞಾನಗಳು ವಿಕಲಪ್ರತ್ಯಕ್ಷಗಳು. ವಿಕಲವೆಂದರೆ ವಸ್ತುವಿನ ಕೆಲವು ಅಂಶಗಳನ್ನು ಗ್ರಹಿಸುವುದು. ಸಕಲಪ್ರತ್ಯಕ್ಷವು ಸಕಲದ್ರವ್ಯಪರ್ಯಾಯಗಳನ್ನು ಗ್ರಹಿಸುವುದು. ಕೇವಲಜ್ಞಾನವು ಸಕಲಪ್ರತ್ಯಕ್ಷವೆನಿಸುವುದು.

**ಪರೋಕ್ಷಜ್ಞಾನ**- ಸ್ಪಷ್ಟವಲ್ಲದ ಜ್ಞಾನವು ಪರೋಕ್ಷಜ್ಞಾನವೆನಿಸುವುದು. ಸ್ಮೃತಿ, ಸಂಜ್ಞೆ, ಚಿಂತೆ (ತರ್ಕ), ಅಭಿನಿಬೋಧ, ಆಗಮ ಎಂದು ಇದು ಐದು ಬಗೆಯಾಗಿದೆ. ಇವುಗಳ ವಿವರಣೆಯು ಈ ಮೊದಲು ಬಂದಿದೆ.

# ಸ್ಯಾದ್ವಾದ (ಸಪ್ತ ಭಂಗೀನಯು).

ಪದಾರ್ಥಗಳು ಅನೇಕಗುಣಗಳಿಗೆ ಆಶ್ರಯವಾದುದರಿಂದ ಅವನ್ನು ಹಲವು ಬಗೆಗಳಿಂದ ನಿರೂಪಿಸಬಹುದು. ಒಂದು ವಸ್ತುವನ್ನು ನಿರೂಪಿಸುವ ಎಲ್ಲ ಬಗೆಗಳನ್ನು ಎಣಿಸಿದರೆ ಆ ಬಗೆಗಳು ಏಳು ಎಂದು ತಿಳಿಯುವುದು. ಯಾವುದೊಂದು ಗುಣವನ್ನು ಒಂದು ಪದಾರ್ಥದಲ್ಲಿ ಆರೋಪಿಸಲು ಆ ಪದಾರ್ಥವನ್ನು ಯಾವ ಏಳು ಪ್ರಕಾರಗಳಿಂದ ನಿರೂಪಿಸಬಹುದೋ ಆ ಏಳು ಪ್ರಕಾರಗಳನ್ನೇ ಸಪ್ತಭಂಗಗಳೆಂದು ಹೇಳುವರು.

ಯಾವುದೊಂದು ವಸ್ತು ಒಂದು ಅಪೇಕ್ಷೆಯಿಂದ ಉಂಟು; ಒಂದು ಅಪೇಕ್ಷೆಯಿಂದ ಇಲ್ಲ; ಒಂದು ಅಪೇಕ್ಷೆಯಿಂದ ಉಂಟು ಮತ್ತು ಇಲ್ಲ; ಒಂದು ಅಪೇಕ್ಷೆಯಿಂದ ಅನಿರ್ವಚನೀಯವು; ಒಂದು ಅಪೇಕ್ಷೆಯಿಂದ ಉಂಟು ಮತ್ತು ಅನಿರ್ವಚನೀಯವು; ಒಂದು ಅಪೇಕ್ಷೆಯಿಂದ ಇಲ್ಲ ಮತ್ತು ಅನಿರ್ವಚನೀಯವು; ಒಂದು ಅಪೇಕ್ಷೆಯಿಂದ ಉಂಟು, ಇಲ್ಲ ಮತ್ತು ಅನಿರ್ವಚನೀಯವು. ವಸ್ತು ನಿರೂಪಣೆಯ ಈ ಏಳು ಪ್ರಕಾರಗಳನ್ನೇ ಸಪ್ತಭಂಗಗಳೆನ್ನುವರು. ಘಟವೆಂಬ ಒಂದು ವಸ್ತುವು ಉಂಟು ಎಂದು ಹೇಳಿದರೆ ಅದು ಒಂದು ಬಗೆಯಿಂದ ಇರುವದೋ, ಎಲ್ಲ ಬಗೆಗಳಿಂದಲೂ ಇರುವುದೋ ಎಂಬ ವಿಚಾರವು ಹುಟ್ಟುವುದು. ಘಟವು ಇಲ್ಲವೆಂದಾಗಲೂ ಅದು. ಒಂದು ಬಗೆಯಿಂದ ಇಲ್ಲವೋ, ಎಲ್ಲ ಬಗೆಗಳಿಂದಲೂ ಇಲ್ಲವೋ ಎಂಬ ವಿಚಾರವು ಬರುವುದು. ಘಟವು ಉಂಟು ಎಂದು ಹೇಳಿದಾಗ ಅದು ಸ್ವಸ್ವರೂಪ, ಸ್ವದ್ರವ್ಯ, ಸ್ವಕ್ಷೇತ್ರ, ಸ್ವಕಾಲ ಈ ನಾಲ್ಕರ ದೃಷ್ಟಿಯಿಂದ ಉಂಟೆಂಬ ಅರ್ಥವು. ಇದೇ ಮೇರೆಗೆ ಉಳಿದ ಭಂಗಗಳಲ್ಲಿಯೂ ವಿಚಾರವನ್ನು ಮಾಡಬೇಕು.

ಸಪ್ತಭಂಗಿಯು ಪ್ರಮಾಣಸಪ್ತಭಂಗಿಯೆಂದೂ, ನಯಸಪ್ತಭಂಗಿಯೆಂದೂ ದ್ವಿವಿಧವಾಗಿದೆ. ವಸ್ತುವಿನ ಒಂದು ಧರ್ಮವನ್ನು ತಿಳಿಸುವುದರಿಂದ ತಪ್ಪದೆ ಆ ಧರ್ಮದೊಡನೆ ಎಲ್ಲ ಧರ್ಮಸ್ವರೂಪವಾದ ಆ ವಸ್ತುವನ್ನು ಬೋಧಿಸುವ ವಾಕ್ಯವು ಪ್ರಮಾಣ ಸಪ್ತಭಂಗಿಯು. ವಸ್ತುವಿನ ಒಂದು ಧರ್ಮವನ್ನು ಬೋಧಿಸುವ ವಾಕ್ಯವು ನಯಸಪ್ತಭಂಗಿಯು.

ಧರ್ಮಾಂತರವನ್ನು ನಿಷೇಧಿಸದೆ "ವಸ್ತು ಉಂಟು" ಎಂಬ ವಿಧಿವಿಷಯವನ್ನು ಬೋಧಿಸುವ ವಾಕ್ಯವು ಮೊದಲನೆಯ ಭಂಗವು. ಉದಾ: ಒಂದು ಅಪೇಕ್ಷೆಯಿಂದ ಘಟವುಂಟು. ಘಟಕ್ಕೆ ಘಟತ್ವವೆಂಬುದು ಸ್ವರೂಪವು; ಪಟತ್ವಮುಂತಾದುವು ಪರರೂಪಗಳು. ಘಟಕ್ಕೆ ಮಣ್ಣು ಸ್ವದ್ರವ್ಯವು; ಬಂಗಾರ ಮೊದಲಾದುವು ಪರದ್ರವ್ಯಗಳು; ಘಟಕ್ಕೆ ಸ್ವಕ್ಷೇತ್ರವೆಂದರೆ ಅದು ಇದ್ದ ದೇಶವು; ಅದು ಇಲ್ಲದ ಗೋಡೆ, ಕಂಬ ಮೊದಲಾದುವು ಪರಕ್ಷೇತ್ರಗಳು. ಘಟಕ್ಕೆ ಅದು ಇರುವ

ವರ್ತಮಾನಕಾಲವು ಸ್ವಕಾಲವು; ಭೂತ-ಭವಿಷ್ಯತ್ಕಾಲಗಳು ಪರಕಾಲಗಳು. ಘಟವು ಉಂಟು ಎಂದರೆ ಅದು ಸ್ವರೂಪ, ಸ್ವದ್ರವ್ಯ, ಸ್ವಕ್ಷೇತ್ರ, ಸ್ವಕಾಲ ಸಂಬಂಧದಿಂದ ಇರುವುದು ಎಂಬ ಅರ್ಥವು. "ಒಂದು ಅಪೇಕ್ಷೆಯಿಂದ ಘಟವಿಲ್ಲ" ಎಂದರೆ ಘಟವು ಪರಸ್ವರೂಪ, ಪರದ್ರವ್ಯ, ಪರಕ್ಷೇತ್ರ, ಪರಕಾಲ ಸಂಬಂಧದಿಂದ ಇರುವುದಿಲ್ಲವೆಂಬ ಅರ್ಥವು. ಮೂರನೆಯ ಭಂಗವು- 'ಒಂದು ಅಪೇಕ್ಷೆಯಿಂದ ಘಟವುಂಟು, ಒಂದು ಅಪೇಕ್ಷೆಯಿಂದ ಇಲ್ಲ' ಎಂದರೆ ಘಟವು ವಿಧಿ ಮತ್ತು ಪ್ರತಿಷೇಧ ಈ ಎರಡೂ ಪ್ರಕಾರಗಳುಳ್ಳುದೆಂದು ತೋರಿಸುವುದು. ನಾಲ್ಕನೆಯ ಭಂಗವು- ಒಂದು ಅಪೇಕ್ಷೆಯಿಂದ ಅನಿರ್ವಚನೀಯವು.' ಎಂದರೆ ಜಗತ್ತಿನೊಳಗಿನ ಯಾವ ಶಬ್ದವೂ ವಸ್ತುವಿನ ಇರುವಿಕೆಯನ್ನೂ, ಇಲ್ಲದಿರುವಿಕೆಯನ್ನೂ ಏಕಕಾಲದಲ್ಲಿ ಬೋಧಿಸುವುದಿಲ್ಲ; ಉಂಟು, ಇಲ್ಲ ಎಂಬ ಶಬ್ದಗಳು ಬೇರೆಬೇರೆಯಾಗಿ ಇರುವಿಕೆಯನ್ನೂ, ಇಲ್ಲದಿರುವಿಕೆಯನ್ನೂ ಬೋಧಿಸುವುದರಿಂದ 'ಇರುವದು-ಇರುವುದಿಲ್ಲ' ಎಂಬ ಒಟ್ಟರ್ಥವನ್ನು ಹೇಳುವ ಶಬ್ದವು ಭಾಷೆಯಲ್ಲಿ ಸಿಕ್ಕಲಾರದಾದುದರಿಂದ ಆಗ ಘಟವು ಅನಿರ್ವಚನೀಯವಾಗುವುದು. ಇದೇ ಮೇರೆಗೆ ಉಳಿದ ಭಂಗಗಳನ್ನೂ ತಿಳಿದುಕೊಳ್ಳಬಹುದು. ಕೆಳಗೆ ಸಪ್ತಭಂಗಗಳ ಸಂಕ್ಷಿಪ್ತವಾದ ವಿವೇಚನೆಯು ಬರೆಯಲ್ಪಟ್ಟದೆ

**೧ ಸ್ಯಾದಸ್ತಿ, ೨ ಸ್ಯಾನ್ನಾಸ್ತಿ, ೩ ಸ್ಯಾದಸ್ತಿನಾಸ್ತಿ ೪ ಸ್ಯಾದವಕ್ತವ್ಯಂ, ೫ ಸ್ಯಾದಸ್ತ್ಯವಕ್ತವ್ಯಂ, ೬ ಸ್ಯಾನ್ನಾಸ್ತ್ಯವಕ್ತವ್ಯಂ, ೭ ಸ್ಯಾದಸ್ತಿನಾಸ್ತ್ಯವಕ್ತವ್ಯಂ** ಎಂಬಿವು ಸಪ್ತಭಂಗಿಗಳು. ಇವುಗಳಿಂದ ವಸ್ತುಸ್ವರೂಪವನ್ನು ವಿಚಾರ ಮಾಡುವುದೇ ಸ್ಯಾದ್ವಾದವೆನಿಸುವುದು.

ಸ್ಯಾತ್ ಎಂದರೆ ಕಥಂಚಿತ್, ಇಲ್ಲವೆ ವಿವಕ್ಷಿತಪ್ರಕಾರದಿಂದ ಎಂಬ ಅರ್ಥವು; ಎಂದರೆ ಒಂದು ಅಪೇಕ್ಷೆಯಿಂದ ಇಲ್ಲವೆ ಒಂದು ದೃಷ್ಟಿಯಿಂದ, ಒಂದು ರೀತಿಯಿಂದ ಎಂಬ ಅರ್ಥವು.

೧ **ಸ್ಯಾದಸ್ತಿ**- ಯಾವುದೊಂದು ವಸ್ತು 'ಅಸ್ತಿ' (ಇರುವುದು) ಎಂದರೆ ಸ್ವರೂಪ, ಸ್ವದ್ರವ್ಯ, ಸ್ವಕ್ಷೇತ್ರ, ಸ್ವಕಾಲಸಂಬಂಧದಿಂದ ಇರುವುದು ಎಂಬ ಅರ್ಥವು. ಸ್ಯಾದಸ್ತಿ= ಒಂದು ಅಪೇಕ್ಷೆಯಿಂದ (ಒಂದು ದೃಷ್ಟಿಯಿಂದ) ಇರುವುದು.

**೨ ಸ್ಯಾನ್ನಾಸ್ತಿ**- ಅದೇ ವಸ್ತು ಪರಸ್ವರೂಪ, ಪರದ್ರವ್ಯ, ಪರಕ್ಷೇತ್ರ, ಪರಕಾಲ ಸಂಬಂಧದಿಂದ ಇರುವುದಿಲ್ಲ ಎಂಬ ಅರ್ಥವು. ಸ್ಯಾನ್ನಾಸ್ತಿ= ಒಂದು ಅಪೇಕ್ಷೆಯಿಂದ (ಒಂದು ದೃಷ್ಟಿಯಿಂದ)- ಪರಸ್ವರೂಪ ಪರದ್ರವ್ಯಾದಿಗಳ ಅಪೇಕ್ಷೆಯಿಂದ ಇಲ್ಲ ಎಂಬ ಅರ್ಥವು.

**೩ ಸ್ಯಾದಸ್ತಿನಾಸ್ತಿ**- ಯಾವುದೊಂದು ವಸ್ತು ಏಕಕಾಲದಲ್ಲಿ ಸ್ವಸ್ವರೂ

ಪಾದಿ ಚತುಷ್ಟಯಾಪೇಕ್ಷೆಯಿಂದ ಉಂಟು; ಮತ್ತು ಪರಸ್ವರೂಪಾದಿ ಚತುಷ್ಟಯಾಪೇಕ್ಷೆಯಿಂದ ಇಲ್ಲ ಎಂಬ ಅರ್ಥವು.

**೪ ಸ್ಯಾದವಕ್ತವ್ಯಂ**- ಏಕಕಾಲದಲ್ಲಿ ಸ್ವ, ಪರ ಸ್ವರೂಪಾದಿ ಚತುಷ್ಟಯಾಪೇಕ್ಷೆಯಿಂದ ಯಾವುದೊಂದು ವಸ್ತು ಅವಕ್ತವ್ಯವು (ಹೇಳಲು ಬಾರದುದು) ಆಗುವುದು.

**೫ ಸ್ಯಾದಸ್ತ್ಯವಕ್ತವ್ಯಂ**- ಸ್ವಸ್ವರೂಪಾದಿ ಚತುಷ್ಟಯಾಪೇಕ್ಷೆಯಿಂದ, ಏಕಕಾಲದಲ್ಲಿ ಸ್ವ, ಪರಸ್ವರೂಪಾದಿಚತುಷ್ಟಯಾಪೇಕ್ಷೆಯಿಂದ ಯಾವುದೊಂದು ವಸ್ತು ಅಸ್ತಿ ಮತ್ತು ಅವಕ್ತವ್ಯ ಎನಿಸುವುದು.

**೬ ಸ್ಯಾನ್ನಾಸ್ತ್ಯವಕ್ತವ್ಯಂ**– ಪರಸ್ವರೂಪಾದಿ ಚತುಷ್ಟಯಾಪೇಕ್ಷೆಯಿಂದ ಏಕಕಾಲದಲ್ಲಿ ಸ್ವಪರಸ್ವರೂಪಾದಿ ಚತುಷ್ಟಯಾಪೇಕ್ಷೆಯಿಂದ ಯಾವುದೊಂದು ವಸ್ತು ನಾಸ್ತಿ ಮತ್ತು ಅವಕ್ತವ್ಯ ಎನಿಸುವುದು.

**೭ ಸ್ಯಾದಸ್ತಿನಾಸ್ತ್ಯವಕ್ತವ್ಯಂ**– ಕ್ರಮದಿಂದ ಸ್ವ,ಪರಸ್ವರೂಪಾದಿ ಚತುಷ್ಟಯಾಪೇಕ್ಷೆಯಿಂದ ಯಾವುದೊಂದು ವಸ್ತು ಅಸ್ತಿ ನಾಸ್ತಿ, ಅವಕ್ತವ್ಯ ಎಂದೆನಿಸುವುದು.

ಪದಾರ್ಥಗಳು ಅಗಣಿತ ಗುಣಗಳಿಗೆ ಆಶ್ರಯವಾಗಿರುವುವು. ಯಾವುದೊಂದು ಗುಣವನ್ನು ಯಾವುದೊಂದು ಪದಾರ್ಥದಲ್ಲಿ ಆರೋಪಿಸಲು ಆ ಪದಾರ್ಥವು ಏಳು ರೀತಿಗಳಿಂದ ಹೇಗೆ ನಿರೂಪಿಸಲ್ಪಡುವುದೆಂಬುದನ್ನು ತೋರಿಸುವುದೇ ಸಪ್ತಭಂಗೀನಯವು. ಉದಾಹರಣೆಗಾಗಿ ಅಸ್ತಿತ್ವವೆಂಬ ಗುಣವನ್ನು ಘಟವೆಂಬ ಪದಾರ್ಥದಲ್ಲಿ ಆರೋಪಿಸುವ.

೧ ಸ್ಯಾದಸ್ತಿ ಘಟಃ- ಎಂದರೆ ಒಂದು ಅಪೇಕ್ಷೆಯಿಂದ ಘಟವಿರುವುದು ಎಂದು ಹೇಳಬಹುದು. ಘಟವು ಇರುವುದು ಎಂಬ ಮಾತಿನ ಅರ್ಥವೇನೆಂದರೆ, ಘಟವು ನಿತ್ಯ, ಸತ್ಯ, ಅನಾದಿ, ಅನಂತ, ಅಪರಿವರ್ತನೀಯ ಪದಾರ್ಥರೂಪವಾಗಿ ಇರುವುವೆಂಬ ಅರ್ಥವಲ್ಲ. ಘಟವಿರುವುದೆಂದರೆ ಅದು ಸ್ವಸ್ವರೂಪದಿಂದ ಎಂದರೆ ಘಟರೂಪದಿಂದ, ಸ್ವದ್ರವ್ಯರೂಪದಿಂದ ಎಂದರೆ ಮೃತ್ತಿಕಾನಿರ್ಮಿತವು ಎಂಬ ರೂಪದಿಂದ, ಸ್ವಕ್ಷೇತ್ರಸಂಬಂಧದಿಂದ ಎಂದರೆ ಬಂಕಾಪುರದ್ದು ಎಂಬ ರೂಪದಿಂದ ಸ್ವಕಾಲ ಸಂಬಂಧದಿಂದ ಎಂದರೆ ಶರತ್ಕಾಲದ್ದು ಎಂಬ ರೂಪದಿಂದ ಘಟವಿರುವುದು ಎಂಬ ಅರ್ಥವು. ಯಾವುದೊಂದು ಪದಾರ್ಥದ ವಿಧಾನಮಾಡ ತೊಡಗಿದಾಗ ಈ ನಯವು ಪ್ರಯೋಗಿಸಲ್ಪಡುವುದು.

೨ ಸ್ಯಾನ್ನಾಸ್ತಿ ಘಟಃ- ಎಂದರೆ ಒಂದು ಅಪೇಕ್ಷೆಯಿಂದ ಘಟವು ಇಲ್ಲ. ಘಟವಿಲ್ಲವೆಂಬುದರ ಅರ್ಥವು ಪರರೂಪದಿಂದ ಎಂದರೆ ಪಟರೂಪದಿಂದ, ಪರದ್ರ

ವ್ಯರೂಪದಿಂದ ಎಂದರೆ ಸುವರ್ಣಮಯವು ಎಂಬ ರೂಪದಿಂದ, ಪರಕ್ಷೇತ್ರ ಸಂಬಂಧದಿಂದ ಚಂಪಾಪುರದ್ದು ಎಂಬ ರೂಪದಿಂದ, ಪರಕಾಲ ಸಂಬಂಧದಿಂದ ವರ್ಷಾಕಾಲದ್ದು ಎಂಬ ರೂಪದಿಂದ ಘಟವಿಲ್ಲ ಎಂದು ಇರುವುದು. ಪದಾರ್ಥದ ನಿಷೇಧಮಾಡತೊಡಗಿದಾಗ ಈ ನಯವು ಪ್ರಯೋಗಿಸಲ್ಪಡುವುದು.

೩ ಸ್ಯಾದಸ್ತಿನಾಸ್ತಿಚಘಟಃ- ಎಂದರೆ ಒಂದು ಅಪೇಕ್ಷೆಯಿಂದ ಘಟವುಂಟು; ಒಂದು ಅಪೇಕ್ಷೆಯಿಂದ ಘಟವಿಲ್ಲ ಎಂಬ ಅರ್ಥವು. ಸ್ವಸ್ವರೂಪ, ಸ್ವದ್ರವ್ಯ, ಸ್ವಕ್ಷೇತ್ರ, ಸ್ವಕಾಲ ಈ ಸಂಬಂಧಗಳಿಂದ ಘಟವಿರುವುದು, ಪರಸ್ವರೂಪ, ಪರದ್ರವ್ಯಾದಿ ಸಂಬಂಧಗಳಿಂದ ಘಟವಿಲ್ಲ ಎಂಬ ಅರ್ಥವು. ವಿಧಿನಿಷೇಧಗಳೆರಡನ್ನೂ ಹೇಳುವಾಗ ಈ ನಯವು ಪ್ರಯೋಗಿಸಲ್ಪಡುವುದು.

೪ ಸ್ಯಾದವಕ್ತವ್ಯೋ ಘಟಃ- ಎಂದರೆ ಒಂದು ಅಪೇಕ್ಷೆಯಿಂದ ಘಟವು ಅವಕ್ತವ್ಯವು (ಹೇಳಲು ಬಾರದಂತಹುದು) ಎಂಬ ಅರ್ಥವು- ಘಟವು ಇರುವುದೆಂದೂ, ಇಲ್ಲವೆಂದೂ ಏಕಕಾಲದಲ್ಲಿ ಮನಸ್ಸಿನಲ್ಲಿ ತಂದರೆ ಘಟವು ಅವಕ್ತವ್ಯವಾಗುವುದು. ಏಕೆಂದರೆ, ಏಕಕಾಲದಲ್ಲಿ ಅಸ್ತಿತ್ವವನ್ನೂ ನಾಸ್ತಿತ್ವವನ್ನೂ ಬೋಧಿಸುವ ಶಬ್ದವು ಭಾಷೆಯಲ್ಲಿ ಸಿಕ್ಕಲಾರದು. ಮೂರನೆಯ ನಯದಲ್ಲಿ ಘಟದ ಅಸ್ತಿತ್ವ ನಾಸ್ತಿತ್ವಗಳನ್ನು ಹೇಳಿದುದರ ಅಭಿಪ್ರಾಯವು ಯಾವಕ್ಷಣದಲ್ಲಿ ಘಟವು ಅಸ್ತಿತ್ವವುಳ್ಳದೆಂದು ತಿಳಿದುಕೊಳ್ಳುವೆವೋ ಅಪೇಕ್ಷಣದಲ್ಲಿ ಅದು ನಾಸ್ತಿತ್ವವುಳ್ಳದೆಂದು ತಿಳಿಯಬೇಕೆಂದು ಅಲ್ಲ.

೫ ಸ್ಯಾದಸ್ತಿಚ ಅವಕ್ತವ್ಯಶ್ಚ ಘಟಃ- ಎಂದರೆ ಒಂದು ಅಪೇಕ್ಷೆಯಿಂದ ಘಟವು ಇರುವುದು, ಒಂದು ಅಪೇಕ್ಷೆಯಿಂದ ಘಟವು ಅವಕ್ತವ್ಯವಾಗಿದೆ. ಈ ನಯವು ಒಂದನೆಯ ಮತ್ತು ನಾಲ್ಕನೆಯ ನಯಗಳ ಮಿಲನದಿಂದ ಉಂಟಾಗುವುದು.

೬ ಸ್ಯಾನ್ನಾಸ್ತಿಚ- ಅವಕ್ತವ್ಯಶ್ಚ ಘಟಃ- ಎಂದರೆ ಒಂದು ಅಪೇಕ್ಷೆಯಿಂದ ಘಟವು ಇಲ್ಲ, ಮತ್ತು ಒಂದು ಅಪೇಕ್ಷೆಯಿಂದ ಘಟವು ಅವಕ್ತವ್ಯವು ಎಂಬ ಅರ್ಥವು. ಈ ನಯವು ಎರಡನೆಯ ಮತ್ತು ನಾಲ್ಕನೆಯ ನಯಗಳ ಮಿಲನದಿಂದ ಉಂಟಾಗುವುದು.

೭ ಸ್ಯಾದಸ್ತಿನಾಸ್ತಿಚ- ಅವಕ್ತವ್ಯಶ್ಚಘಟಃ- ಎಂದರೆ ಒಂದು ಅಪೇಕ್ಷೆಯಿಂದ ಘಟವು ಇರುವುದು, ಒಂದು ಅಪೇಕ್ಷೆಯಿಂದ ಇಲ್ಲ; ಒಂದು ಅಪೇಕ್ಷೆಯಿಂದ ಘಟವು ಅವಕ್ತವ್ಯವಾಗಿದೆ; ಈ ನಯವು ಮೂರನೆಯ ಮತ್ತು ನಾಲ್ಕನೆಯ ನಯಗಳ ಮಿಶ್ರಣದಿಂದ ಉಂಟಾಗಿದೆ.

ವಸ್ತುವಿಚಾರವು ಈ ಸಪ್ತಭಂಗೀನಯದಿಂದ ಆಗುವುದು ಆವಶ್ಯಕವೆಂದು ಜೈನದಾರ್ಶನಿಕರು ಹೇಳುವರು. ಘಟವು ಇರುವುದು ಎಂದಿಷ್ಟೇ ಹೇಳಿದರೆ

ಅದರ ಪೂರ್ಣ ವಿವರಣೆಯಾಗುವುದಿಲ್ಲ. ಘಟವು ಇಲ್ಲ ಎಂದು ಹೇಳಿದರೂ ಎಲ್ಲವನ್ನೂ ಹೇಳಿದಂತಾಗುವುದಿಲ್ಲ. ಘಟವು ಇರುವುದು, ಮತ್ತು ಇರುವುದಿಲ್ಲ ಎಂದು ಹೇಳಿದರೂ ಸಾಲದು. ಘಟವು ಅವಕ್ತವ್ಯವೆಂದು ಹೇಳಿದರೂ ಪೂರ್ಣವಾಗಿ ಹೇಳಿದಂತಾಗುವುದಿಲ್ಲ. ಆದುದರಿಂದ ಇವುಗಳಲ್ಲಿ ಒಂದೆರಡು ನಯಗಳಿಂದ ವಸ್ತುವಿನ ಸಂಪೂರ್ಣಸ್ವರೂಪಜ್ಞಾನವಾಗುವುದಿಲ್ಲವಾದುದರಿಂದಲೂ ಪ್ರತಿನಯದಲ್ಲಿಯೂ ಕೆಲವೊಂದು ಸತ್ಯಾಂಶವು ಅಡಕವಾಗಿರುವುದರಿಂದಲೂ ಸಪ್ತನಯಗಳೂ ಆವಶ್ಯಕಗಳು. ಅಸ್ತಿತ್ವಧರ್ಮದ ವಿಷಯವಾಗಿ ಮೇಲೆ ವಿಚಾರಮಾಡಿದಂತೆ ನಿತ್ಯತ್ವ ಧರ್ಮದ ವಿಷಯವಾಗಿಯೂ ಸಪ್ತಭಂಗಿಗಳನ್ನು ತೋರಿಸಬಹುದು. ಎಂದರೆ ಪದಾರ್ಥವು ನಿತ್ಯವೋ ಅನಿತ್ಯವೋ ಎಂಬೀ ಪ್ರಶ್ನದ ಉತ್ತರವನ್ನು ಹೇಳುವಾಗಲೂ ಜೈನರು ಮೇಲೆ ಹೇಳಿದ ಸಪ್ತಭಂಗಗಳನ್ನು ಪ್ರಯೋಗಿಸುವುದುಂಟು. ಉದಾ:- ಸ್ಯಾನ್ನಿತ್ಯೋ ಘಟ:- (ಕೆಲವು ಪರಿಮಾಣದಿಂದ- ದ್ರವ್ಯರೂಪದಿಂದ- ಘಟವು ನಿತ್ಯವು.) ಸ್ಯಾದನಿತ್ಯೋಘಟ:- (ಕೆಲವು ಪರಿಮಾಣದಿಂದ- ಪರ್ಯಾಯರೂಪದಿಂದ- ಘಟವು ಅನಿತ್ಯವು) ಮುಂ. ಜೈನಮತದಲ್ಲಿ ಸ್ಯಾದ್ವಾದವು ಪದಾರ್ಥತತ್ತ್ವನಿರೂಪಣದ ಮುಖ್ಯೋಪಾಯವು. ಈ ಸಪ್ತಭಂಗಗಳಿಗೆ ಕ್ರಮದಿಂದ ಸದ್ವಾದ, ಅಸದ್ವಾದ, ಸದಸದ್ವಾದ, ಅನಿರ್ವಚನೀಯವಾದ, ಸದನಿರ್ವಚನೀಯವಾದ, ಅಸದನಿರ್ವಚನೀಯವಾದ, ಸದಸದನಿರ್ವಚನೀಯವಾದ ಎಂಬ ಹೆಸರುಗಳುಂಟು.

———

# ದ್ರವ್ಯ

**ದ್ರವ್ಯ**– ದ್ರವ್ಯಕ್ಕೆ ಉತ್ಪತ್ತಿಯೂ ವಿನಾಶವೂ ಇರುವುವೆಂಬುದನ್ನು ಎಲ್ಲರೂ ಬಲ್ಲರು. ಭರತಖಂಡದಲ್ಲಿ ಬೌದ್ಧರೂ ಗ್ರೀಸದೇಶದಲ್ಲಿ Heralitusನ ಶಿಷ್ಯರೂ ಈ ಕಾರಣದಿಂದ ದ್ರವ್ಯವು ಅನಿತ್ಯವೆಂದು ಹೇಳುವರು. ಆದರೆ ಮೇಲೆ ಮೇಲೆ ತೋರುವ ಉತ್ಪತ್ತಿವಿನಾಶಾದಿಪರಿವರ್ತನಗಳ ಮೂಲದಲ್ಲಿರುವ ತತ್ತ್ವವು ಕಟಕಕುಂಡಲಾದಿಗಳ ಮೂಲದಲ್ಲಿರುವ ಸುವರ್ಣದಂತೆ ಯಾವಾಗಲೂ ಅವಿಕೃತವಾಗಿರುವುದು. ಈ ಕಾರಣದಿಂದ ಭರತಖಂಡದಲ್ಲಿ ವೇದಾಂತಮತದವರೂ, ಗ್ರೀಸದಲ್ಲಿ Parmenidesನ ಅನುಯಾಯಿಗಳೂ ಪರಿವರ್ತನವಾದವನ್ನು ತೊಲಗಿಸಿ ದ್ರವ್ಯದ ನಿತ್ಯಸತ್ತೆಯನ್ನೂ ವಿಕಾರರಾಹಿತ್ಯವನ್ನೂ ಒಪ್ಪುವರು· ಸ್ಯಾದ್ವಾದವಾದಿಗಳಾದ ಜೈನರು ಈ ಎರಡೂ ಮತಗಳನ್ನೂ ಕೆಲವಂಶದಿಂದ ಒಪ್ಪಿರುವರು, ಮತ್ತು ಕೆಲವಂಶದಿಂದ ಬಿಟ್ಟಿರುವರು. ಅವರ ಮತದಲ್ಲಿ ದ್ರವ್ಯಕ್ಕೆ ಸತ್ತೆಯೂ ಉಂಟು, ಪರಿವರ್ತನವೂ ಉಂಟು. ಆದುದರಿಂದ ಅವರ ದ್ರವ್ಯವು ಉತ್ಪಾದವ್ಯಯಧ್ರೌವ್ಯಯುಕ್ತವೆಂದು ಹೇಳುವರು; ಎಂದರೆ (೧) ದ್ರವ್ಯಕ್ಕೆ ಉತ್ಪತ್ತಿಯುಂಟು; (೨) ದ್ರವ್ಯಕ್ಕೆ ನಾಶವುಂಟು; (೩) ದ್ರವ್ಯವು ಪರ್ಯಾಯರೂಪದಲ್ಲಿ ಉತ್ಪತ್ತಿವಿನಾಶಗಳುಳ್ಳುದಾದರೂ ಮೂಲ ರೂಪದಲ್ಲಿ ಅವಿಕೃತವೂ ಅಪರಿವರ್ತಿತವೂ ಆಗಿರುವುದು.

**ದ್ರವ್ಯ, ಗುಣ, ಪರ್ಯಾಯ**– ದ್ರವ್ಯವಿಚಾರವನ್ನು ಮಾಡುವಾಗ ಗುಣ, ಪರ್ಯಾಯ ಇವುಗಳ ವಿಚಾರವೂ ನಮ್ಮ ಮುಂದೆ ಬರುವುದು. ಜೈನರು ಹೇಳುವ ದ್ರವ್ಯವು ಕೆಲಮಟ್ಟಿಗೆ Cartesian ರ Subestance. ಯಾವುದು ದ್ರವ್ಯದೊಡನೆ ಯಾವಾಗಲೂ ಅವಿಚ್ಛೇದ ಸಂಬಂಧದಿಂದ ಇರುವುದೋ, ಯಾವುದ ಇಲ್ಲದಿದ್ದರೆ ದ್ರವ್ಯವು ದ್ರವ್ಯವೆನಿಸಲಾರದೋ ಅದನ್ನು ಜೈನರು ಗುಣವೆಂದು ಹೇಳುವರು. ಈ ಗುಣವು Cartesian ರ Astriente. ದ್ರವ್ಯವು ಸ್ವಾಭಾವಿಕವಾಗಿ ಅವಿಕೃತವಾದುದಾದರೂ ಅಸಂಖ್ಯ ಪರಿವರ್ತನಗಳಿಂದ ಪ್ರಕಟವಾಗುವುದಕ್ಕೆ ಪರ್ಯಾಯವೆನ್ನುವರು. ಕೊಡ, ಗಡಿಗೆ ಮುಂತಾದುವು ಮೃತ್ತಿಕೆಯ ಪರ್ಯಾಯಗಳು. ಜೈನರು ಹೇಳುವ ಈಪರ್ಯಾಯವನ್ನೇ Cartesian ರು Mode ಎನ್ನುವರೆಂದು ತೋರುವುದು. ಜೈನರಲ್ಲಿ ಪುದ್ಗಲ, ಧರ್ಮ, ಅಧರ್ಮ ಆಕಾಶ, ಕಾಲ ಎಂಬೀ ಐದು ಅಜೀವ ದ್ರವ್ಯಗಳೂ ಜೀವವೂ ಸೇರಿ ಆರು ದ್ರವ್ಯಗಳು.

**ಅವಧಿಜ್ಞಾನ**- ಮತಿ, ಶ್ರುತ ಮೊದಲಾದ ಐದು ಬಗೆಯ ಜ್ಞಾನಗಳಲ್ಲಿ ಮತಿಜ್ಞಾನ ಶ್ರುತಜ್ಞಾನಗಳು ಈ ಮೊದಲು ವರ್ಣಿಸಿವೆ. ಸ್ಥೂಲೇಂದ್ರಿಯಗಳಿಗೆ ಗೋಚರವಾಗುವ ಅವಧಿಯ ಆಚೆಗೆ ಇರುವ ಸಮಸ್ತರೂಪವಿಶಿಷ್ಟದ್ರವ್ಯಗಳ ಅಸಾಧಾರಣ ಅನುಭೂತಿಯು ಅವಧಿಜ್ಞಾನವು. ಈ ಕಾಲದಲ್ಲಿ Occultist

ರು ಯಾವುದನ್ನು Clairvoyauee ಎಂದು ಹೇಳುವರೋ ಅದೇ ಕೆಲವು ಮಟ್ಟಿಗೆ ಅವಧಿಜ್ಞಾನವೆಂದು ಹೇಳಬಹುದು. ಅವಧಿಜ್ಞಾನದಲ್ಲಿ ದೇಶಾವಧಿ, ಪರಮಾವಧಿ, ಸರ್ವಾವಧಿ ಎಂದು ಮೂರು ಬಗೆಗಳುಂಟು ದೇಶಾವಧಿಯು ದಿಕ್ಕಾಲಗಳ ಮರ್ಯಾದೆಯುಳ್ಳದು. ಪರಮಾವಧಿಯು ಅಮರ್ಯಾದವು. ಸರ್ವಾವಧಿಯಿಂದ ವಿಶ್ವದೊಳಗಿನಸಮಸ್ತರೂಪಿದ್ರವ್ಯಗಳ ಅನುಭವವುಂಟಾಗುವುದು.

**ಮನಃಪರ್ಯಾಯ**- ಪರಚಿತ್ತಗತವಿಷಯಗಳ ಜ್ಞಾನವಾಗುವುದು ಮನಃಪರ್ಯಾಯಜ್ಞಾನವು. Occultiest ರು ಇದನ್ನು Telebashy ಮತ್ತು Minn Reading ಎಂದು ಹೇಳುವರು. ಇದು ಋಜುಮತಿ, ವಿಪುಲಮತಿ ಎಂದು ಎರಡು ಬಗೆಯಾಗಿದೆ. ಋಜುಮತಿಯು ಸಂಕೀರ್ಣವಾದುದು. ವಿಪುಲಮತಿಯಿಂದ ವಿಶ್ವದೊಳಗಿನ ಸಮಸ್ತ ಚಿತ್ತಗಳ ವಿಷಯಗಳನ್ನು ಸೂಕ್ಷ್ಮವಾಗಿ ಕಾಣಬಹುದು.

**ಕೇವಲಜ್ಞಾನ**- ಜೀವರಿಗೆ ಉಂಟಾಗುವ ಜ್ಞಾನಗಳಲ್ಲಿ ಇದು ಎಲ್ಲಕ್ಕೂ ಹೆಚ್ಚಿನದು. ವಿಶ್ವದೊಳಗಿನ ಸಮಸ್ತ ವಿಷಯಗಳು ಈ ಜ್ಞಾನಕ್ಕೆ ಗೋಚರವಾಗುವುವು. ಇದನ್ನೇ ಸರ್ವಜ್ಞತೆ ಎಂದು ಹೇಳುವರು. ಪಾಶ್ಚಾತ್ಯ ಥಿಓಸೋಫಿಸ್ಟರು ಹೇಳುವ Omeniscience ಎಂಬುದೂ ಕೇವಲಜ್ಞಾನವೂ ಒಂದೇ. ಕೇವಲಜ್ಞಾನವು ಆತ್ಮನಿಂದಲೇ ಉಂಟಾಗುವುದು; ಇದಕ್ಕೆ ಇಂದ್ರಿಯಾದಿಗಳು ಬೇಡ. ಕೇವಲಜ್ಞಾನಿಯು ಮುಕ್ತಪುರುಷನು.

ಜೈನ ದರ್ಶನದಲ್ಲಿ ಜೀವ, ಅಜೀವ, ಆಸ್ರವ, ಬಂಧ, ಸಂವರ, ನಿರ್ಜರೆ, ಮೋಕ್ಷ ಎಂಬಿವು ಏಳು ತತ್ತ್ವಗಳು.

**ಜೀವ ಮತ್ತು ಅಜೀವ**- ಜೈನ ಮತದಲ್ಲಿ ಜೀವನು ಚೇತನಾದಿಗುಣಯುಕ್ತನು. ಸ್ವಭಾವದಿಂದ ಶುದ್ಧನಾದ ಜೀವನು ಅನಾದಿಕಾಲದಿಂದ ಅಜೀವ ಕರ್ಮತತ್ತ್ವದೊಡನೆ ಮಿಶ್ರಿತನಾಗಿರುವನು. ಈ ಕರ್ಮದಿಂದ ಬಿಡುಗಡೆಹೊಂದುವುದೇ ಮೋಕ್ಷವು.

**ಆಸ್ರವ**- ಸ್ವಭಾವದಿಂದ ಶುದ್ಧನಾದ ಜೀವನು ಜೀವಭಿನ್ನವಿಷಯಗಳಲ್ಲಿ ರಾಗದ್ವೇಷಗಳುಳ್ಳವನಾಗಲು ಆ ಜೀವನಲ್ಲಿ ಕರ್ಮಪುದ್ಗಲಗಳ ಆಸ್ರವವು ಎಂದರೆ ಪ್ರವೇಶವು ಉಂಟಾಗುವುದು. ಆಸ್ರವವು ಶುಭ ಅಶುಭ ಎಂದು ಎರಡು ಬಗೆಯಾಗಿದೆ. ಶುಭಾಸ್ರವದಿಂದ ಜೀವನು ಸ್ವರ್ಗಸುಖವನ್ನು ಪಡೆಯುವನು. ಅಶುಭಾಸ್ರವದಿಂದ ನರಕದುಃಖವನ್ನನುಭವಿಸುವನು. ಆಸ್ರವಕಾಲದಲ್ಲಿ ಜೀವನಲ್ಲಿ ಪ್ರವಿಷ್ಟವಾಗುವ ಕರ್ಮ ಪುದ್ಗಲಗಳ ಪ್ರಕೃತಿಯು ಎಂಟು ಬಗೆಯಾಗಿದೆ. ಅವು ಜ್ಞಾನಾವರಣೀಯಕರ್ಮ ದರ್ಶನಾವರಣೀಯ ಕರ್ಮ, ಮೋಹನೀಯಕರ್ಮ, ವೇದನೀಯಕರ್ಮ ಆಯುಕರ್ಮ ನಾಮಕರ್ಮ, ಗೋತ್ರಕರ್ಮ, ಅಂತರಾಯಕರ್ಮ.

ಜೀವನ ಸ್ವಾಭಾವಿಕವಾದ ಜ್ಞಾನವನ್ನು ಆಚ್ಛಾದಿಸುವ ಕರ್ಮವು ಜ್ಞಾನಾವರಣೀಯವು; ಜೀವನ ಸ್ವಾಭಾವಿಕವಾದ ದರ್ಶನಗುಣವನ್ನು ಆಚ್ಛಾದಿಸುವ ಕರ್ಮವು ದರ್ಶನಾವರಣೀಯುವು; ಜೀವನ ಸಮ್ಯಕ್ತ್ವವನ್ನೂ, ಚಾರಿತ್ರಗುಣವನ್ನೂ ಘಾತಿಸಿ ಜೀವನಿಗೆ ಅತತ್ತ್ವಗಳಲ್ಲಿ ಶ್ರದ್ಧೆಯನ್ನೂ ಲೋಭವನ್ನೂ ಉಂಟುಮಾಡುವುದು ಮೋಹನೀಯಕರ್ಮವು. ವೇದನೀಯಕರ್ಮದಿಂದ ಸುಖದುಃಖರೂಪ ಸಾಮಗ್ರಿಯುಂಟಾಗುವುದು. ಆಯುಃಕರ್ಮದಿಂದ ಜೀವನು ಮನುಷ್ಯಾಯುಸ್ಸು ಮೊದಲಾದುವನ್ನು ಪಡೆಯುವನು. ನಾಮಕರ್ಮದಿಂದ ಜೀವನಿಗೆ ಮನುಷ್ಯಾದಿ ಗತಿ, ಜಾತಿ, ಶರೀರ ಮೊದಲಾದುವು ಬರುವುವು. ಗೋತ್ರಕರ್ಮದಿಂದ ಉಚ್ಚ, ನೀಚ ಗೋತ್ರವು ಬರುವುದು. ಅಂತರಾಯಕರ್ಮದಿಂದ ದಾನಾದಿ ಸತ್ಕಾರ್ಯಗಳಲ್ಲಿ ವಿಘ್ನವುಂಟಾಗುವುದು. ಈ ಎಂಟು ಬಗೆಯ ಕರ್ಮಗಳಲ್ಲಿ ಗಳಲ ಭೇದಗಳಿರುವುವು.

**ಬಂಧ**- ಮೇಲೆ ಹೇಳಿದ ಕರ್ಮರೂಪ ಪುದ್ಗಲಗಳ ಆಸ್ರವವಾಗಲು ಸ್ವಭಾವದಿಂದ ಮುಕ್ತನಾದ ಜೀವನು ಬದ್ಧನಾಗುವನು. ಹೀಗೆ ಅಜೀವ- ಕರ್ಮಪುದ್ಗಲಗಳೊಡನೆ ಜೀವನು ಏಕೀಭೂತನಾಗುವುದೇ ಬಂಧವು.

**ಸಂವರ**- ಸಂಸಾರದಲ್ಲಿ ತೊಳಲಾಡುವ ಜೀವರಲ್ಲಿ ಕರ್ಮಾಸ್ರವವು ಯಾವುದರಿಂದ ನಿರೋಧಿಸಲ್ಪಡುವುದೋ ಅದು ಸಂವರವು. ಸಂವರವು ಬದ್ಧ ಜೀವನಿಗೆ ಮೋಕ್ಷಮಾರ್ಗವನ್ನು ತೋರುವುದು. ಜೈನಮತದಲ್ಲಿ ತ್ರಿಗುಪ್ತಿಗಳು, ಪಂಚಸಮಿತಿಗಳು, ದಶಧರ್ಮಗಳು, ದ್ವಾದಶ ಅನುಪ್ರೇಕ್ಷೆಗಳು, ದ್ವಾವಿಂಶತಿಪರೀಷಹಜಯಗಳು, ಪಂಚಚಾರಿತ್ರಗಳು, ದ್ವಾದಶತಪಗಳು ಇವುಗಳಿಂದ ಸಂವರವು ಸಾಧಿಸಲ್ಪಡುವುದು.

**ನಿರ್ಜರೆ**- (ಆತ್ಮನಲ್ಲಿರುವ) ಕರ್ಮದ ಏಕದೇಶಕ್ಷಯವು ನಿರ್ಜರೆಯು. ಸವಿಪಾಕ, ಅವಿಪಾಕವೆಂದು ನಿರ್ಜರೆಯಲ್ಲಿ ಎರಡು ಭೇದಗಳು. ನಿರ್ದಿಷ್ಟಫಲ ಭೋಗಾನಂತರದಲ್ಲಿ ಕರ್ಮದ ಸ್ವಾಭಾವಿಕ ಕ್ಷಯವಾಗುವುದು ಸವಿಪಾಕ ನಿರ್ಜರೆಯು. ಫಲಭೋಗಕ್ಕಿಂತ ಪೂರ್ವದಲ್ಲಿ ಧ್ಯಾನಾದಿ ಸಾಧನಗಳಿಂದ ಕರ್ಮಕ್ಷಯವಾಗುವುದು ಅವಿಪಾಕನಿರ್ಜರೆಯು.

**ಮೋಕ್ಷ**- ಜೀವನ ಸಮಸ್ತ ಕರ್ಮಗಳ ಕ್ಷಯವಾದೊಡನೆ ಆತನು ಮೋಕ್ಷವನ್ನೈದುವನು. ಎಂದರೆ ಆತನು ತನ್ನ ಸ್ವಾಭಾವಿಕ ಸ್ಥಿತಿಯನ್ನು ಪಡೆಯುವನು. ಜೈನಮತದಲ್ಲಿ ಮೋಕ್ಷಮಾರ್ಗದಲ್ಲಿ ಹದಿನಾಲ್ಕು ಮೆಟ್ಟಲುಗಳು (ಚತುರ್ದಶ ಗುಣಸ್ಥಾನಗಳು) ಉಂಟು. ಅವುಗಳ ಹೆಸರುಗಳೂ ವಿವರಣೆಯೂ ಮುಂದೆ ಕೊಟ್ಟಿವೆ.

**ಮೋಕ್ಷಮಾರ್ಗ**- ಸಮ್ಯಗ್‌ದರ್ಶನ, ಸಮ್ಯಗ್‌ಜ್ಞಾನ, ಸಮ್ಯಕ್‌ಚಾರಿತ್ರಗಳೆಂಬಿವು ಒಟ್ಟಾದರೆ ಮೋಕ್ಷಪ್ರಾಪಕವಾಗುವುವೆಂದು ಜೈನಾಚಾರ್ಯರು ಹೇಳುವರು. ಇವನ್ನು ಜೈನರು ರತ್ನತ್ರಯವೆಂದು ಹೇಳುವರು.

**ಸಮ್ಯಗ್ದರ್ಶನ**- ಹಿಂದೆ ಹೇಳಿದ ಜೀವಾಜೀವಾದಿ ಸಪ್ತ ತತ್ತ್ವಗಳಲ್ಲಿ ನಿಶ್ಚಲವಾದ ಶ್ರದ್ಧೆಯು ಸಮ್ಯಗ್ದರ್ಶನವು.

**ಸಮ್ಯಗ್‌ಜ್ಞಾನ**- ಸಂಶಯ, ವಿಪರ್ಯಯ, ಅನಧ್ಯವಸಾಯಗಳೆಂಬೀ ಮೂರು, ಸಮಾರೋಪಗಳು ಎಂದರೆ ಭ್ರಾಂತಿಗಳು, ಸಮಾರೋಪ ರಹಿತವಾದ ಜ್ಞಾನವೇ ಸಮ್ಯಗ್‌ಜ್ಞಾನವು.

**ಸಮ್ಯಕ್‌ಚಾರಿತ್ರ**- ರಾಗದ್ವೇಷರಹಿತನಾಗಿ ಪವಿತ್ರಾಚರಣಗಳನ್ನಾಚರಿಸುವುದು ಸಮ್ಯಕ್‌ಚಾರಿತ್ರವು.

---

## ನಯಗಳು.

ಅನಿರಾಕೃತಪ್ರತಿಪಕ್ಷೋ ವಸ್ತ್ವಂಶಗ್ರಾಹೀ ಜ್ಞಾತುರಭಿಪ್ರಾಯೋನಯಃ । (ಪ್ರಮೇಯ ಕಮಲಮಾರ್ತಂಡ) ಪ್ರತಿಪಕ್ಷನಿರಾಕರಣಮಾಡದೆ (ಪ್ರಮಾಣದಿಂದ ಗೃಹೀತವಾದ) ವಸ್ತುವಿನ ಅಂಶವನ್ನು ಗ್ರಹಿಸುವ ಜ್ಞಾತೃವಿನ ಅಭಿಪ್ರಾಯವು ನಯವು. ವಸ್ತುವನ್ನು ನಾನಾಸ್ವಭಾವಗಳಿಂದ ವ್ಯಾವರ್ತನಮಾಡಿ ಒಂದು ಸ್ವಭಾವದಲ್ಲಿ ತಂದು ನಿಲ್ಲಿಸುವುದು (ನಯತೀತಿನಯಃ) ನಯವು.

ನಯದಲ್ಲಿ ನಿಶ್ಚಯನಯವೆಂದೂ, ವ್ಯವಹಾರನಯವೆಂದೂ ಎರಡು ಮೂಲ ಭೇದಗಳುಂಟು. ನಿಶ್ಚಯನಯದಲ್ಲಿ ಶುದ್ಧ ನಿಶ್ಚಯನಯವೆಂದೂ, ಅಶುದ್ಧನಿಶ್ಚಯನಯವೆಂದೂ ಎರಡು ಭೇದಗಳು. ಉದಾಃ ಕರ್ಮಸಂಬಂಧವಿಲ್ಲದ ಕೇವಲಜ್ಞಾನಾದಿ ಶುದ್ಧಗುಣಗಳು ಜೀವವೆಂದು ಹೇಳುವುದು ಶುದ್ಧನಿಶ್ಚಯನಯವು. ಕರ್ಮಸಂಬಂಧದಿಂದುಂಟಾಗುವ ರಾಗದ್ವೇಷಾದಿ ಅಶುದ್ಧಗುಣಗಳು ಜೀವವೆಂದು ಹೇಳುವುದು ಅಶುದ್ಧ ನಿಶ್ಚಯ ನಯವು. ಇವಲ್ಲದೆ ನಯಗಳು ದ್ರವ್ಯಾರ್ಥಿಕ, ಪರ್ಯಾಯಾರ್ಥಿಕ ಎಂದು ಎರಡು ಬಗೆಯಾಗಿವೆ. ದ್ರವ್ಯಾರ್ಥಿಕನಯವು ನೈಗಮ, ಸಂಗ್ರಹ, ವ್ಯವಹಾರ ಎಂದು ಮೂರು ಬಗೆಯಾಗಿದೆಯೆಂದೂ, ಪರ್ಯಾಯಾರ್ಥಿಕ ನಯವು ಋಜುಸೂತ್ರ, ಶಬ್ದ, ಸಮಭಿರೂಢ ಏವಂಭೂತ ಎಂದು ನಾಲ್ಕು ಬಗೆಯಾಗಿದೆಯೆಂದೂ ಹಿಂದೆ ಹೇಳಿದೆ. ದ್ರವ್ಯಾರ್ಥಿಕ ನಯದಲ್ಲಿ ಶುದ್ಧ ದ್ರವ್ಯವೇ ಪ್ರಯೋಜನವಾಗಿ ಉಳ್ಳುದು ಶುದ್ಧ ದ್ರವ್ಯಾರ್ಥಿಕವು; ಅಶುದ್ಧ ದ್ರವ್ಯವೇ ಪ್ರಯೋಜನವಾಗಿ ಉಳ್ಳುದು ಅಶುದ್ಧ ದ್ರವ್ಯಾರ್ಥಿಕವು.

**ಜೈನಮತದಲ್ಲಿ ಈಶ್ವರವಾದ** ಸುವ್ಯವಸ್ಥಿತವಾಗಿಯೂ, ಚಿತ್ರವಿಚಿತ್ರವಾಗಿಯೂ ಇರುವ ಈ ಅನಂತವಾದ ವಿಶ್ವವನ್ನು ಸರ್ವಜ್ಞನೂ ಸರ್ವತಂತ್ರಸ್ವತಂತ್ರನೂ ಆದ ಒಬ್ಬ ಪರಮೇಶ್ವರನು ಸೃಜಿಸಿ ಇದಕ್ಕೆ ಚಾಲಕನಾಗಿರುವನೆಂದು ಅನಾದಿಕಾಲದಿಂದ ಮನುಷ್ಯನು ನಂಬುತ್ತ ಬಂದಿರುವನು. ಹಿಂದುಗಳೂ, ಮುಸಲ್ಮಾನರೂ, ಕ್ರಿಶ್ಚಿಯನರೂ ಯಹೂದಿಯರೂ ದೇವರು ಸೃಷ್ಟಿಯನ್ನುಂಟು ಮಾಡಿದನೆಂದು ಹೇಳುವರು. ಗಡಿಯಾರದಲ್ಲಿ ಮುಳ್ಳು, ಚಕ್ರ, ತಂತಿಯ ಸಿಂಬಿ ಮೊದಲಾದುವು ಸುವ್ಯವಸ್ಥಿತವಾಗಿ ಕೆಲಸ ಮಾಡುತ್ತಿರುವುದನ್ನು ನೋಡಿದರೆ ಆ ಗಡಿಯಾರಕ್ಕೆ ಒಬ್ಬ ಬುದ್ಧಿವಂತನಾದ ಕರ್ತೃವು (Maker) ಇರಬೇಕೆಂದು ಸ್ಪಷ್ಟವಾಗಿ ಕಂಡು ಬರುವಂತೆ ಸುವ್ಯವಸ್ಥೆಯಿಂದ ನಡೆಯುವ ಗ್ರಹ ನಕ್ಷತ್ರಾದಿಗಳಿಂದಲೂ ಅಸಂಖ್ಯ ಪ್ರಾಣಿ ವನಸ್ಪತಿಗಳಿಂದಲೂ ತುಂಬಿದ ಈ ಸೃಷ್ಟಿಗೆ ಸರ್ವವನ್ನು ಅರಿತವನಾದ ಒಬ್ಬ ಕರ್ತೃವಿರುವನು, ಅವನೇ ಈಶ್ವರನು, ಜಗತ್ತಿನ ನಿರ್ಮಾಣವು ಆತನ ಅಪಾರವಾದ ಕರುಣೆಯ ಫಲವು ಎಂದು ಪಾಶ್ಚಾತ್ಯದಾರ್ಶನಿಕರಾದ ಪಾಲಿ, ಜಾನ್ಸಿ, ಫ್ಲಿಂಟ್ ಮೊದಲಾದವರು ಹೇಳುವರು. ಈ ಮತಕ್ಕೆ ಥಿಇಜಂ (Theism) ಎಂಬ ಹೆಸರು. ಭರತಖಂಡದಲ್ಲಿಯೂ ಪ್ರಾಚೀನಕಾಲದಲ್ಲಿಯೇ ನೈಯಾಯಿಕರೂ ವೈಶೇಷಿಕರೂ ಇದೇ ತರದ ಯುಕ್ತಿಯಿಂದ ಈಶ್ವರನ ಅಸ್ತಿತ್ವವನ್ನು ಸಾಧಿಸಿದರು.

" ಕಾರ್ಯಮಪಿ ಈಶ್ವರೇ ಲಿಂಗಂ; ತಥಾಹಿ:– ಕ್ಷಿತ್ಯಂಕುರಾದಿಕಂ ಸಕರ್ತೃಕಂ ಕಾರ್ಯತ್ವಾತ್ ಘಟವತ್'' ಘಟವು ಕಾರ್ಯವಾದುದರಿಂದ ಅದಕ್ಕೆ ಹೇಗೆ ಒಬ್ಬ ಕರ್ತೃವಿರುವನೋ ಹಾಗೆ ಕ್ಷಿತಿ, ಅಂಕುರ ಮೊದಲಾದುವು ಕಾರ್ಯಗಳಾದುದರಿಂದ ಅವುಗಳಿಗೂ ಒಬ್ಬ ಕರ್ತೃ (ಈಶ್ವರನು) ಇರುವನು.

ಈ ಸೃಷ್ಟ್ಯವಾದದ ವಿಷಯವಾಗಿ ಹಲವು ಆಕ್ಷೇಪಣೆಗಳುಂಟು. ಜಗತ್ತಿನ ಉತ್ಪತ್ತಿಯ ವಿಷಯದಲ್ಲಿ ಯಾರ ಬುದ್ಧಿಪ್ರಯೋಗವೂ ಬೇಕಾಗಿಲ್ಲ. ಗ್ರಹನಕ್ಷತ್ರಾದಿಗಳಲ್ಲಿ ಕಂಡುಬರುವ ಸುವ್ಯವಸ್ಥೆಯು ಜಡಪದಾರ್ಥಗಳೊಳಗಿನ ಕೆಲವು ನಿಯಮಗಳ ಫಲವು. ಭೂಗರ್ಭದೊಳಗಿನ ಶಿಲಾಸ್ತರ ಮೊದಲಾದುವು ಕೂಡ ಜಡಪದಾರ್ಥಗಳ ಉದಾಹರಣೆಯಾಗಿವೆ. ಜೀವಜಂತುಗಳ ಉತ್ಪತ್ತಿಗೂ ಜಡಪ್ರಕೃತಿಯು ಕಾರಣವಲ್ಲದೆ ಬುದ್ಧಿಮತ್ತೆಯು ಕಾರಣವಲ್ಲ. ಪ್ರಾಣಿಗಳ ಅಂಗಪ್ರತ್ಯಂಗಗಳು ಜೀವಿಗಳಿಗೆ ನಿಷ್ಪ್ರಯೋಜಕವಾಗಿವೆ; ಕೆಲವು ಬಾಧಕವಾಗಿಯೂ ಇವೆ. ಎಷ್ಟೋ ಜೀವಿಗಳು ವ್ಯರ್ಥವಾಗಿ ಮರಣಹೊಂದುವುದಕ್ಕೂ ಅಕಾಲದಲ್ಲಿ ಮರಣಹೊಂದುವುದಕ್ಕೂ ಮಿತಿಯೇ ಇಲ್ಲ. ಇದೆಲ್ಲವನ್ನು ಕಂಡು ಹಲವು ಜನ ದಾರ್ಶನಿಕರು ಸೃಷ್ಟ್ಯವಾದವನ್ನು ನಿರಾಕರಿಸುತ್ತಾರೆ. ಇದಲ್ಲದೆ ಈಶ್ವರನಿಗೆ ಜಗತ್‌ಸೃಷ್ಟಿಯನ್ನು ಮಾಡುವಲ್ಲಿ ಪ್ರಯೋಜನವುಂಟಾಯಿತೆಂದು

ಹೇಳಿದರೆ ಆತನು ಸಮಯರ್ಯಾದ (Finite) ನೆಂದು ಹೇಳಿದಂತಾಯಿತೆಂದು ಪ್ರತಿಪಾದಿಸುವರು. ಇದಲ್ಲದೆ ಸುಖದುಃಖಗಳ ವಿಷಮತೆಯುಳ್ಳ ಈ ಸೃಷ್ಟಿಯಲ್ಲಿ ಈಶ್ವರನ ಕರುಣೆಯೇನೂ ತೋರುವುದಿಲ್ಲವೆಂದು ಹೇಳುವರು.

ಕ್ಷಿತ್ಯಂಕುರಾದಿ ದ್ರವ್ಯಗಳು ಪರ್ಯಾಯರೂಪದಿಂದ ಕಾರ್ಯಗಳಾದರೂ ದ್ರವ್ಯದೃಷ್ಟಿಯಿಂದ ಅವು ನಿತ್ಯವಾಗಿವೆ. ಈಶ್ವರನು ಜಗತ್ಕರ್ತೃವೆಂದು ಹೇಳಿದರೆ ಜ್ಞಾನಚಿಕೀರ್ಷಾಪ್ರಯತ್ನಗಳುಳ್ಳ ಕರ್ತೃವು ಸಶರೀರನಾಗಿರಬೇಕಾಗುವುದು. ಸಶರೀರನು ಸಮಯರ್ಯಾದನಾಗಬೇಕು.

ಭಾರತೀಯ ದಾರ್ಶನಿಕರಲ್ಲಿ ಕಪಿಲನು ಯೋಗದರ್ಶನಕಾರನಾದ ಪತಂಜಲಿಯ ಈಶ್ವರವಾದವನ್ನು ಸ್ವೀಕರಿಸಿಲ್ಲ. **ಈಶ್ವರಾಸಿದ್ಧೇಃ ।** ವಿಷಯಾಧ್ಯಾಯ. ಸೂ. ೯೦. ಅರ್ಥ- ಈಶ್ವರನು ಪ್ರಮಾಣದಿಂದ ಸಿದ್ಧನಾಗುವುದಿಲ್ಲ. ಮೀಮಾಂಸಕರೂ ಈಶ್ವರನನ್ನೊಪ್ಪುವುದಿಲ್ಲ. ಜೈನಮತವೂ ಈ ಈಶ್ವರಾಸ್ತಿತ್ವವನ್ನೊಪ್ಪುವುದಿಲ್ಲ ಜೈನಮತದಲ್ಲಿ ಮೋಕ್ಷವನ್ನು ಪಡೆದ ಜೀವರೇ ಸರ್ವಜ್ಞರು; ಆ ಸರ್ವಜ್ಞ ಜೀವರೇ ಈಶ್ವರರು. ಆದುದರಿಂದ ಜೈನರು ನಿರೀಶ್ವರವಾದಿಗಳು ಅಲ್ಲ; ಆದರೆ ಅವರು ಜಗತ್ಕರ್ತನಾದ ಈಶ್ವರನೊಬ್ಬನುಂಟೆಂಬುದನ್ನು ಒಪ್ಪುವುದಿಲ್ಲ.

ಈ ವರೆಗೆ ಹೇಳಿದ ಜೈನಮತದ ಸಂಕ್ಷಿಪ್ತ ವಿವರಣೆಯಿಂದ ಇದೊಂದು ಭಾರತೀಯ ಪ್ರಾಚೀನ ದರ್ಶನಗಳಲ್ಲಿ ಪ್ರಮುಖವಾದುದೆಂದೂ, ಭಾರತೀಯ- ಅನೇಕ ದರ್ಶನಗಳು ತಲೆದೋರಿದ ಕಾಲದಲ್ಲಿಯೇ ಇದೂ ತಲೆದೋರಿತೆಂದೂ, ಈ ದರ್ಶನವೂ ಜಗತ್ತು ಜೀವ ಮೊದಲಾದ ವಿಚಾರಣೀಯ ವಿಷಯಗಳನ್ನು ಚೆನ್ನಾಗಿ ಪ್ರತಿಪಾದಿಸಿದೆಯೆಂದೂ, ಇತರ ದರ್ಶನಗಳಿಗಿಂತ ಕರ್ಮವಾದ, ಈಶ್ವರವಾದ ಮೊದಲಾದ ವಿಷಯಗಳಲ್ಲಿ ಇದು ಸ್ವತಂತ್ರವಿಚಾರಗಳನ್ನು ಪ್ರಕಟಿಸಿದೆಯೆಂದೂ ಸ್ಪಷ್ಟವಾಗುವುದು. ಮುಂದಿನ ಅಧ್ಯಾಯಗಳಲ್ಲಿ ಜೈನಮತದ ತತ್ತ್ವಗಳ ವಿಸ್ತೃತ ವಿವೇಚನೆಯನ್ನು ಹೇಳುವೆವು.

---

## ೨ ತತ್ತ್ವಗಳು.

ಜೈನಮತದಲ್ಲಿ ತತ್ತ್ವಗಳು ಇಲ್ಲವೆ ಪ್ರಮೇಯ ಪದಾರ್ಥಗಳು ಏಳು. ಅವು ಜೀವ, ಅಜೀವ, ಆಸ್ರವ, ಬಂಧ, ಸಂವರ, ನಿರ್ಜರಾ, ಮೋಕ್ಷ. ಕೆಲವರು ಈ ಏಳನ್ನೂ ಜೀವ ಅಜೀವ ಎಂದು, ಇಲ್ಲವೆ ಚಿತ್ ಅಚಿತ್ ಎಂದು ಎರಡಾಗಿ ವಿಭಾಗಿಸುವರು. ಕೆಲವರು ಮೇಲೆ ಹೇಳಿದ ಏಳು ತತ್ತ್ವಗಳಲ್ಲಿ ಪುಣ್ಯಪಾಪ ಎಂಬಿವೆರಡನ್ನು ಸೇರಿಸಿ ಒಂಬತ್ತು ತತ್ತ್ವಗಳೆಂದು ಹೇಳುವರು. ಪುಣ್ಯಪಾಪಗಳು ಬಂಧ ತತ್ತ್ವದಲ್ಲಿ ಅಂತರ್ಭೂತವಾಗುವುವು.

ಜೀವ ಮತ್ತು ಅಜೀವ ಇವೆರಡಕ್ಕೂ ಕೂಡಿ ದ್ರವ್ಯ ಎಂಬ ಹೆಸರು; ದ್ರವ್ಯಕ್ಕೆ ಉತ್ಪತ್ತಿವಿನಾಶಗಳು ಕಂಡು ಬರುವುದರಿಂದ ಬೌದ್ಧರು ದ್ರವ್ಯವು ಅನಿತ್ಯವೆಂದು ಹೇಳುವರು. ಆದರೆ ಮೇಲೆ ಮೇಲೆ ತೋರುವ ಉತ್ಪತ್ತಿ ವಿನಾಶ ಮೊದಲಾದ ಬದಲಾವಣೆಗಳ ತಳದಲ್ಲಿ ಇರುವ ತತ್ತ್ವವು ಯಾವಾಗಲೂ ವಿಕಾರರಹಿತವಾದುದು. ಏಕೆಂದರೆ- ಕಟಕ ಕುಂಡಲಾದಿ ಅಲಂಕಾರರೂಪವಾಗಿ ಪರಿವರ್ತಿತವಾದರೂ ಸುವರ್ಣವು ಅನುಗತವಾಗಿ ವಿಕಾರರಹಿತವಾಗಿರುವುದು. ಆದುದರಿಂದ ವೇದಾಂತಿಗಳು ಪರಿವರ್ತನವಾದವನ್ನು ಬಿಟ್ಟು ದ್ರವ್ಯವು ನಿತ್ಯಸತ್ ಎಂದೂ ವಿಕಾರರಹಿತವೆಂದೂ ಹೇಳುವರು. ಆದರೆ ಸ್ಯಾದ್ವಾದಿಗಳಾದ ಜೈನರು ಎರಡೂ ಮತಗಳನ್ನು ಕೆಲವು ಅಂಶದಿಂದ ಸ್ವೀಕರಿಸುವರು. ಈ ಮತದಲ್ಲಿ ದ್ರವ್ಯವು ಸತ್ ಆಗಿರುವುದಲ್ಲದೆ ಪರಿವರ್ತನಶೀಲವೂ ಆಗಿದೆ. ಆದುದರಿಂದ ದ್ರವ್ಯವು ಉತ್ಪಾದ, ವ್ಯಯ, ಧ್ರೌವ್ಯ ಯುಕ್ತವೆಂದು ಹೇಳುವರು. ಎಂದರೆ ದ್ರವ್ಯಕ್ಕೆ ಉತ್ಪತ್ತಿಯುಂಟು; ವಿನಾಶವುಂಟು; ಮತ್ತು ದ್ರವ್ಯದಲ್ಲಿ ಉತ್ಪತ್ತಿವಿನಾಶಗಳೊದಗಿದರೂ ಈ ಪರಿವರ್ತನಗಳಲ್ಲಿ ಅವಿಕೃತವಾಗಿಯೂ, ಅಪರಿವರ್ತಿತವಾಗಿಯೂ ಇರುವ ತತ್ತ್ವವು ಉಂಟು.

ದ್ರವ್ಯದೊಡನೆ ಅವಿಚ್ಛಿನ್ನ ಸಂಬಂಧವುಳ್ಳುದೂ, ಯಾವುದು ಇಲ್ಲದಿದ್ದರೆ ದ್ರವ್ಯವೇ ಇರುವುದಿಲ್ಲವೋ ಅದು **ಗುಣ**ವೆನಿಸುವುದು. ದ್ರವ್ಯವು ಸ್ವಾಭಾವಿಕವಾಗಿ ವಿಕಾರರಹಿತವಾದುದಾದರೂ ಅನಂತ ಪರಿವರ್ತನಗಳಲ್ಲಿ ಆದ್ರವ್ಯದ ತೋರಿಬರುವಿಕೆಯೇ **ಪರ್ಯಾಯ**ವು.

---

## ಜೀವತತ್ತ್ವ. ೧

ಸಾಂಖ್ಯಯೋಗಗಳ ಪುರುಷನೂ, ನ್ಯಾಯವೈಶೇಷಿಕವೇದಾಂತಗಳ ಆತ್ಮನೂ ಜೈನರ ಜೀವನೂ ಸಾಮಾನ್ಯವಾಗಿ ಒಂದೇ. ಇವರಲ್ಲಿ ಭೇದವೂ ಉಂಟು. ಜೀವನು ಚೈತನ್ಯಸ್ವರೂಪ, ಅಮೂರ್ತ, ಸಂಸಾರಿದಶೆಯಲ್ಲಿ ಕರ್ಮಪರವಶ, ಕರ್ತೃ, ಫಲಭೋಕ್ತೃ, ದೇಹಪರಿಮಾಣ, ಉಪಯೋಗ ವಿಶಿಷ್ಟ, ಪ್ರತಿಕ್ಷೇತ್ರ ವಿಭಿನ್ನ, ಊರ್ಧ್ವಗತಿಶೀಲ, ಪ್ರಭು ಎಂಬೀ ಲಕ್ಷಣವುಳ್ಳವನು.

ಜೀವನು ಪಂಚೇಂದ್ರಿಯಗಳು, ಮನೋವಾಕ್ಕಾಯಬಲಗಳು, ಆಯುಷ್ಯ ಶ್ವಾಸೋಚ್ಛ್ವಾಸ ಎಂಬೀ ಹತ್ತು ದ್ರವ್ಯಪ್ರಾಣಗಳನ್ನೂ, ಜ್ಞಾನದರ್ಶನಗಳೆಂಬ ಭಾವಪ್ರಾಣಗಳನ್ನೂ ಧರಿಸುವವನು. ನಾನು ಸುಖಿ ನಾನು ದುಃಖಿ ಮೊದಲಾದ ಸ್ವಸಂವೇದನಗಳಲ್ಲಿ ನಾನು ಎಂಬ ಪದದಿಂದ ಹೇಳಲ್ಪಡುವವನೇ ಜೀವನು.

**ಚಾರ್ವಾಕರು** ಹೇಳುವುದೇನೆಂದರೆ:— ಜೀವ (ಆತ್ಮ) ಎಂಬುದು ಇಲ್ಲ. ಪೃಥ್ವಿ, ಜಲ, ತೇಜ, ವಾಯು ಎಂಬೀ ನಾಲ್ಕು ಭೂತಗಳ ಹೊರತು ಬೇರೆ ಪದಾರ್ಥವೇ ಇಲ್ಲ. ಜಗತ್ತಿನೊಳಗಿನ ಎಲ್ಲ ಪದಾರ್ಥಗಳು ಈ ನಾಲ್ಕುಭೂತಗಳ ಸಂಮಿಶ್ರಣದಿಂದ ಉಂಟಾಗಿರುವುವು. ಮನುಷ್ಯಾದಿ ಪ್ರಾಣಿಗಳಲ್ಲಿ ಚೈತನ್ಯವು ಕಂಡುಬಂದರೂ ಆತ್ಮವೆಂಬ ಬೇರೆ ಪದಾರ್ಥವುಂಟೆಂದು ಹೇಳುವ ಅವಶ್ಯವಿಲ್ಲ. ಪಿಷ್ಟೋದಕಗುಡಧಾತಕೀಸಂಯೋಗದಿಂದ ಮದವಿಕಾರವು ಹೇಗೆ ಉತ್ಪನ್ನವಾಗುವುದೋ ಹಾಗೆ ದೇಹಾಕಾರವಾಗಿ ಪರಿಣಮಿಸಿದ ಪೃಥಿವ್ಯಪ್ತೇಜೋವಾಯುಗಳಿಂದ ಗರ್ಭಾದಿಮರಣ ಪರ್ಯಂತವಾಗಿ ದೇಹದಲ್ಲಿ ಚೈತನ್ಯವು ಪರಿಣಮಿಸುವುದು. ಈಗಿನ ಜಡವಾದಿದಾರ್ಶನಿಕರು ಯಕೃತ್ತಿನಿಂದ ಒಂದು ತರದ ರಸವು ಹೊರಡುವಂತೆ ಮಸ್ತಿಷ್ಕದಿಂದ ಚೈತನ್ಯವು ಉತ್ಪನ್ನವಾಗುವುದೆಂದೂ, ಆತ್ಮನೆಂಬ ಜಡಭಿನ್ನಪದಾರ್ಥವನ್ನು ಒಪ್ಪುವ ಅವಶ್ಯವಿಲ್ಲವೆಂದೂ ಹೇಳುವರು.

ಇದಕ್ಕೆ ಉತ್ತರವೇನೆಂದರೆ- ಪಿಷ್ಟೋದಕಾದಿ ಜಡಗಳ ಪರಿಣಾಮವೂ ಜಡವೇ ಅಹುದು. ಯಕೃತ್ತಿನಿಂದ ಹೊರಡುವ ರಸವು ಜಡವಾದುದೇ ಸರಿ; ಜಡದಿಂದ ಜಡವೇ ಹುಟ್ಟುವುದು; ಮಸ್ತಿಷ್ಕದಿಂದ ಹೊರಡುವ ರಸವೂ ಜಡವಾದುದೇ. ಆದುದರಿಂದ ಜಡದಿಂದ ಸಂಪೂರ್ಣಭಿನ್ನವಾದ ಚೈತನ್ಯವು ಜಡವಾದ ಮಸ್ತಿಷ್ಕದಿಂದ ಹೇಗೆ ಉಂಟಾದೀತು?

ಈ ಕಾರಣದಿಂದಲೇ ಈ ಕಾಲದ ಅಧ್ಯಾತ್ಮವಾದಿ ದಾರ್ಶನಿಕರು ಜಡವಾದವನ್ನು ಬಿಟ್ಟು ಚೈತನ್ಯವೆಂಬುದು ಜಡಭಿನ್ನವಾದುದುಂಟೆಂದು ಒಪ್ಪುವರು.

ಬೌದ್ಧರು ಚೈತನ್ಯವು ಜಡಗಳಿಂದ ಉಂಟಾದುದೆಂದು ಹೇಳುವುದಿಲ್ಲ ಅವರು ಕ್ಷಣಿಕವಾದ ವಿಜ್ಞಾನಗಳನ್ನು ಒಪ್ಪಿ ಜಡವಾದವನ್ನು ನಿರಾಕರಿಸುವರು. ಜೈನರೂ ಕೂಡ ಜೀವನಲ್ಲಿ ಚೈತನ್ಯವನ್ನೊಪ್ಪಿ ಜಡವಾದವನ್ನು ನಿರಾಕರಿಸುವರು

**ಚಾರ್ವಾಕಮತನಿರಾಸ**— ಚೈತನ್ಯವು ಜಡಶರೀರದ ಪರಿಣಾಮವಾಗಿದ್ದರೆ ಪ್ರಾಣಿಯು ಮೃತವಾದರೂ ಅದರಲ್ಲಿ ಚೈತನ್ಯವು ಯಥಾಪೂರ್ವವಾಗಿ ಉಳಿಯುತ್ತಿತ್ತು. ಏಕೆಂದರೆ ಮೃತಾವಸ್ಥೆಯಲ್ಲಿ ಶರೀರವು ಮೊದಲಿನಂತೆಯೇ ಇರುವುದು ಆದುದರಿಂದ ಜಡಶರೀರವು ಚೈತನ್ಯದ ಕಾರಣವೆಂದು ಹೇಳುವುದು ಸರಿಯಲ್ಲ. ಇನ್ನು ಶರೀರವು ಚೈತನ್ಯದ ಸಹಕಾರಿ ಕಾರಣವೆಂಬುದೂ ಕೂಡುವುದಿಲ್ಲ. ಏಕೆಂದರೆ ಚೈತನ್ಯದ ಉಪಾದಾನ ಕಾರಣವು ಅಶರೀರವೂ ಅಜಡವೂ ಆದ ಇನ್ನೊಂದು ಉಂಟೆಂದು ಒಪ್ಪಬೇಕಾಗುವುದು; ಇದು ಚಾರ್ವಾಕಮತಕ್ಕೆ ವಿರುದ್ಧ

ವಾದುದು. ಇನ್ನು ಶರೀರವು ಚೈತನ್ಯದ ಉಪಾದಾನ ಕಾರಣವಾಗಲಾರದು. ಹಾಗೆ ಆದರೆ, ಚೈತನ್ಯದಲ್ಲಿ ಶರೀರದ ಎಂದರೆ ಪೃಥ್ವ್ಯಾದಿಭೂತಗಳ ಗಂಧಾದಿಗುಣಗಳು ಕಂಡು ಬರಬೇಕಾಗಿತ್ತು; ಮತ್ತು ಶರೀರದ ಪ್ರತಿ ಒಂದು ವಿಕಾರದೊಡನೆ ಚೈತನ್ಯದ ವಿಕಾರವೂ ಕಂಡುಬರಬೇಕಾಗಿತ್ತು. ಇದಲ್ಲದೆ ಹರ್ಷ ವಿಷಾದ ಮೂರ್ಛಾ ನಿದ್ರಾ ಧೃತಿ ಶೋಕಾದಿ ಚೈತನ್ಯ ವಿಕಾರಗಳಿಗೆ ಅನುರೂಪವಾದ ವಿಕಾರಗಳು ಶರೀರದಲ್ಲಿ ಕಂಡುಬರುವುದಿಲ್ಲ. ಕೆಲವೆಡೆ ಮಹಾಶರೀರಗಳಲ್ಲಿ ಪ್ರಾಣಿಗಳ ಬುದ್ಧಿಯು ಅಲ್ಪವಾಗಿಯೂ ಅಲ್ಪಶರೀರವುಳ್ಳ ಪ್ರಾಣಿಗಳ ಬುದ್ಧಿಯು ಅಧಿಕವಾಗಿಯೂ ಇರುವುದು ಕಂಡುಬರುವುದು. ಇನ್ನು ಚೈತನ್ಯಸ್ವಭಾವವುಳ್ಳ ಅಹಂ ( ನಾನು ) ಎಂಬ ಜ್ಞಾನವು ಯಾವಾಗಲೂ ಇರುತ್ತದಷ್ಟೆ; ಈ ಜ್ಞಾನವು ಶರೀರದಿಂದ ಉಂಟಾಗುವುದೆಂದು ಹೇಳಲಾಗುವುದಿಲ್ಲ. ಏಕೆಂದರೆ, ನನ್ನ ಶರೀರ ಎಂಬ ಜ್ಞಾನದಲ್ಲಿ ನಾನು ಎಂಬುದು ಶರೀರದಿಂದ ಭಿನ್ನವಾದುದೆಂಬುದು ಸ್ಪಷ್ಟಪಡುವುದು.

ಇನ್ನು ಪಿಷ್ಟೋದಕಾದಿಗಳಿಂದ ಮದಶಕ್ತಿಯು ಪ್ರಕಟವಾಗುವಂತೆ ದೇಹದಿಂದ ಚೈತನ್ಯಶಕ್ತಿಯು ಪ್ರಕಟವಾಗುವುದೆಂದು ಚಾರ್ವಾಕರು ಹೇಳುವಾಗ ದೇಹಕ್ಕೆ ಉಪಾದಾನಕಾರಣವಾದ ಪ್ರತಿಪರಮಾಣುವಿನಲ್ಲಿ ಚೈತನ್ಯವು ಉಂಟಾಗುವುದೋ ಸಮಗ್ರ ದೇಹದಲ್ಲಿ ಉಂಟಾಗುವುದೋ ಎಂದು ಕೇಳುವೆವು. ಪ್ರತಿಪರಮಾಣುವಿನಲ್ಲಿ ಉಂಟಾಗುವುದೆಂದು ಹೇಳಿದರೆ ದೇಹದಿಂದ ಒಂದೊಂದು ಇಂದ್ರಿಯವನ್ನು ಕೊಯ್ದು ಬೇರೆ ಮಾಡಿದರೂ ಆ ಇಂದ್ರಿಯದಿಂದ ಅದರ ಕಾರ್ಯವಾಗುವುದೋ? ದೇಹದಿಂದ ನಾಲಗೆಯನ್ನು ಬೇರೆ ಮಾಡಿದರೆ ಅದು ರಸಗ್ರಹಣಮಾಡಬಲ್ಲುದೋ? ಒಂದು ಪೀಪಾಯಿ ತುಂಬ ಮದ್ಯದಲ್ಲಿ ಒಂದು ಗಾಜಿನ ಬಟ್ಟಲನಷ್ಟು ಮದ್ಯವನ್ನು ಬೇರೆ ತೆಗೆದುಕೊಂಡು ಒಬ್ಬನಿಗೆ ಕುಡಿಸಿದರೂ ಅವನಲ್ಲಿ ಮದವಿಕಾರವು ಕಂಡುಬರುವಂತೆ ಶರೀರದ ಭಿನ್ನವಾದ ಅವಯವಗಳಲ್ಲಿ ಪ್ರತ್ಯೇಕವಾಗಿ ಚೈತನ್ಯವು ಏಕೆ ಕಂಡುಬರಬಾರದು? ಶರೀರದ ಅವಯವಗಳು ಭಿನ್ನವಾದಾಗ ಅವುಗಳ ಚೈತನ್ಯವು ನಷ್ಟವಾಗುವುದಾದರೆ ಮದ್ಯದ ಭಾಗಕ್ಕೆ ಈ ಮಾತು ಏಕೆ ಅನ್ವಯಿಸಬಾರದು? ಅವಯವವನ್ನು ಬೇರೆ ಮಾಡಿದಾಗ ಅವರಲ್ಲಿ ಚೈತನ್ಯವು ನಷ್ಟವಾಗುವುದೆಂಬುದನ್ನು ಕೆಲವು ವೇಳೆ ಒಪ್ಪಿಕೊಂಡರೂ ಶರೀರದ ಉಳಿದ ಭಾಗದಲ್ಲಿ ಚೈತನ್ಯಶಕ್ತಿಯು ಏಕೆ ಕಂಡು ಬರಬೇಕು ? ಶರೀರದಿಂದ ಕೈಯನ್ನು ಬೇರೆ ಮಾಡಿದಾಗ ಕೈಯು ಶರೀರದ ಭಾಗವಾದುದರಿಂದ ಅದರಲ್ಲಿ ಚೈತನ್ಯಶಕ್ತಿಯು ನಷ್ಟವಾದರೆ ಕೈಯೆಂಬ ಅವಯವದಿಂದ ರಹಿತವಾದ ಉಳಿದ ಶರೀರವೂ ಭಾಗ

ವೇ! ಆದುದರಿಂದ (ಸಮಗ್ರ ಶರೀರವಲ್ಲ) ಅದರಲ್ಲಿ ಚೈತನ್ಯವು ಏಕೆ ಕಂಡು ಬರಬೇಕು? ಇನ್ನು ಪೂರ್ಣಶರೀರದಲ್ಲಿಯೇ ಚೈತನ್ಯವಿರುವುದೆಂದು ಹೇಳಿದರೆ ಕೈ, ಕಾಲು ಮೊದಲಾದ ಕೆಲವು ಅವಯವಗಳು ಇಲ್ಲದಿದ್ದರೂ ಅದರಲ್ಲಿ ಚೈತನ್ಯವು ಕಂಡುಬರುವುದರಿಂದ ಪೂರ್ಣಶರೀರದಲ್ಲಿಯೇ ಚೈತನ್ಯವಿರುವುದೆಂಬ ಮಾತು ಎಲ್ಲಿ ಉಳಿಯುವುದು? ಇದಲ್ಲದೆ ಪಿಷ್ಟೋದಕ ಗುಡಧಾತಕ್ಯಾದಿ ಸಂಯೋಗದಿಂದ ಉಂಟಾಗುವ ಮದ್ಯದಲ್ಲಿ ಮದಶಕ್ತಿಯೆಂಬುದು ಹೊಸದಾಗಿ ಎಲ್ಲಿ ಉಂಟಾಯಿತೆಂದು ಪ್ರತಿಪಕ್ಷಿಯನ್ನು ಕೇಳುವೆವು. ಮದ್ಯದಲ್ಲಿ ಆ ಶಕ್ತಿಯು ಉಂಟಾದುದು ನಿಜವಾದರೆ ಮದ್ಯತುಂಬಿದ ಪೀಪಾಯಿಗೇ ಮದ್ಯಪಾಯಿಗೆ ಆಗುವ ವಿಕಾರಗಳು ಏಕೆ ಆಗಬಾರದು? ನಿಜವಾಗಿ ನೋಡಿದರೆ ಮದ್ಯದ ಉಪಾದಾನಭೂತವಾದ ದ್ರವ್ಯಗಳು ಅವಸ್ಥಾಂತರವನ್ನು ಹೊಂದಿದುವೇ ಹೊರತು ಅವುಗಳಲ್ಲಿ ಹೊಸದೇನೂ ಉಂಟಾಗುವುದಿಲ್ಲ. ಮದ್ಯರೂಪವಾಗಿ ಪರಿಣತವಾದಾಗ ಆ ದ್ರವ್ಯಗಳು ಜೀವನ ಚೈತನ್ಯವನ್ನು ವಿಕಾರಗೊಳಿಸುವುವಿಷ್ಟೇ. ಆದುದರಿಂದ ಚೈತನ್ಯವು ಜೀವನ ಸ್ವರೂಪವಲ್ಲದೆ ಅದು ಭೂತಜನ್ಯವಾದುದಲ್ಲ.

ಚೈತನ್ಯವು ಜಡಪದಾರ್ಥಗಳ ವಿಕಾರವಲ್ಲವೆಂಬ ವಿಷಯದಲ್ಲಿ ಬೌದ್ಧರೂ ಜೈನರೂ ಏಕಮತ್ಯವುಳ್ಳವರಾದರೂ **ಬೌದ್ಧರು** ಆತ್ಮನೆಂಬ ಸತ್ಪದಾರ್ಥದ ಅಸ್ತಿತ್ವವನ್ನು ಒಪ್ಪುವುದಿಲ್ಲ. ಅವರು ಹೇಳುವುದೇನೆಂದರೆ— "ಸರ್ವಂ ಕ್ಷಣಿಕಂ ಕ್ಷಣಿಕಂ" ಎಲ್ಲವೂ ಕ್ಷಣಿಕವು. ಹಾಗೆಯೇ ಪ್ರತಿಕ್ಷಣದಲ್ಲಿ ವಿಜ್ಞಾನವು ಹುಟ್ಟುತ್ತಿರುವುದು; ಮತ್ತು ಕೂಡಲೆ ಲಯಹೊಂದುತ್ತಿರುವುದು. ಈ ನಿರನ್ವಯವಿನಾಶಿಗಳಾದ ವಿಜ್ಞಾನಗಳೇ ಜ್ಞಾನ, ಜ್ಞೇಯ, ಜ್ಞಾತೃ ಎಂಬ ವ್ಯವಹಾರಕ್ಕೆ ಕಾರಣವಾಗುವುವು. ಇದು ಭ್ರಾಂತಿ; ಈ ವಿಜ್ಞಾನಗಳು ಅತಿಶೀಘ್ರವಾಗಿ ಉತ್ಪತ್ತಿ ವಿನಾಶಗಳನ್ನು ಹೊಂದುವುದರಿಂದ ಸಂತಾನರೂಪವಾಗಿ ಕಾಣುವುವು. ಈ ವಿಜ್ಞಾನ ಸಮೂಹಕ್ಕೆ ಮೂಲಭೂತವಾಗಿ ಯಾವ ಸ್ಥಿರಪದಾರ್ಥವೂ ಇಲ್ಲ. ಒಂದು ಕ್ಷಣದ ವಿಜ್ಞಾನವು ಸಂಸ್ಕಾರರೂಪದಿಂದ ಪರಕ್ಷಣದ ವಿಜ್ಞಾನಕ್ಕೆ ಕಾರಣವು. ಮತ್ತು ಕಾರ್ಯರೂಪವಾದ ಈ ಪರಕ್ಷಣವಿಜ್ಞಾನವು ತತ್ಪರಕ್ಷಣವಿಜ್ಞಾನಕ್ಕೆ ಕಾರಣವು. ಈ ಮೇರೆಗೆ ಪರಸ್ಪರ ವಿಭಿನ್ನವಾದ ಕ್ಷಣಿಕವಿಜ್ಞಾನಸಮೂಹದಲ್ಲಿ ಪರಂಪರೆಯಾಗಿ ಕಾರ್ಯಕಾರಣಭಾವವು ಕಂಡುಬರುವುದು. ಈ ಕಾರ್ಯಕಾರಣಭಾವಯುಕ್ತ ಕ್ಷಣಿಕವಿಜ್ಞಾನ ಸಮೂಹಕ್ಕೆ ವಿಜ್ಞಾನಸಂತಾನವೆಂದು ಹೆಸರು. ಪ್ರವಾಹರೂಪವಾದ ವಿಜ್ಞಾನಸಂತಾನದ ಹೊರತು ಬೇರೆ ಜೀವವನ್ನಾಗಲಿ, ಸತ್ಪದಾರ್ಥವನ್ನಾಗಲಿ ಕಲ್ಪಿಸುವ ಅವಶ್ಯವಿಲ್ಲ. 'ಆ

ನಾನು ' ಮೊದಲಾದ ಪ್ರತ್ಯಭಿಜ್ಞೆಯು ( ಪೂರ್ವಾನುಭೂತಿಯ ಪ್ರಬೋಧವು ) ನಖಕೇಶ ದೀಪಜ್ವಾಲೆಗಳಲ್ಲಿರುವಂತೆ ಭ್ರಾಂತಿರೂಪವು. ನಖಕೇಶಾದಿಗಳು ಭಿನ್ನವಾಗಿ ಹೋಗುತ್ತಿದ್ದರೂ ' ಅವೇ ನನ್ನ ನಖಗಳು , ಅವೇ ಕೂದಲುಗಳು ' ಎಂದು ಮನುಷ್ಯನು ಭ್ರಾಂತಿಯಿಂದ ವ್ಯವಹರಿಸುವನು. ಹಾಗೆಯೇ ಪೂರ್ವಕ್ಷಣವಿಜ್ಞಾನವು ನಾಶಹೊಂದಿದ್ದರೂ ಉತ್ತರಕ್ಷಣವಿಜ್ಞಾನಕ್ಕೆ ಅದರ ಸಂಬಂಧವು ( ಕಾರ್ಯಕಾರಣರೂಪವಾಗಿ ) ಇರುವುದರಿಂದ ' ಆ ನಾನು ' ಎಂಬ ವ್ಯವಹಾರವುಂಟಾಗುವುದು.

ಈ ಅನಾತ್ಮವಾದಕ್ಕೆ ವಿರುದ್ಧವಾಗಿ ಹೇಳುವುದೇನೆಂದರೆ—ಈ ಕ್ಷಣಿಕ ವಿಜ್ಞಾನ ಸಮೂಹದ ಮೂಲಕ್ಕೆ ಒಂದು ನಿಯಾಮಕವಾದ ಸತ್ಪದಾರ್ಥವಿಲ್ಲದಿದ್ದರೆ ಅವು ಪರಸ್ಪರ ವಿಚ್ಛಿನ್ನವಾಗುವುವು. ಅದರಿಂದ ವಿಜ್ಞಾನ ಪ್ರವಾಹವು ಅಸಂಭವವಾಗುವುದು. ಆತ್ಮವೆಂಬ ವಸ್ತುವಿಲ್ಲದಿದ್ದರೆ ಕ್ಷಣಿಕವಿಜ್ಞಾನ ಸಮೂಹವು ಸರಪಳಿಯಂತೆ ಪರಸ್ಪರಸಂಬದ್ಧವಾಗಲಾರದು. ಪರಸ್ಪರ ಸಂಬದ್ಧವಾಗದಿದ್ದರೆ ಸ್ಮೃತಿಪ್ರತ್ಯಭಿಜ್ಞೆಗಳು ಸಂಭವಿಸುವುದಿಲ್ಲ. ಆವಾಗ ಮೊದಲು ಹೇಳಿದ ' ನಾನು ' ಎಂಬ ಜ್ಞಾನಕ್ಕೆ ಕಾರಣವೂ ದೊರೆಯಲಾರದು.

ಬೌದ್ಧರ ಈ ಅನಾತ್ಮವಾದದ ನಿರಾಸಕ್ಕೆ ಜೈನರು ಹೇಳುವುದೇನೆಂದರೆ—ಜೀವಪದಾರ್ಥವನ್ನೊಡಂಬಡದಿದ್ದರೆ ಸ್ಮೃತಿಯು ಕೂಡುವುದಿಲ್ಲ. ಏಕೆಂದರೆ, ಅತ್ಯಂತ ವಿಭಿನ್ನ ( ಸ್ವಲಕ್ಷಣ ) ವಾದ ವಿಜ್ಞಾನ ಸಮೂಹದಲ್ಲಿ ಒಂದರ ಅನುಭವದಿಂದ ಇನ್ನೊಂದಕ್ಕೆ ಸ್ಮೃತಿಯುಂಟಾಗುವುದಾದರೆ— ಎಂದರೆ ಒಂದು ವಿಜ್ಞಾನಕ್ಷಣವು ಅನುಭವವನ್ನು ಹೊಂದುವುದು, ಇನ್ನೊಂದು ವಿಜ್ಞಾನಕ್ಷಣವು ಅದನ್ನು ಸ್ಮರಿಸುವುದು ಹೀಗಾದರೆ— ಒಬ್ಬ ಮನುಷ್ಯನ ಅನುಭೂತವಿಷಯವು ಇನ್ನೊಬ್ಬನ ಸ್ಮರಣವಿಷಯವು ಏಕೆ ಆಗಬಾರದು ? ಇನ್ನು ಬೌದ್ಧರು ಏಕಸಂತಾನ ಸಮಾವಿಷ್ಟವಾದ ವಿಜ್ಞಾನ ಸಮೂಹವು ಕಾರ್ಯಕಾರಣಭಾವದಿಂದ ಸಂಬದ್ಧವಾಗಿರುವುದೆಂದೂ ಆದುದರಿಂದ ಏಕಸಂತಾನ ಸಮಾವಿಷ್ಟ ವಿಜ್ಞಾನದ ವಿಷಯವೇ ಸ್ಮೃತವಾಗುವುದೆಂದೂ ಹೇಳಬಹುದು. ಆದರೆ ಬೌದ್ಧರು ವಿಜ್ಞಾನಗಳು ' ಸ್ವಲಕ್ಷಣ ' ಎಂದರೆ ಅತ್ಯಂತ ವಿಭಿನ್ನಗಳು ಎಂದು ಹೇಳಿರುವುದರಿಂದ ಒಂದರ ಅನುಭವದಿಂದ ಇನ್ನೊಂದಕ್ಕೆ ಸ್ಮೃತಿಯು ಹೇಗೆ ಉಂಟಾದೀತು? ಮತ್ತು ಕಾರ್ಯಕಾರಣಭಾವವು ಇದ್ದರೆ ಸ್ಮೃತಿಯುಂಟಾಗುವುದು ಇಲ್ಲದಿದ್ದರೆ ಇಲ್ಲ ಎಂಬ ನಿಯಮವಾದರೂ ಎಲ್ಲಿದೆ ? ಇದಲ್ಲದೆ ವಿಜ್ಞಾನ ಸಮೂಹವು ಸ್ವಲಕ್ಷಣವೆಂದೂ, ಅದರ ಮೂಲಕ್ಕೆ ಆತ್ಮವೆಂಬ ಸತ್ಪದಾರ್ಥವಿಲ್ಲವೆಂದೂ ಹೇಳುವುದಾದರೆ ಅಕೃತಾಭ್ಯಾಗಮ, ಕೃತಪ್ರಣಾಶ ಎಂಬ ಎರಡು ದೋಷಗಳು ಬರುವುವು; ಬೌದ್ಧರಲ್ಲಿ ಚೈತ್ಯನಮನವು ಒಂದು ಸತ್ಕರ್ಮವು; ಅದರಿಂದ

ಸತ್ಫಲವು ಒದಗುವುದೆಷ್ಟೋ? ಚೈತ್ರನು ದಾನ ಮಾಡಿದ ವಿಜ್ಞಾನವು ಆ ಕೂಡಲೆ ನಷ್ಟವಾಗಿ ಹೋಯಿತು; ಎಂದಬಳಿಕ ಚೈತ್ರನದಾನದ ಸುಫಲವನ್ನು ಯಾರು ಅನುಭೋಗಿಸುವರು? ಇದು ಕೃತಪ್ರಣಾಶವು. ಇನ್ನು, ಈಗ ಸತ್ಫಲವನ್ನು ಅನುಭೋಗಮಾಡುವ ಜ್ಞಾನವು ಈ ಮೊದಲು ಇರಲಿಲ್ಲ. ಹಾಗಾದರೆ ಇದು ಹೇಗೆ ಚೈತ್ರನದಾನದ ಫಲವನ್ನು ಅನುಭೋಗಿಸುತ್ತಿರುವುದು? ಇದು ಅಕೃತಾಭ್ಯಾಗಮವು.

ಇದಲ್ಲದೆ ಕ್ಷಣಿಕ ವಿಜ್ಞಾನಗಳ ಹೊರತು ಆತ್ಮನೆಂಬ ಸತ್ಪದಾರ್ಥವಿಲ್ಲದಿದ್ದರೆ ವ್ಯವಹಾರದಲ್ಲಿ ಲೌಕಿಕಫಲಸಾಧನಗಳನ್ನು ಸಂಪಾದಿಸುವುದು ವ್ಯರ್ಥವಾಗುತ್ತಿತ್ತು. ಏಕೆಂದರೆ ಕರ್ಮಕರ್ತನೂ ಫಲಭೋಕ್ತೃವೂ ಒಬ್ಬನೇ ಅಲ್ಲವಾದರೆ ಎಲ್ಲವೂ ಕ್ಷಣಿಕವಾಗಿಯೇ ಇದ್ದರೆ-ಸಾಧನಗಳನ್ನು ಸಂಪಾದಿಸುವರಾರು? ಅವುಗಳ ಫಲವನ್ನನುಭೋಗಿಸುವರಾರು? ಸಾಧನಗಳನ್ನು ಸಂಪಾದಿಸುವುದು ಒಂದು ವಿಜ್ಞಾನವು, ಇನ್ನೊಂದು ವಿಜ್ಞಾನವು ಫಲವನ್ನು ಅನುಭೋಗಿಸುವುದು ಎಂಬುದು ಸಂಭವಿಸುವುದಿಲ್ಲ. ಕರ್ತೃವು ಬೇರೆ ಭೋಕ್ತೃವು ಬೇರೆ ಎಂದು ಹೇಳುವುದು ಸರಿಯಲ್ಲ. ಯಾವ ನಾನು ಪೂರ್ವದಲ್ಲಿ ಕರ್ಮವನ್ನು ಮಾಡಿದೆನೋ ಆ ನಾನು ಈಗ ಅದರ ಫಲವನ್ನು ಅನುಭೋಗಿಸುವೆನು ಎಂದು ಹೇಳುವುದು ವಾಡಿಕೆಯ ಅನುಭವವಾಗಿರುವುದರಿಂದ ಸ್ಥಿರನಾದ ಆತ್ಮನಿರುವನೆಂಬುದು ಅನುಭವ ಪ್ರಮಾಣದಿಂದ ಸಿದ್ಧವಾಗುತ್ತಿರಲು ಬೌದ್ಧರ ಕ್ಷಣಿಕವಾದವು ಸರಿಹೋಗುವುದಿಲ್ಲ. *

ಬೌದ್ಧರ ಅನಾತ್ಮವಾದವು ಕರ್ಮಫಲವಾದದ ಮೂಲಕ್ಕೆ ಕುಠಾರದಂತಿರುವುದು.

**ವೇದಾಂತ ದರ್ಶನವು** ಜೀವಾತ್ಮನಿಗೆ ಪಾರಮಾರ್ಥಿಕ ಸತ್ತೆಯು ಇಲ್ಲವೆಂದೂ ಜೀವಾತ್ಮರು ಆ ಅದ್ವಿತೀಯ ಸತ್ಯಾದ್ವೈತ ಪರಬ್ರಹ್ಮದ ಪರಿಣಾಮವು ಇಲ್ಲವೆ ವಿವರ್ತವೆಂದೂ ಹೇಳುತ್ತದೆ. ಜೈನಮತದಲ್ಲಿ ಜೀವರು ಅಸಂಖ್ಯರು. ಮತ್ತು ಪರಸ್ಪರ ಭಿನ್ನರು. ಸತ್ತ್ವ, ಚೈತನ್ಯ, ಆನಂದ ಮೊದಲಾದ ಕೆಲವು ಗುಣಗಳ ಸಾಮ್ಯವನ್ನನುಲಕ್ಷಿಸಿ ನೋಡಿದರೆ ಜೀವರು ಅವಿಭಿನ್ನರೆಂದು ಕಂಡುಬರುವುದರಿಂದ ಅದ್ವೈತವಾದವು ನಿಜವೆಂದು ತೋರುವುದಾದರೂ ಪ್ರತಿ ಜೀವದ ವೈಶಿಷ್ಟ್ಯವನ್ನು ನೋಡಿದರೆ ಜೀವರು ವಿಭಿನ್ನರಾಗಿದ್ದಾರೆಂದು ಕಂಡುಬರುವುದೆಂದು ಜೈನರು ಹೇಳುವರು. ಈ ವೈಶಿಷ್ಟ್ಯವನ್ನು ಅನುಲಕ್ಷಿಸಿ ಅವರು ಜೀವನಾನಾತ್ವವನ್ನೊಡಂಬಡುವರು.

* ಶೂನ್ಯವಾದ, ವಿಜ್ಞಾನವಾದ ಇವುಗಳ ಖಂಡನವನ್ನು ಆದಿಪುರಾಣದಲ್ಲಿ (ಆ. ೨, ೧೦—೧೧.) ನೋಡಿರಿ.

ಜೀವಾತ್ಮರ ನಾನಾತ್ವವಿಷಯದಲ್ಲಿ ಸಾಂಖ್ಯದರ್ಶನವೂ ಜೈನದರ್ಶನವೂ ಐಕಮತ್ಯವುಳ್ಳವಾದರೂ ಜೀವನ ಕರ್ತೃತ್ವ ಭೋಕ್ತೃತ್ವ ವಿಷಯಗಳಲ್ಲಿ ಮತಭೇದವುಂಟು. ಸಾಂಖ್ಯರಲ್ಲಿ ಪುರುಷನೆಂಬ ಆತ್ಮನು ನಿತ್ಯ ಶುದ್ಧ ಬುದ್ಧ ಮುಕ್ತನು. ಇದಲ್ಲದೆ ಆತನು ಅಸಂಗನೂ ಅಕರ್ತನೂ ಎಂದು ಸಾಂಖ್ಯರು ಹೇಳುವರು. ಜಗದ್ವ್ಯಾಪಾರದಲ್ಲಿ ಆತನ ಸಂಬಂಧವೇನೂ ಇಲ್ಲ; ಆತನ ಸನ್ನಿಕರ್ಷದಲ್ಲಿ ಪ್ರಕೃತಿಯು ಸೃಷ್ಟಿಕಾರ್ಯವನ್ನು ಮಾಡುವುದು. ಪುರುಷನು ಯಾವ ಕಾರ್ಯವನ್ನೂ ಮಾಡುವುದಿಲ್ಲ; ಯಾವ ಫಲವನ್ನೂ ಭೋಗಿಸುವುದಿಲ್ಲ.

ಸಾಂಖ್ಯರನ್ನು ಕೇಳುವುದೇನೆಂದರೆ— ಪುರುಷನಿಗೆ ಕರ್ತೃತ್ವವೇ ಇಲ್ಲವಾದರೆ ಯಾರಿಗೆ ಬಂಧವು; ಯಾರಿಗೆ ಮೋಕ್ಷವು? ಮತ್ತು ಯಾರ ಪ್ರಯತ್ನದಿಂದ ಮುಕ್ತಿಯು ದೊರೆಯುವುದು? ಆತ್ಮನಿಗೆ ಸುಖದುಃಖಭೋಕ್ತೃತ್ವವು ಇಲ್ಲವಾದರೆ ಜಗದ್ವ್ಯಾಪಾರವು ಹೇಗೆ ಸಂಭವಿಸುವುದು?

ಸಾಂಖ್ಯ ಮತಕ್ಕೆ ವಿರುದ್ಧವಾಗಿ ಜೈನರು ಹೇಳುವುದೇನೆಂದರೆ— ಪುರುಷನು ಸಂಪೂರ್ಣವಾಗಿ ಅಕರ್ತೃವಾದರೆ ಅನುಭವ ಕಾರ್ಯವು ಹೇಗೆ ಸಂಭವಿಸುವುದು? ನಾನು ಶ್ರವಣಮಾಡುವೆನು, ನಾನು ಆಘ್ರಾಣ ಮಾಡುವೆನು ಮೊದಲಾದ ಸಕಲಾನುಭೂತ ಪ್ರತೀತಿಯು ಆತ್ಮನು ಅಕರ್ತೃವೆಂಬುದಕ್ಕೆ ವಿರುದ್ಧವಾಗಿದೆ. ಅನುಭವಕಾರ್ಯವು ಪುರುಷನ ಸ್ವರೂಪವೆಂದು ಸಾಂಖ್ಯರು ಹೇಳುವುದರಿಂದ ಈ ಪ್ರತೀತಿಯು ಅಹಂಕಾರ ಜನ್ಯವಾದುದೆಂದೂ ಹೇಳಲಾಗುವುದಿಲ್ಲ. ಸಾಂಖ್ಯರು ಆತ್ಮನು ಸ್ವಾಭಾವಿಕವಾಗಿ ಭೋಕ್ತೃವಲ್ಲವೆಂದೂ, ಬುದ್ಧಿಗ್ರಾಹ್ಯಗಳಾದ ಸುಖದುಃಖಗಳ ಭೋಕ್ತೃತ್ವವು ಆತ್ಮನಲ್ಲಿ ಆರೋಪಿತವಾದುದೆಂದೂ ಪ್ರಕೃತಿಯ ಪರಿಣಾಮವಾದ ಬುದ್ಧಿಯಲ್ಲಿ ಸುಖದುಃಖಗಳು ಸಂಕ್ರಾಂತವಾಗುವುದರಿಂದ ಶುದ್ಧ ಸ್ವಭಾವನಾದ ಪುರುಷನಲ್ಲಿ ಅವು ಪ್ರತಿಬಿಂಬಿತವಾಗುವುವೆಂದೂ ಹೇಳುತ್ತಾರೆ. ಆದರೆ ಪದಾರ್ಥದ ಸ್ವಲ್ಪ ಪರಿಣಾಮವನ್ನು ಇಲ್ಲವೆ ವಿಕೃತಿಯನ್ನೊಡಂಬಡದಿದ್ದರ ಪ್ರತಿಬಿಂಬವು ಸಂಭವಿಸುವುದಿಲ್ಲ ವೆಂದೂ, ಸ್ಫಟಿಕದಲ್ಲಿ ಪ್ರತಿಬಿಂಬವು ಮೂಡಿದಾಗ ಸ್ಫಟಿಕದಲ್ಲಿ ಸ್ವಲ್ಪ ಪರಿಣಾಮವನ್ನು ಸ್ವೀಕರಿಸಬೇಕಾಗುವುದರಿಂದ ಪುರುಷನಲ್ಲಿ ಸುಖದುಃಖಗಳು ಪ್ರತಿಫಲಿಸುವುದಾದರೆ ಆತನಲ್ಲಿ ಕೆಲಮಟ್ಟಿಗೆ ಪರಿಣಾಮವನ್ನು ಇಲ್ಲವೆ ಭೋಕ್ತೃತ್ವವನ್ನು ಸ್ವೀಕರಿಸಬೇಕಾಗುವುದೆಂದೂ ಜೈನರು ಹೇಳುತ್ತಾರೆ. ಈ ಕಾರಣದಿಂದಲೇ ನೈಯಾಯಿಕರು ಆತ್ಮನಲ್ಲಿ ಸುಖದುಃಖ ಪ್ರಯತ್ನಾದಿ

ಗುಣಗಳನ್ನು ಹೇಳುವರು. ಆದರೆ ನೈಯಾಯಿಕರು ಆತ್ಮನು ಜಡಸ್ವಭಾವನೆಂದೂ ಕೂಟಸ್ಥನಿತ್ಯನೆಂದೂ, ಸರ್ವಗತ (ವ್ಯಾಪಕ) ನೆಂದೂ ಹೇಳುವುದನ್ನು ಜೈನರು ಒಪ್ಪುವುದಿಲ್ಲ. ಜೈನರು ಆತ್ಮನು ಚೈತನ್ಯಸ್ವರೂಪನೆಂದೂ, ಪರಿಣಾಮಿಯೆಂದೂ, ಸ್ವದೇಹ ಪರಿಮಾಣನೆಂದೂ ಹೇಳುವರು.

ನೈಯಾಯಿಕರು ಆತ್ಮನು ಜಡಸ್ವಭಾವನು ಕೂಟಸ್ಥನಿತ್ಯನು ( ಅಪರಿಣಾಮಿ ) ಸರ್ವಗತನು ( ವ್ಯಾಪಕ ) ಎಂದು ಹೇಳುವರು. ನ್ಯಾಯಮತದಲ್ಲಿ ಇಚ್ಛಾದ್ವೇಷ ಪ್ರಯತ್ನಾದಿಗಳು ಆತ್ಮನ ಗುಣಗಳು. ಜ್ಞಾನವೂ ಆತ್ಮನಲ್ಲಿ ಸಮವಾಯ ಸಂಬಂಧದಿಂದ ಇರುವ ಒಂದು ಗುಣವು. ಈ ಗುಣಗಳು ಆತ್ಮನಲ್ಲಿ ಸಮವೇತವಾಗಿರುವುವಾದರೂ ಕೈವಲ್ಯಾವಸ್ಥೆಯಲ್ಲಿ ಆತ್ಮನು ಸ್ವ—ಸ್ವರೂಪದಲ್ಲಿ ಎಂದರೆ ನಿರ್ಗುಣಸ್ವರೂಪದಲ್ಲಿ ಇರುವನು. ಜ್ಞಾನವು ಇಲ್ಲವೆ ಚೈತನ್ಯವು ಆತ್ಮನ ಸ್ವಭಾವವಲ್ಲವಾದುದರಿಂದ ನ್ಯಾಯಮತದಲ್ಲಿ ಆತ್ಮನು ಸ್ವಾಭಾವಿಕವಾಗಿ ಜಡಸ್ವರೂಪನೆಂದಂತಾಗುವುದು. ಜ್ಞಾನಾದಿಗುಣಗಳು ಆತ್ಮನಲ್ಲಿ ಸಮವೇತವಾಗಿರುವುವೆಂದು ಹೇಳಿ ನೈಯಾಯಿಕರು ಆತ್ಮನ ಜಡಸ್ವರೂಪತ್ವವನ್ನೊಪ್ಪುವರು. ಇದಲ್ಲದೆ ಆತ್ಮನು ಗುಣಗಳಿಂದ ಹೇಗೆ ಪ್ರತ್ಯೇಕವಾಗಿರುವನೋ ಹಾಗೆ ಆತನಿಗೆ ಪರ್ಯಾಯ ( ಪರಿಣಾಮ ) ಗಳ ಸಂಬಂಧವಿಲ್ಲವೆಂದು—ಎಂದರೆ ಆತನು ಕೂಟಸ್ಥನಿತ್ಯನೆಂದು ಹೇಳುವರು. ಮತ್ತು ಆತನು ಜಡಸ್ವರೂಪನಾದುದರಿಂದ ಸರ್ವಗತನಾಗದಿದ್ದರೆ ಜಗತ್ತಿನ ಸರ್ವಪದಾರ್ಥಗಳೊಡನೆ ಆತನಿಗೆ ಏಕಕಾಲದಲ್ಲಿ ಸಂಯೋಗವು ಸಂಭವಿಸಲಾರದೆಂದೂ, ಹಾಗೆ ಸಂಯೋಗವು ಸಂಭವಿಸದಿದ್ದರೆ ಶರೀರೋತ್ಪತ್ತಿಯು ಅಸಂಭವವಾಗುವುದೆಂದೂ ಅವರು ಹೇಳುವರು.

ನ್ಯಾಯಮತನಿರಾಸ— ಚೈತನ್ಯವು ಆತ್ಮನ ಗುಣವಲ್ಲವೆಂದೂ, ಅದು ಆತ್ಮನ ಸ್ವರೂಪವೆಂದೂ ಸಾಂಖ್ಯರೂ ವೇದಾಂತಿಗಳೂ ಒಪ್ಪುವರು. ಆತ್ಮನು ಜಡಸ್ವರೂಪನಾದರೆ ಆತನಿಗೆ ಪದಾರ್ಥಪರಿಚ್ಛೇದವು ಹೇಗೆ ಉಂಟಾಗುವುದು? ಅವನು ಸಂಪೂರ್ಣವಾಗಿ ಅಪರಿಣಾಮಿ ( ಕೂಟಸ್ಥ ) ಆದರೆ ಪದಾರ್ಥಜ್ಞಾನವು ಆಗುವ ಬಗೆ ಹೇಗೆ ? ಆತ್ಮನು ಸರ್ವವ್ಯಾಪಕನಾದರೆ ನೈಯಾಯಿಕರು ಆತ್ಮನಾನಾತ್ವವನ್ನು ಸ್ವೀಕರಿಸದೆ ವೇದಾಂತಸಮ್ಮತವಾದ " ಏಕಮೇವಾದ್ವಿತೀಯಂ " ಬ್ರಹ್ಮವನ್ನು ಸ್ವೀಕರಿಸಿದರೂ ನಡೆಯುವುದು.

ಆತ್ಮನು ಜಡಸ್ವರೂಪನಾದರೆ ಆಕಾಶದಂತೆ ಆತನಿಗೂ ಪದಾರ್ಥ ಜ್ಞಾನವಾಗಲಾರದು. ಆತ್ಮನು ಜಡಸ್ವರೂಪನಾದರೂ ಆತನಲ್ಲಿ ಚೈತನ್ಯವು ಸಮವಾಯ ಸಂಬಂಧದಿಂದ ಇರುವುದರಿಂದ ಆತನಲ್ಲಿ ಜ್ಞಾನವು ಸಂಭವಿಸುವುದೆಂದು ಹೇಳುವುದಾದರೆ ಆತ್ಮ, ಆಕಾಶ ಇವೆರಡೂ ಜಡಗಳಾದುದರಿಂದ ಒಂದರಲ್ಲಿ ಚೈತನ್ಯವು ಸಮವೇತವಾಗಿರುವುದೂ ಇನ್ನೊಂದರಲ್ಲಿ ಇಲ್ಲದಿರುವುದೂ ಏಕೆ? ಆತ್ಮನಲ್ಲಿ ಚೈತನ್ಯವು ಸಮವೇತವಾಗಿ ಇರುವುದೆಂದು ಸರ್ವಜನ ಪ್ರತೀತಿಯುಂಟೆಂದು ಹೇಳಿದರೆ ಆತ್ಮನು ಚೈತನ್ಯಸ್ವರೂಪನೆಂಬ ಪ್ರತೀತಿಯು ಇಲ್ಲವೆಂದು ಹೇಗೆ ಹೇಳುವುದು? "ನಾವು ಅಚೇತನರು, ನಮ್ಮಲ್ಲಿ ಚೇತನಾ-ಸಮವಾಯವುಂಟು" ಎಂಬ ಪ್ರತೀತಿಗಿಂತ "ನಾನು ಜ್ಞಾತೃ" ಎಂಬ ಪ್ರತೀತಿಯೇ ಎಲ್ಲರಿಗೂ ಆಗುವುದು ಕಂಡುಬರುವುದು. ಕಲಶಾದಿಗಳು ಅಚೇತನಗಳಾದುದರಿಂದ ಅವಕ್ಕೆ ನಾನು ಜ್ಞಾತೃ, ಎಂಬ ಪ್ರತೀತಿಯಿಲ್ಲ. ಇನ್ನು ನಾನು ಜ್ಞಾನವುಳ್ಳವನು ಎಂಬ ಪ್ರತೀತಿಯಲ್ಲಿ, ನಾನು ಧನವಂತನು ಎಂಬ ಪ್ರತೀತಿಯಲ್ಲಿ ಆತ್ಮನಿಗೂ ಧನಕ್ಕೂ ಭೇದವಿರುವಂತೆ ಆತ್ಮನಿಗೂ ಜ್ಞಾನಕ್ಕೂ ಭೇದವುಂಟೆಂದು ಸಿದ್ಧವಾಗುವುದಿಲ್ಲವೇ? ಎಂದು ನೈಯಾಯಿಕರು ಕೇಳಬಹುದು. ಇದಕ್ಕೆ ಜೈನಾಚಾರ್ಯರು ಹೇಳುವುದೇನೆಂದರೆ—'ನಾನು ಜ್ಞಾನವುಳ್ಳವನು, ಎಂಬ ಪ್ರತೀತಿಯಿಂದ ಆತ್ಮ, ಜ್ಞಾನ ಇವುಗಳ ಅಭೇದವೇ ಸಿದ್ಧವಾಗುವುದು; ಏಕೆಂದರೆ ಆತ್ಮನು ಜಡಸ್ವಭಾವನಾದ ಪಕ್ಷದಲ್ಲಿ ನಾನು ಜ್ಞಾನವುಳ್ಳವನು ಎಂಬ ಪ್ರತೀತಿಯೇ ಅಸಂಭವವಾಗುವುದು; ಆತ್ಮನು ಜಡಸ್ವಭಾವನಾಗಿಯೂ ಜ್ಞಾನವುಳ್ಳವನು ಎಂದು ಹೇಳುವಲ್ಲಿ ನೈಯಾಯಿಕರ ಪಕ್ಷವೇ ದುರ್ಬಲವಾಗುವುದು. ಹೇಗೆಂದರೆ—ಆತ್ಮನೆಂಬ ವಿಶೇಷ್ಯ, ಜ್ಞಾನವೆಂಬ ವಿಶೇಷಣ ಇವೆರಡರ ಜ್ಞಾನವಿಲ್ಲದೆ ನಾನು ಜ್ಞಾನವುಳ್ಳವನು ಎಂಬ ವಿಶಿಷ್ಟ ಜ್ಞಾನವುಂಟಾಗಲಾರದು. ಏಕೆಂದರೆ, ನಾಗೃಹೀತ ವಿಶೇಷಣಾ ವಿಶೇಷ್ಯಬುದ್ಧಿಃ ಎಂದು ನೈಯಾಯಿಕರು ಹೇಳುವರು. "ವಿಶೇಷಣ ಗ್ರಹಣವಾಗದೆ ವಿಶೇಷ್ಯಜ್ಞಾನವಾಗದು" ಇನ್ನು ಆತ್ಮ, ಜ್ಞಾನ ಇವೆರಡೂ ಗೃಹೀತವಾಗಿಯೇ 'ನಾನು ಜ್ಞಾನವಂತನು' ಎಂಬ ಪ್ರತೀತಿಯುಂಟಾಗುವುದೆಂದು ಹೇಳುವುದಾದರೆ ಈ (ಆತ್ಮ ಜ್ಞಾನಗಳ) ಗ್ರಹಣವು ಏತರಿಂದ ಸಂಭವಿಸುವುದು? ಸ್ವಯಂ ಆತ್ಮನಿಂದ ಆಗ್ರಹಣವುಂಟಾಗುವುದಾದರೆ ಆತ್ಮನು ಆತ್ಮನಿಂದ ಗೃಹೀತನಾದನೆಂದು ಹೇಳಿದಂತಾಗುವುದರಿಂದ ಅದು ನ್ಯಾಯಮತವಿರುದ್ಧವು; ಜ್ಞಾನಾಂತರದಿಂದ ಗೃಹೀತವಾಗುವುದೆಂದು ಹೇಳುವುದಾದರೆ ಅನವಸ್ಥಾದೋಷವೊದಗುವುದು. ಏಕೆಂದರೆ, ಈ ಜ್ಞಾನಾಂತರವು ಜ್ಞಾನತ್ವರೂಪವಿಶೇಷಣಗ್ರಹಣ

ವಿಲ್ಲದೆ ಉಂಟಾಗದು. ಈ ಗ್ರಹಣಕ್ಕೆ ಮತ್ತೆ ಜ್ಞಾನಾಂತರವು ಬೇಕಾಗುವುದು. ಈ ಮೇರೆಗೆ ಜ್ಞಾನಕ್ಕೂ ಆತ್ಮನಿಗೂ ಅಭಿನ್ನತೆಯನ್ನು ( ತಾದಾತ್ಮ್ಯವನ್ನು ) ಸ್ವೀಕರಿಸದಿದ್ದರೆ ನಾನು ಜ್ಞಾನವಂತನು ಎಂಬ ಪ್ರತೀತಿಯು ಅಸಂಭವವಾಗುವುದು. ಈ ಕಾರಣದಿಂದ ಜೈನದಾರ್ಶನಿಕರು ಆತ್ಮನ ಜಡ ಸ್ವರೂಪವನ್ನು ನಿರಾಕರಿಸುವರು.

ನೈಯಾಯಿಕರು ಆತ್ಮನು ಕೂಟಸ್ಥನಿತ್ಯ ಎಂದರೆ ಅಪರಿಣಾಮಿ ಎಂದು ಹೇಳುವರು. ಜೈನರು ಇದನ್ನೊಪ್ಪುವುದಿಲ್ಲ. ಜ್ಞಾನೋತ್ಪತ್ತಿಯು ಪೂರ್ವದಲ್ಲಿರುವ ಆತ್ಮನ ಅವಸ್ಥೆಯೇ ಜ್ಞಾನಕಾಲದಲ್ಲಿಯೂ ಇರುವುದಾದರೆ ಪದಾರ್ಥಜ್ಞಾನವನ್ನು ಆತನು ಹೇಗೆ ಉಂಟುಮಾಡಿಕೊಳ್ಳುವನು? ಯಾವಾಗಲೂ ಸ್ವ-ರೂಪದಲ್ಲಿ ಅಪರಿವರ್ತಿತನಾಗಿರುವ ಸ್ಥಿತಿಯೇ ಕೂಟಸ್ಥನಿತ್ಯತ್ವವು. ಜ್ಞಾನೋತ್ಪತ್ತಿಯ ಪೂರ್ವದಲ್ಲಿ ಆತ್ಮನು ಅಪ್ರಮಾತೃ, ಜ್ಞಾನಕ್ಷಣದಲ್ಲಿ ಪ್ರಮಾತೃ ( ಪದಾರ್ಥ ಪರಿಚ್ಛೇದಕ ) ಎಂದೆನ್ನುವಾಗ ಆತ್ಮನಲ್ಲಿ ಪರಿವರ್ತನೆ ಉಂಟಾಗುವುದೆಂದು ಒಪ್ಪಲೇಬೇಕಾಗುವುದು.

ಆತ್ಮನು ಸರ್ವವ್ಯಾಪಕನೆಂಬ ನೈಯಾಯಿಕ ಮತವನ್ನು ಜೈನರು ಒಪ್ಪುವುದಿಲ್ಲ. ಜೈನಮತದಲ್ಲಿ ಆತ್ಮನು ಸ್ವದೇಹಪರಿಮಾಣನು. ಆತ್ಮನು ವ್ಯಾಪಕನಾದರೆ ನೈಯಾಯಿಕರು ಆತ್ಮನಾನಾತ್ವವನ್ನು ಹೇಳುವ ಆವಶ್ಯವಿಲ್ಲ. ನಾನಾ—ಮನಸ್ಸುಗಳೊಡನೆ ಸಂಯೋಗ ಹೊಂದುವುದರಿಂದ ಆತ್ಮರು ಅನೇಕರೆಂದು ಅವರು ಅನುಮಾನಮಾಡುವರಷ್ಟೇ? ಆತ್ಮನು ವ್ಯಾಪಕನಾದರೆ, ವ್ಯಾಪಕವಾದ ಒಂದು ಆಕಾಶದೊಡನೆ ನಾನಾಘಟಗಳ ಸಂಯೋಗವು ಹೇಗೆ ಸಂಭವವೋ ಹಾಗೆಯೇ ವ್ಯಾಪಕವಾದ ಒಂದೇ ಆತ್ಮದೊಡನೆ ಹಲವು ಮನಸ್ಸುಗಳ ಸಂಯೋಗವು ಸಂಭವವಾಗಿದೆ. ಇದೇ ಮೇರೆಗೆ ಸರ್ವವ್ಯಾಪಕನಾದ ಆತ್ಮನಿಗೆ ನಾನಾಶರೀರೇಂದ್ರಿಯಗಳ ಸಂಯೋಗವನ್ನೂ ಹೇಳಲು ಬರುವುದು. ಹೀಗಿರಲು ಆತ್ಮನಾನಾತ್ವವು ಏತಕ್ಕೆ? ನಾನಾತ್ವವಿಲ್ಲವಾದರೆ ಏಕಕಾಲದಲ್ಲಿ ನಾನಾಶರೀರಗಳ ಸಂಯೋಗವು ಆತ್ಮನಿಗೆ ಅಸಂಭವವೆಂದು ನ್ಯಾಯಮತದವರು ಹೇಳಬಹುದು. ಏಕೆಂದರೆ ಆತ್ಮನಲ್ಲಿ ಏಕಕಾಲಕ್ಕೆ ಪರಸ್ಪರ ವಿರೋಧಿಗಳಾದ ಸುಖದುಃಖಾದಿಗಳ ಉತ್ಪತ್ತಿಯು ಸಂಭವಿಸುವುದಿಲ್ಲ. ಇದಕ್ಕೆ ಉತ್ತರವೇನೆಂದರೆ—ಹೀಗೆ ಹೇಳುವುದಾದರೆ ಆಕಾಶದಲ್ಲಿ ಏಕಕಾಲದಲ್ಲಿ ನಾನಾಭೇರೀಧ್ವನಿಗಳ ಸಮವಾಯವು ಅಸಂಭವವಾಗುವುದೋ? ಆ ಎಲ್ಲ ಭೇರಿಗಳ ಶಬ್ದಗಳು ಪರಸ್ಪರ ವಿರೋಧಿಗಳಾದುದರಿಂದ ಆ ಶಬ್ದಗಳು ಗೋಚರವಾಗಲಾರವೇ? ಇನ್ನು ಪ್ರತಿಒಂದು ಶಬ್ದಕ್ಕೆ ಕಾರಣವು ವಿಭಿನ್ನವಾದುದರಿಂದ ಪ್ರತಿಶಬ್ದವು ಪರಸ್ಪರ

ವಿರುದ್ಧವಾದರೂ ಆ ಭೇರೀಶಬ್ದವು ಶ್ರವಣಗೋಚರವಾಗುವುದೆಂದೂ ಈ ಕಾರಣದಿಂದಲೇ ಒಂದೇ ಆಕಾಶದಲ್ಲಿ ಏಕಕಾಲಕ್ಕೆ ನಾನಾ ಭೇರೀಧ್ವನಿಗಳ ಸಮವಾಯವು ಸಂಭವನೀಯವೆಂದೂ ಹೇಳಬಹುದು. ಆದರೆ ಇದಕ್ಕೆ ಉತ್ತರವಾಗಿ-ಪ್ರತಿ ಸುಖದುಃಖಾದಿಗಳ ಕಾರಣಗಳು ವಿಭಿನ್ನವಾಗಿರುವುವಾದುದರಿಂದ ಸುಖದುಃಖಾದಿಗಳು ಪರಸ್ಪರ ವಿರೋಧಿಗಳಾಗಿದ್ದರೂ ಏಕಕಾಲದಲ್ಲಿ ಅನುಭೂತವಾಗಬಹುದೆಂದೂ, ಈ ಕಾರಣದಿಂದಲೇ ಒಂದೇ ಆತ್ಮದೊಡನೆ ಏಕಕಾಲದಲ್ಲಿ ನಾನಾ ಶರೀರಾದಿಗಳ ಸಂಯೋಗವು ಸಂಭವವಾಗಬಹುದೆಂದೂ ಹೇಳಬಹುದು. ಒಂದೇ ಕಡೆ ವಿರುದ್ಧ ಧರ್ಮಗಳ ಅಧ್ಯಾಸದಿಂದ ಆತ್ಮನಾನಾತ್ವವನ್ನು ಹೇಳಬೇಕಾಗುವದೆಂದರೆ ಆಕಾಶದ ನಾನಾತ್ವವನ್ನಾದರೂ ಒಪ್ಪಬೇಕಾಗುವುದು. ಇನ್ನು ಆಕಾಶವು ಏಕವು; ಆದರೂ ಅದು ಬಹು ಪದಾರ್ಥಗಳಿಗೆ ತನ್ನಲ್ಲಿ ಅವಕಾಶವನ್ನು ಕೊಡುವುದು ಎಂದು ಹೇಳುವುದಾದರೆ ಆತ್ಮನು ಏಕನಾಗಿದ್ದರೂ ಸಮಸ್ತ ಶರೀರಾದಿಗಳು ಆತನಲ್ಲಿ ಅಲ್ಲಲ್ಲಿ ಸಂಯುಕ್ತವಾಗಿರುವುವೆಂದು ಹೇಳಲು ಬಾಧಕವೇನಿದೆ? ಇನ್ನು ಕೆಲವರು ಸಾಯುವರು, ಕೆಲವರು ಹುಟ್ಟುವರು, ಕೆಲವರು ಬೇರೆ ಕೆಲಸ ಮಾಡುವರು. ಈ ವ್ಯಾಪಾರ ಭೇದದಿಂದ ಆತ್ಮನಾನಾತ್ವವು ಸಿದ್ಧಿಸುವುದೆಂದು ನೈಯಾಯಿಕರು ಹೇಳಬಹುದು. ಆದರೆ ಇದಕ್ಕೆ ಜೈನರು ಹೇಳುವುದೇನೆಂದರೆ:—ಆತ್ಮನ ಸರ್ವಗತತ್ವವನ್ನು ಸ್ವೀಕರಿಸಿದಾಗ ಜನನಮರಣಾದಿ ಭಿನ್ನ ವ್ಯಾಪಾರಗಳಿಂದ ಆತ್ಮನ ಏಕತ್ವವೂ ಸಿದ್ಧವಾಗುವುದು. ಒಂದು ಸಮಯದಲ್ಲಿ ಒಂದು ಘಟಾಕಾಶವು ಉತ್ಪನ್ನವಾಗುತ್ತಿರುವುದು, ಅದೇ ಕಾಲಕ್ಕೆ ಇನ್ನೊಂದು ಘಟಾಕಾಶವು ವಿನಷ್ಟವಾಗುತ್ತಿರುವುದು, ಮತ್ತೊಂದು ಘಟಾಕಾಶವು ಮೊದಲಿನಂತೆಯೇ ಇರುತ್ತಿರಬಹುದು. ಈ ವ್ಯಾಪಾರಭೇದಗಳಿಂದ ಆಕಾಶದ ನಾನಾತ್ವವನ್ನು ಒಪ್ಪುವ ಆವಶ್ಯಕತೆಯಿಲ್ಲ. ಅಂತೆಯೇ ಜನನಮರಣಾದಿವ್ಯಾಪಾರಭೇದದಿಂದ ಆತ್ಮನ ನಾನಾತ್ವವೇ ಸಿದ್ಧಿಸುವದೆಂದು ಹೇಳಲಾಗುವದಿಲ್ಲ; ಆತ್ಮನು ಒಬ್ಬನಾಗಿದ್ದರೂ ಇದೆಲ್ಲ ಸಂಭವಿಸುವುದು. ಇನ್ನು ಆತ್ಮನ ನಾನಾತ್ವವನ್ನು ಒಪ್ಪದಿದ್ದರೆ ಆತನಿಗೆ ಬಂಧವೂ ಮೋಕ್ಷವೂ ಸಂಭವಿಸುವುದಿಲ್ಲವೆಂದು ಶಂಕಿಸಬಹುದು. ಏಕೆಂದರೆ ಒಂದೇ ವಸ್ತುವಿಗೆ ಏಕಕಾಲಕ್ಕೆ ಬಂಧಮೋಕ್ಷರೂಪವಾದ ವಿರುದ್ಧಧರ್ಮಗಳ ಸಮಾವೇಶವಾಗಲಾರದು. ಇದಕ್ಕೆ ಉತ್ತರವೇನೆಂದರೆ, ಒಂದು ಘಟದಲ್ಲಿ ಆಕಾಶವು ಬದ್ಧವಾಗಿದ್ದರೆ ಘಟಮುಕ್ತ ಆಕಾಶವು ಇರಲಾರದೆಂದೂ, ಘಟಮುಕ್ತ—ಆಕಾಶವಿರುವಾಗ ಘಟಬದ್ಧ ಆಕಾಶವು ಇರಲಾರದೆಂದೂ ಹೇಳಬಹುದೇ? ಇನ್ನು ಆಕಾಶ

ದಲ್ಲಿ ಪ್ರದೇಶ ಭೇದವಿರುವದರಿಂದ ಆಕಾಶದಲ್ಲಿ ಏಕಕಾಲದಲ್ಲಿ ಬಂಧಮೋಕ್ಷಗಳು ಸಂಭವವೆಂದು ಹೇಳುವದಾದರೆ ವ್ಯಾಪಕನಾದ ಒಬ್ಬ ಆತ್ಮನಲ್ಲಿ ಪ್ರದೇಶಭೇದದಿಂದ ಏಕಕಾಲಕ್ಕೆ ಬಂಧಮೋಕ್ಷಗಳು ಕೂಡುವವು. ಆದುದರಿಂದ ಆತ್ಮನು ಸರ್ವಗತನೂ ಸರ್ವವ್ಯಾಪಕನೂ ಎಂದು ಹೇಳುವದಾದರೆ ಆತ್ಮನಾನಾತ್ವವನ್ನು ಹೇಳುವ ಅವಶ್ಯವಿಲ್ಲವೆಂದು ಜೈನಾಚಾರ್ಯರು ನ್ಯಾಯಮತವನ್ನು ಆಕ್ಷೇಪಿಸಿರುವರು.

ಆತ್ಮನು ವ್ಯಾಪಕನಲ್ಲವಾದರೆ ಅನಂತ ದಿಗ್ದೇಶವರ್ತಿಗಳಾದ ಉಪಯುಕ್ತ ಪರಮಾಣುಗಳ ರೂಪದೊಡನೆ ಆತನ ಸಂಯೋಗವಾಗಲಾರದೆಂದೂ ಹಾಗೆ ಆ ಪರಮಾಣುಗಳ ಸಂಯೋಗವಾಗದಿದ್ದರೆ ಶರೀರೋತ್ಪತ್ತಿಯಾಗಲಾರದೆಂದೂ ನೈಯಾಯಿಕರು ಹೇಳುವರು. ಆದರೆ ಪರಮಾಣುಗಳ ಆಕರ್ಷಣಕ್ಕಾಗಿಯೇ ಆತ್ಮನು ವ್ಯಾಪಕನಾಗಬೇಕಾದ ಅವಶ್ಯವಿಲ್ಲವೆಂದೂ, ಅಯಸ್ಕಾಂತವು ಲೋಹಗಳನ್ನು ಎಳೆದುಕೊಳ್ಳುವದಕ್ಕಾಗಿ ಅದು ವ್ಯಾಪಕವಾಗಬೇಕಾಗುವದಿಲ್ಲವೆಂದೂ ಜೈನರು ಹೇಳುವರು. ಇನ್ನು ತ್ರಿಭುವನದೊಳಗಿನ ಎಲ್ಲ ಪರಮಾಣುಗಳು ಎಳೆಯಲ್ಪಟ್ಟರೆ ದೇಹಪರಿಮಾಣವು ಎಂತಹುದಾಗುವದೆಂಬ ನಿಶ್ಚಯವು ತಿಳಿಯಲಾರದೆಂದು ಹೇಳಿದರೆ ಆತ್ಮನು ವ್ಯಾಪಕನೆಂದಾಗ ಸಕಲಪರಮಾಣುವ್ಯಾಪಕನೂ ಆಗುವದರಿಂದ ಈ ದೋಷವು ಬರುವದೆಂದೂ, ವ್ಯಾಪಕನಾದಾಗ ಅದೃಷ್ಟವಶದಿಂದ ಶರೀರೋತ್ಪಾದನಕ್ಕೆ ಉಪಯುಕ್ತವಾಗುವ ಪರಮಾಣುಗಳು ಮಾತ್ರ ಆಕೃಷ್ಟವಾಗುವವೆಂದು ಹೇಳಿದರೆ ಅವ್ಯಾಪಕನಾದಾಗಲೂ ಅದೃಷ್ಟವನ್ನು ಕಲ್ಪಿಸಿಕೊಳ್ಳಬಹುದೆಂದೂ ಜೈನರು ಹೇಳುವರು.

ಆತ್ಮನ ಸ್ವದೇಹ ಪರಿಮಾಣತ್ವ ವಿಷಯದಲ್ಲಿ ನ್ಯಾಯಾಚಾರ್ಯರ ಆಕ್ಷೇಪಗಳೇನೆಂದರೆ.—ಆತ್ಮನು ಶರೀರ ಪ್ರವಿಷ್ಟನೆಂದರೆ ಶರೀರದಂತೆ ಆತ್ಮನಿಗೂ ಸಾವಯವತ್ವವೂ ಅದರಿಂದ ಕಾರ್ಯತ್ವವೂ ಬರುವದರಿಂದ ಶರೀರದಂತೆ ಆತ್ಮನಿಗೂ ಅನಿತ್ಯತ್ವವು ಪ್ರಾಪ್ತವಾಗುವದು. ಆದರೆ ಇದಕ್ಕೆ ಜೈನಾಚಾರ್ಯರು ಹೇಳುವದೇನೆಂದರೆ :—ಆತ್ಮನು ಕಥಂಚಿತ್ ಸಾವಯವನು; ಮತ್ತು ಕಾರ್ಯರೂಪನು. ಘಟವು ಸಮಾನ ಜಾತೀಯ ಅವಯವಗಳಿಂದುಂಟಾಗಿರುವಂತೆ ಆತ್ಮನು ಸಜಾತೀಯ ಕಾರಣ ಸಮೂಹದಿಂದ ಉಂಟಾದವನಲ್ಲ; ಆತ್ಮನು ಕಾರ್ಯರೂಪನೆಂದರೆ ಇಲ್ಲಿ ಕಾರ್ಯತ್ವವೆಂದರೆ ಪೂರ್ವಾಕಾರವನ್ನು ಬಿಟ್ಟು ಉತ್ತರಾಕಾರವನ್ನು ಗ್ರಹಣ ಮಾಡುವದಿಷ್ಟೇ ಹೊರತು ಜನ್ಯತ್ವವಲ್ಲ. ಈ ತರದ ಕಾರ್ಯತ್ವವು ( ವಿಭಿನ್ನಪರ್ಯಾಯಪರಿಣತಿ )

ಆತ್ಮನಲ್ಲಿ ಬಂದರೂ ಆತನು ಅನಿತ್ಯನಾಗಲಾರನು; ಆತ್ಮನು ಒಂದು ಪರ್ಯಾಯದಿಂದ ಇನ್ನೊಂದು ಪರ್ಯಾಯವನ್ನು ಹೊಂದಿದರೂ ಆತ್ಮನು ದ್ರವ್ಯಸ್ವರೂಪದಲ್ಲಿ ಅಪರಿವರ್ತಿತನಾಗಿಯೇ ಇರುವನು. ಆದುದರಿಂದ ಆತ್ಮನು ಸಾವಯವನಾಗಿಯೂ ಕಾರ್ಯರೂಪನಾಗಿಯೂ ಇದ್ದರೂ ಆತನು ಅವಿಚ್ಛಿನ್ನನೂ ವಿಭಾಗರಹಿತನೂ ನಿತ್ಯನೂ ಆಗಿದ್ದಾನೆ.

ಆತ್ಮನು ಸ್ವದೇಹ ಪರಿಮಾಣನೆಂದು ಹೇಳಿದರೆ ಆತ್ಮನು ಮೂರ್ತನಾಗಬೇಕಾಗುವುದೆಂದೂ, ಮೂರ್ತನಾದರೆ ಶರೀರವೆಂಬ ಒಂದು ಮೂರ್ತ ದ್ರವ್ಯದಲ್ಲಿ ಆತ್ಮನೆಂಬ ಇನ್ನೊಂದು ಮೂರ್ತ ದ್ರವ್ಯವು ಸೇರುವ ಬಗೆ ಹೇಗೆ ಎಂದೂ, ಬಾಲಕ ಶರೀರದಲ್ಲಿ ಸೇರಿದ ಆತ್ಮನು ಮುಂದೆ ಯುವಕ ಶರೀರದ ಪರಿಮಾಣವನ್ನು ಹೇಗೆ ಧರಿಸಬಲ್ಲನೆಂದೂ, ಶರೀರದ ಒಂದು ಭಾಗವು ಖಂಡಿತವಾದರೆ ಆತ್ಮನೂ ಕೆಲವು ಪರಿಮಾಣದಿಂದ ಖಂಡಿತನಾಗುವನೆಂದು ಒಡಂಬಡಬೇಕಾಗುವುದೆಂದೂ ನೈಯಾಯಿಕರು ಆಕ್ಷೇಪಿಸುವರು.

ಇದಕ್ಕೆ ಜೈನಾಚಾರ್ಯರು ಹೇಳುವುದೇನೆಂದರೆ.-ಆತ್ಮನು ಮೂರ್ತನೆಂದರೆ ರೂಪಾದಿಗುಣವುಳ್ಳವನೆಂದು ಅರ್ಥವಲ್ಲ. ಸ್ವದೇಹ ಪರಿಮಾಣ ಮಾತ್ರವುಳ್ಳವನು. ಮನಸ್ಸು ಮೂರ್ತವಲ್ಲ. ಆದರೆ ಅದು ಶರೀರದಲ್ಲಿ ಹೇಗೆ ಅನುಪ್ರವಿಷ್ಟವಾಗಿರುವುದೋ ಹಾಗೆಯೇ ಆತ್ಮನೂ ಶರೀರದಲ್ಲಿ ಅನುಪ್ರವಿಷ್ಟನಾಗಿರುವನು. ಭಸ್ಮದಲ್ಲಿ ಜಲವು ಹೇಗೆ ಸೇರಬಲ್ಲುದೋ ಹಾಗೆ ಶರೀರದಲ್ಲಿ ಆತ್ಮನ ಅನುಪ್ರವೇಶವು ಏಕೆ ಆಗಲಾರದು? ಆತ್ಮನು ಯುವಕ ಶರೀರ ಪರಿಮಾಣವನ್ನು ಸ್ವೀಕರಿಸುವಾಗ ಬಾಲಕ ಶರೀರ ಪರಿಮಾಣವನ್ನು ಬಿಟ್ಟು ಅದನ್ನು ಸ್ವೀಕರಿಸುವನೆಂದು ತಿಳಿಯಬೇಕು. ಸರ್ಪ ಶರೀರವನ್ನು ಉಬ್ಬಿಸಿ ಹೆಡೆಯೆತ್ತಿ ದೊಡ್ಡ ಶರೀರವನ್ನು ಮಾಡಿಕೊಳ್ಳುವುದು ಸರ್ಪಕ್ಕೆ ಹೇಗೆ ಶಕ್ಯವೋ ಹಾಗೆ ಆತ್ಮನೂ ತನ್ನ ಸಂಕೋಚ ವಿಸ್ತಾರ ಗುಣಗಳಿಂದ ಭಿನ್ನ ಪರಿಮಾಣಗಳನ್ನು ಧರಿಸುವುದರಲ್ಲಿ ಅಸಂಗತಿಯೇನೂ ಇಲ್ಲ. ಆತ್ಮನು ವಿಭಿನ್ನ ಪರಿಮಾಣಗಳನ್ನು ಹೊಂದುವನೆಂಬ ದೃಷ್ಟಿಯಿಂದ ಅನಿತ್ಯನೆನಿಸಿದರೂ ದ್ರವ್ಯಸ್ವರೂಪದಿಂದ ಆತ್ಮನು ನಿತ್ಯನು. ಮೃತ್ತಿಕೆಯು ಕಪಾಲ, ಘಟ ಎಂಬ ಪರ್ಯಾಯಗಳನ್ನು ಹೊಂದಿದರೂ ಮೃತ್ತಿಕಾರೂಪದಿಂದ ನಿತ್ಯವು. ಶರೀರದ ಅಂಶವು ಖಂಡಿತವಾದಾಗ ಆತ್ಮನು ಖಂಡಿತನಾಗುವುದಿಲ್ಲ. ಖಂಡಿತ ಶರೀರಾಂಶದಲ್ಲಿ ಆತ್ಮನ ಪ್ರದೇಶವು ವಿಸ್ತಾರ ಹೊಂದುವುದು ಮಾತ್ರ ಅಲ್ಲಿ ಸಂಭವಿಸುವುದು. ಖಂಡಿತ ಶರೀರಾಂಶದಲ್ಲಿ ಕಂಪನಾದಿಗಳು ಕಂಡು ಬರುವುದಕ್ಕೆ ಅಲ್ಲಿ ಆತ್ಮನ ಅಸ್ತಿತ್ವವನ್ನೊಡಂಬಡದಿದ್ದರೆ ಬೇರೆ ಕಾರಣವನ್ನು ತೋರಿಸ

ಲಾಗುವುದಿಲ್ಲ. ಖಂಡಿತ ಭಾಗದಲ್ಲಿ ಪ್ರತ್ಯೇಕ ಆತ್ಮನಿರುವುದಿಲ್ಲ. ಅಲ್ಲಿ ಕಂಡುಬರುವುದು ದೇಹಾಂತರಗತ ದೇಹ ಸರಿಸಾಣ ಆತ್ಮನ ಅಂಶವೇ ಸರಿ. ಎರಡು ಖಂಡಗಳಲ್ಲಿ ಬೇರೆಬೇರೆ ಇದ್ದರೂ ಆತ್ಮನು ಒಬ್ಬನೇ. ಸಂತಾನಾಂತರಗತ ವಿಭಿನ್ನ ಜ್ಞಾನಗಳಲ್ಲಿ ಒಬ್ಬನೇ ಆತ್ಮನು ಹೇಗೆ ಅನುಪ್ರವಿಷ್ಟನಾಗಿರುವನೋ ಹಾಗೆ ಖಂಡಿತ ಶರೀರಾಂಶಗಳಲ್ಲಿ ಒಬ್ಬ ಆತ್ಮನು ಇರುವುದು ಸಂಭವವಾಗಿದೆ. ಈ ತುಂಡುಗಳು ಕೂಡುವ ಕಾಲದಲ್ಲಿ ಖಂಡನಾವಶಿಷ್ಟ ದೇಹದಲ್ಲಿ ಪರಿಪೂರ್ಣ ಆತ್ಮನು ವಾಸಿಸುತ್ತಾನೆ. ಈ ಕಾರಣಗಳಿಂದ ಆತ್ಮನ ಸ್ವದೇಹ ಪರಿಮಾಣತ್ವವನ್ನು ಸ್ವೀಕರಿಸುವುದರಿಂದ ಯಾವ ಬಾಧಕವೂ ಇಲ್ಲ.

ವೈಶೇಷಿಕರೂ ನೈಯಾಯಿಕರಂತೆ ಜ್ಞಾನವು ಆತ್ಮನ ಗುಣವೆಂದೂ ಅದು ಆತ್ಮನಿಂದ ಭಿನ್ನವಾದುದೆಂದೂ ಹೇಳುವರು. ಆಗ ಅಲ್ಲಿ (ನ್ಯಾಯ ಮತಕ್ಕೆ) ತೋರಿಸಿದ ದೋಷಗಳನ್ನೇ ಇಲ್ಲಿಯೂ ಹೇಳಬೇಕಾಗುವುದು.

ಜ್ಞಾನ, ಆತ್ಮ ಇವರಲ್ಲಿ ಭೇದವೇ ಇರುವುದಾದರೆ ದೇವದತ್ತನ ಜ್ಞಾನದಿಂದ ಯಜ್ಞದತ್ತನಿಗೆ ವಿಷಯಪರಿಗ್ರಹಣವಾಗುವುದು ಹೇಗೆ ಅಸಂಭವವೋ ಹಾಗೆಯೇ ತನ್ನ ಜ್ಞಾನದಿಂದ ತನಗೂ ವಿಷಯಪರಿಗ್ರಹವಾಗದೆ ಹೋಗಬೇಕಾಗುವುದು. ಜ್ಞಾನಾತ್ಮಗಳಿಗೆ ಸರ್ವಥಾ ಭೇದವಿದ್ದರೂ ಸಮವಾಯ ಸಂಬಂಧದಿಂದ ಪ್ರತಿನಿಯತವಾದ ಜ್ಞಾನಾತ್ಮಗಳು ಸಂಬದ್ಧವಾಗಿ ಪ್ರತಿನಿಯತ ವಿಷಯ ಪರಿಜ್ಞಾನವಾಗುವುದೆಂದು ಹೇಳುವುದಾದರೆ ಸಮವಾಯವು ನಿತ್ಯವೂ ಏಕವೂ ವ್ಯಾಪಕವೂ ಆಗಿರುವುದರಿಂದಲೂ, ವೈಶೇಷಿಕ ಮತದಂತೆ ಆತ್ಮರೂ ವ್ಯಾಪಕರಾಗಿರುವುದರಿಂದಲೂ ಜ್ಞಾನವು ಪ್ರತಿನಿಯತವಾದ ಆತ್ಮದಲ್ಲಿಯೇ ಸಂಬದ್ಧವಾಗುವುದು ಹೇಗೆ? ಒಂದು ಜ್ಞಾನವು ಒಂದು ಆತ್ಮನಲ್ಲಿ ಸಂಬದ್ಧವಾದರೆ, ಸಮವಾಯವೂ ಆತ್ಮರೂ ವ್ಯಾಪಕರಾಗಿರುವುದರಿಂದ ಅದೇ ಜ್ಞಾನವು ಎಲ್ಲ ಆತ್ಮರಲ್ಲಿಯೂ ಸಂಬದ್ಧವಾಗಬಾರದೇಕೆ? ಹಾಗೆ ಸಂಬದ್ಧವಾದರೆ ಪ್ರತಿನಿಯತ ಸಮಯದಲ್ಲಿ ಪ್ರತಿನಿಯತ ವಿಷಯವನ್ನು ಎಲ್ಲ ಆತ್ಮರೂ ತಿಳಿಯುವ ಪ್ರಸಂಗವು ಬರುವುದು. ಆದುದರಿಂದ ಆತ್ಮನಿಗೂ ಜ್ಞಾನಕ್ಕೂ ತಾದಾತ್ಮ್ಯ ಸಂಬಂಧವನ್ನು ಒಪ್ಪಬೇಕಾಗುವುದು.

ಬುದ್ಧಿ, ಸುಖ, ದುಃಖ, ಇಚ್ಛಾ, ದ್ವೇಷ, ಪ್ರಯತ್ನ, ಧರ್ಮ, ಅಧರ್ಮ, ಸಂಸ್ಕಾರ ಎಂಬೀ ಒಂಬತ್ತು ಆತ್ಮನ ವಿಶೇಷಗುಣಗಳೆಂದೂ, ಆತ್ಮನಲ್ಲಿರುವ ಈ ಒಂಬತ್ತು ಗುಣಗಳ ಸಂಪೂರ್ಣ ನಾಶವೇ ಆತ್ಮನ

ಮುಕ್ತಿಯೆಂದೂ ವೈಶೇಷಿಕರು ಹೇಳುವರು. ಈ ಒಂಬತ್ತು ಗುಣಗಳಲ್ಲಿ ಜ್ಞಾನವೂ ಸುಖವೂ ಸೇರಿರುವುದರಿಂದ ಆತ್ಮನಿಗೆ ಮೋಕ್ಷಾವಸ್ಥೆಯಲ್ಲಿ ಜ್ಞಾನ ಸುಖಗಳು ಇರುವುದಿಲ್ಲವೆಂದು ಹೇಳಿದಂತಾಯಿತು. ಜ್ಞಾನ ಸುಖಗಳು ಇಲ್ಲದಿದ್ದರೆ ಆತ್ಮನು ಜಡ ವಸ್ತುವಿನಂತೆ ಇರುವನೆಂದು ಹೇಳಬೇಕಾದ್ದದಿಲ್ಲ. ವೃಕ್ಷಕಾಷ್ಠಪಾಷಾಣಾದಿಗಳಂತೆ ಜಡರೂಪವಾಗಿ ಬಿದ್ದಿರಬೇಕಾಗಿರುವ ಇಂತಹ ಮೋಕ್ಷವನ್ನು ಯಾರು ಬಯಸುವರು? ಇದಕ್ಕಿಂತ ಸಂಸಾರವೇ ಮೇಲಲ್ಲವೇ? ಸಂಸಾರದಲ್ಲಿ ಸ್ವಲ್ಪವಾದರೂ ಸುಖವುಂಟು. ಸ್ವಲ್ಪ ಸುಖಕ್ಕಿಂತ ಸಂಪೂರ್ಣ ನಿಸ್ಸುಖವು ಮೇಲಾಗಬಹುದೇ? ಆದುದರಿಂದ ಅಶೇಷ ಕರ್ಮಕ್ಷಯಾನಂತರದಲ್ಲಿ ಉಂಟಾಗುವ ಜ್ಞಾನ ಸುಖಮಯವಾದ ಮೋಕ್ಷವೇ ಸರ್ವ ಜನಾದರಣೀಯವಾಗತಕ್ಕದೆಂಬ ವಿಷಯದಲ್ಲಿ ಸಂಶಯವಿಲ್ಲ.

ಮೇಲಿನ ವಿವರಣೆಯಿಂದ ಕಂಡು ಬರುವುದೇನೆಂದರೆ:- ಚಾರ್ವಾಕರಂತೆ ದೇಹ ಭಿನ್ನ ಆತ್ಮನನ್ನು ಒಪ್ಪದಿರುವುದು ಸರಿಯಲ್ಲ. ಜೈನರ ಜೀವವೂ ಬೌದ್ಧರ ವಿಜ್ಞಾನ ಪ್ರವಾಹವೂ ಒಂದೇ ಅಲ್ಲ; ಏಕೆಂದರೆ ಜೀವವು ಸ್ವಸ್ವರೂಪವೂ ಸತ್ಯವೂ ನಿತ್ಯವೂ ಆದ ಪದಾರ್ಥವು. ಜೈನರ ಜೀವವೂ ವೇದಾಂತಿಗಳ ಬ್ರಹ್ಮವೂ ಒಂದೇ ಅಲ್ಲ; ಏಕೆಂದರೆ ಬ್ರಹ್ಮವು ಏಕವು; ಜೀವಗಳು ಅಸಂಖ್ಯವಾಗಿವೆ. ಜೈನರ ಜೀವನೂ ಸಾಂಖ್ಯರ ಪುರುಷನೂ ಒಂದೇ ಅಲ್ಲ; ಏಕೆಂದರೆ, ಜೈನರ ಜೀವನು ನಿತ್ಯ ಶುದ್ಧನೂ ನಿತ್ಯ ಮುಕ್ತನೂ ಅಲ್ಲ; ಆತನ ಬಂಧವು ಸತ್ಯವಾದುದು. ಜೈನರ ಜೀವನೂ, ನೈಯಾಯಿಕ ವೈಶೇಷಿಕರ ಆತ್ಮನೂ ಒಂದೇ ಅಲ್ಲ; ಏಕೆಂದರೆ ಜೈನರ ಜೀವನು ಜಡಸ್ವರೂಪನಲ್ಲ, ಸಾಕ್ಷಾತ್ಕರ್ತನು.

---

## ಜೀವನಿರೂಪಣ.

ಇಲ್ಲಿ ಪಂಚಾಸ್ತಿಕಾಯಸಮಯಸಾರ, ಬೃಹದ್ದ್ರವ್ಯಸಂಗ್ರಹ ಈ ಎರಡು ಗ್ರಂಥಗಳಲ್ಲಿ ಹೇಳಿದ ಜೀವನಿರೂಪಣವನ್ನು ಬರೆದಿದೆ. ಅವುಗಳಿಂದ ಜೈನರು ಹೇಳುವ ಜೀವಸ್ವರೂಪವು ಚೆನ್ನಾಗಿ ತಿಳಿಯುವುದು.

ಜೀವೋತ್ತಿ ಹವದಿ ಚೇದಾ ।
ಉಪಓಗವಿಸೇಸಿದೋ ಪಹೂ ಕತ್ತಾ ।
ಭೋತ್ತಾ ಯ ದೇಹಮತ್ತೋ ।
ಣ ಹಿ ಮುತ್ತೋ ಕಮ್ಮ ಸಂಜುತ್ತೋ ॥

(ಜೀವ ಇತಿ ಭವತಿ ಚೇತಯಿತೋಪಯೋಗ ವಿಶೇಷಿತಃ ಪ್ರಭುಃ ಕರ್ತಾ ।
ಭೋಕ್ತಾ ಚ ದೇಹಮಾತ್ರೋ ನಹಿ ಮೂರ್ತಃ ಕರ್ಮಸಂಯುಕ್ತಃ ॥)

ಪಂಚಾಸ್ತಿಕಾಯಸಮಯಸಾರ, ೨೭.

ಅರ್ಥ:—ಚೇತನೆ, ಉಪಯೋಗ ಇವುಗಳಿಂದ ಯುಕ್ತನೂ, ಪ್ರಭುವೂ, ಕರ್ತೃವೂ, ಭೋಕ್ತೃವೂ, ದೇಹಪರಿಮಾಣನೂ, ಅಮೂರ್ತನೂ, ಕರ್ಮಯುಕ್ತನೂ, ದ್ರವ್ಯರೂಪನೂ ಆದವನು ಜೀವನು.

ಸಂಸಾರಿ ಜೀವನಿಗೆ ಸೋಪಾಧಿ ನಿರುಪಾಧಿ ಎಂಬ ಎರಡು ಸ್ವರೂಪಗಳು. ಈ ಎರಡು ಸ್ವರೂಪಗಳು ವ್ಯವಹಾರನಯ, ನಿಶ್ಚಯನಯ, ಈ ಎರಡರಿಂದ ನಿರ್ಣಯಿಸಲ್ಪಟ್ಟಿರುವುವು. ವ್ಯವಹಾರನಯದಿಂದ ಹೇಳಲ್ಪಟ್ಟುದು ಸೋಪಾಧಿ ಸ್ವರೂಪವು; ನಿಶ್ಚಯನಯದಿಂದ ಹೇಳಲ್ಪಟ್ಟುದು ನಿರುಪಾಧಿ ಸ್ವರೂಪವು. ಬದುಕುವವನು, ಪ್ರಾಣಧಾರಣ ಮಾಡುವವನು ಜೀವನೆನಿಸುವನು. (ಜೀವ = ಪ್ರಾಣಧಾರಣ ಮಾಡುವವ) ಪ್ರಾಣಗಳಲ್ಲಿ ಮುಖ್ಯವಾಗಿ ಭಾವಪ್ರಾಣ, ದ್ರವ್ಯಪ್ರಾಣ ಎಂದು ಎರಡು ಪ್ರಕಾರಗಳು. ಸುಖ, ಸತ್ತೆ, ಜ್ಞಾನ, ಉಪಯೋಗ ಮೊದಲಾದುವು ಭಾವ ಪ್ರಾಣಗಳು; ಇಂದ್ರಿಯ, ಬಲ, ಆಯುಸ್ಸು, ಶ್ವಾಸೋಚ್ಛ್ವಾಸಗಳು ದ್ರವ್ಯಪ್ರಾಣಗಳು. ನಿಶ್ಚಯನಯಾಪೇಕ್ಷೆಯಿಂದ ಜೀವನು ಭಾವಪ್ರಾಣಧಾರಣ ಮಾಡುವವನು, (ಇದು ಆತ್ಮನ ನಿರುಪಾಧಿಸ್ವರೂಪವು) ವ್ಯವಹಾರನಯಾಪೇಕ್ಷೆಯಿಂದ ಜೀವನು ದ್ರವ್ಯಪ್ರಾಣಧಾರಣ ಮಾಡುವವನು (ಇದು ಆತ್ಮನ ಸೋಪಾಧಿಸ್ವರೂಪವು). ಜೀವನು ನಿಶ್ಚಯನಯಾಪೇಕ್ಷೆಯಿಂದ ಶುದ್ಧ ಚೇತನೆಯಿಂದ ಕೂಡಿದವನು (ಚೇತಯಿತೃ); ವ್ಯವಹಾರನಯಾಪೇಕ್ಷೆಯಿಂದ ಚೈತನ್ಯದ ಪರಿಣಾಮವಾದ ಉಪಯೋಗದಿಂದ ಕೂಡಿದವನು. (ಉಪಯೋಗ—ಪದಾರ್ಥಜ್ಞಾನ ಮಾಡಿಕೊಳ್ಳುವ ಆತ್ಮನ ಕ್ರಿಯೆ).

ನಿಶ್ಚಯನಯಾಪೇಕ್ಷೆಯಿಂದ ಆತ್ಮನು ಭಾವಕರ್ಮಗಳ ಆಸ್ರವದಲ್ಲಿ ಸಮರ್ಥನು; ಭಾವಕರ್ಮಗಳ ಬಂಧನನ್ನು ಮಾಡಿಕೊಳ್ಳುವಲ್ಲಿ ಸಮರ್ಥನು. ಭಾವಕರ್ಮಗಳ ಸಂವರ ಮಾಡಲು ಸಮರ್ಥನು, ಭಾವಕರ್ಮಗಳ ನಿರ್ಜರ (ಕ್ಷಯ) ಮಾಡುವಲ್ಲಿ ಸಮರ್ಥನು, ಭಾವಕರ್ಮಗಳ ಮೋಕ್ಷ (ತ್ಯಾಗ)

ಮಾಡುವಲ್ಲಿ ಸಮರ್ಥನು; ಇದೇ ಮೇರೆಗೆ ದ್ರವ್ಯಕರ್ಮಗಳ ಆಸ್ರವ, ಬಂಧ, ಸಂವರ, ನಿರ್ಜರ, ಮೋಕ್ಷಗಳಲ್ಲಿ ಸಮರ್ಥನು; ಆದುದರಿಂದ ಆತ್ಮನು ಪ್ರಭುವೆನಿಸುವನು.

ಜೀವನು ನಿಶ್ಚಯನಯಾಪೇಕ್ಷೆಯಿಂದ ಪುದ್ಗಲದ್ರವ್ಯಗಳ (ಕರ್ಮಗಳ) ನಿಮಿತ್ತದಿಂದ ಆಗುವ ಆತ್ಮನ ಪರಿಣಾಮಗಳ ಕರ್ತೃವು, ವ್ಯವಹಾರನಯಾಪೇಕ್ಷೆಯಿಂದ ಆತ್ಮನ ಪರಿಣಾಮಗಳಿಂದ ಉಂಟಾಗುವ ಪುದ್ಗಲದ್ರವ್ಯಗಳ ಕರ್ಮಗಳ ಕರ್ತೃವು.

ಆತ್ಮನು ನಿಶ್ಚಯನಯಾಪೇಕ್ಷೆಯಿಂದ ಶುಭಾಶುಭ ಕರ್ಮಗಳಿಂದುಂಟಾಗುವ ಸುಖದುಃಖಾತ್ಮಕ ಪರಿಣಾಮಗಳ ಭೋಕ್ತೃವು; ವ್ಯವಹಾರನಯಾಪೇಕ್ಷೆಯಿಂದ ಶುಭಾಶುಭ ಕರ್ಮಗಳಿಂದ ಪ್ರಾಪ್ತವಾಗುವ ಪ್ರಿಯಾಪ್ರಿಯ ಸ್ತ್ರೀಪುತ್ರಾದಿ ವಿಷಯಗಳ ಭೋಕ್ತೃವು.

ಜೀವನು ನಿಶ್ಚಯನಯಾಪೇಕ್ಷೆಯಿಂದ ತ್ರೈಲೋಕ್ಯವನ್ನು ವ್ಯಾಪಿಸುವಷ್ಟು ದೊಡ್ಡವನಿದ್ದರೂ ವ್ಯವಹಾರನಯಾಪೇಕ್ಷೆಯಿಂದ 'ಶರೀರ' ಎಂಬ ಕರ್ಮದ ಉದಯದಿಂದ ದೊರೆತ ಸಣ್ಣದೊಡ್ಡ ಶರೀರಗಳಲ್ಲಿರುವುದರಿಂದ ಆ ಆ ದೇಹಗಳ ಪ್ರಮಾಣವುಳ್ಳವನು.

ವ್ಯವಹಾರನಯದಿಂದ ಶರೀರರೂಪಪುದ್ಗಲಗಳೊಡನೆ ಏಕರೂಪನಾಗಿರುವದರಿಂದ ಮೂರ್ತನಾಗಿದ್ದರೂ, ನಿಶ್ಚಯನಯದಿಂದ ಪುದ್ಗಲಗಳ ವರ್ಣಾದಿ ಗುಣಗಳು ಆತನಲ್ಲಿಲ್ಲವಾದುದರಿಂದ ಆತನು ಅಮೂರ್ತನು (ನಿರಾಕಾರನು).

ನಿಶ್ಚಯನಯದಿಂದ ಆತ್ಮನು ಪುದ್ಗಲ ದ್ರವ್ಯಗಳನ್ನನುಸರಿಸಿ ಆಗುವ ಚೈತನ್ಯ ಪರಿಣಾಮ (ಭಾವಕರ್ಮ) ಗಳಿಂದ ಯುಕ್ತನು; ವ್ಯವಹಾರನಯದಿಂದ ಚೈತನ್ಯ ಪರಿಣಾಮಗಳಿಗೆ ಅನುಕೂಲವಾದ ಪುದ್ಗಲ ಪರಿಣಾಮಗಳಿಂದ (ಪುದ್ಗಲ ಕರ್ಮಗಳಿಂದ) ಯುಕ್ತನು. ಆದುದರಿಂದ ಜೀವನು ಕರ್ಮಯುಕ್ತನು. ಆತ್ಮನ ರಾಗದ್ವೇಷಮೋಹಾದಿ ಪರಿಣಾಮಗಳಿಗೆ ಭಾವಕರ್ಮಗಳೆಂದೆನ್ನುವರು. ಭಾವಕರ್ಮಗಳು ಆತ್ಮಪರಿಣಾಮರೂಪವಾಗಿರುವುದರಿಂದ ಆತ್ಮನು ನಿಶ್ಚಯನಯಾಪೇಕ್ಷೆಯಿಂದಲೂ ಕರ್ಮಯುಕ್ತನೆಂದು ಸಿದ್ಧವಾಗುವುದು.

ಸರ್ವಕರ್ಮಗಳಿಂದ ಮುಕ್ತನಾದ ಆತ್ಮನು ತನ್ನ ಊರ್ಧ್ವಗಮನ

ಸ್ವಭಾವದಿಂದ ಲೋಕಾಂತದಲ್ಲಿ ಹೋಗಿ ಸರ್ವಜ್ಞನೂ ಸರ್ವದೃಷ್ಟೃವೂ ಆಗುವನು.

**ಜೀವೋ ಉವಓಗಮಓ ಅಮುತ್ತಿ ಕತ್ತಾ ಸದೇಹಪರಿಮಾಣೋ,**
**ಭೋತ್ತಾ ಸಂಸಾರತ್ಥೋ ಸಿದ್ಧೋ ಸೋ ವಿಸ್ಸಸೋಡ್ಢಗಈ ॥**

**ಬೃಹದ್ದ್ರವ್ಯಸಂಗ್ರಹ, ೨.**

**ಜೀವ**—ಶುದ್ಧ ನಿಶ್ಚಯನಯದಿಂದ ಜೀವನು ಆದಿಮಧ್ಯಾಂತವರ್ಜಿತವೂ ಶಾಶ್ವತವೂ, ನಿರುಪಾಧಿಕವೂ ಆದ ಶುದ್ಧ ಚೈತನ್ಯಲಕ್ಷಣಪ್ರಾಣದಿಂದ ಜೀವಿಸುವವನು; ಅಶುದ್ಧನಯದಿಂದ ಅನಾದಿ ಕರ್ಮಬಂಧಮೂಲಕ ಅಶುದ್ಧ ದ್ರವ್ಯಭಾವ ಪ್ರಾಣಗಳಿಂದ ಜೀವಿಸುವವನು.

**ಉಪಯೋಗಮಯ**—ಶುದ್ಧ-ದ್ರವ್ಯಾರ್ಥಿಕ ನಯದಿಂದ ಜೀವನು ಸಕಲ ವಿಮಲ ಕೇವಲ ಜ್ಞಾನ ದರ್ಶನೋಪಯೋಗಮಯನು; ಆದರೆ ಅಶುದ್ಧ ನಯಾನುಸಾರವಾಗಿ ಕ್ಷಾಯೋಪಶಮಿಕ ಜ್ಞಾನದರ್ಶನ ನಿವೃತ್ತಿಯಿಂದ ಜ್ಞಾನದರ್ಶನೋಪಯೋಗಮಯನು.

**ಅಮೂರ್ತ**—ವ್ಯವಹಾರನಯಾನುಸಾರವಾಗಿ 'ಶರೀರ' ಕರ್ಮಾಧೀನತೆಯಿಂದ ಸ್ಪರ್ಶಾದಿಗುಣ ವಿಶಿಷ್ಟವಾದ ಶರೀರದಿಂದ ಕೂಡಿ ಮೂರ್ತನೆನಿಸಿದರೂ ಶುದ್ಧನಯಾನುಸಾರವಾಗಿ ಅಮೂರ್ತ, ಅತೀಂದ್ರಿಯ, ಶುದ್ಧ, ಬುದ್ಧೈಕ ಸ್ವಭಾವನಾದುದರಿಂದ ಅಮೂರ್ತನು.

**ಕರ್ತೃ**—ಶುದ್ಧ ನಯಾನುಸಾರವಾಗಿ ನಿಷ್ಕ್ರಿಯನು ಆದರೆ ವ್ಯವಹಾರ ನಯಾನುಸಾರವಾಗಿ ಮನೋವಚನ ಕಾಯವ್ಯಾಪಾರೋತ್ಪಾದಕ ಕರ್ಮಸಹಿತನಾದುದರಿಂದ ಶುಭಾಶುಭ ಕರ್ಮಕರ್ತೃವಾದುದರಿಂದ ಕರ್ತೃವು.

**ಸ್ವದೇಹಪರಿಮಾಣ**—ನಿಶ್ಚಯನಯಾನುಸಾರವಾಗಿ ಸಹಜ ಶುದ್ಧ ಲೋಕಾಕಾಶ ಪ್ರಮಿತ ಅಸಂಖ್ಯೇಯ ಪ್ರದೇಶವುಳ್ಳವನು; ಆದರೆ ವ್ಯವಹಾರನಯದಿಂದ ಅನಾದಿ ಕರ್ಮಬಂಧ ನಿಮಿತ್ತದಿಂದ 'ಶರೀರ' ಎಂಬ ಕರ್ಮದ ಉದಯದಿಂದುಂಟಾದ ಉಪಸಂಹಾರ, ವಿಸ್ತಾರಗಳುಳ್ಳವನಾಗಿ ಘಟದಲ್ಲಿದ್ದ ದೀಪದಂತೆ ಸ್ವದೇಹಪರಿಮಾಣನು.

**ಭೋಕ್ತೃ**—ಜೀವನು ಶುದ್ಧ ದ್ರವ್ಯಾರ್ಥಿಕನಯದಿಂದ ರಾಗಾದಿ

ವಿಕಲ್ಪೋಪಾಧಿ ರಹಿತಸ್ವಾತ್ಮೋತ್ಥ ಸುಖಾಮೃತ ಭೋಕ್ತೃವು; ಆದರೆ ಅಂತಹ ಸುಖಾಮೃತಭೋಜನವಿಲ್ಲದುದರಿಂದ ಅಶುದ್ಧನಿಶ್ಚಯನಯಾನುಸಾರವಾಗಿ ಶುಭಾಶುಭ ಕರ್ಮಜನಿತ ಸುಖದುಃಖಭೋಕ್ತೃವು.

ಸಂಸಾರಸ್ಥ- ಶುದ್ಧ ನಿಶ್ಚಯನಯಾನುಸಾರವಾಗಿ ಜೀವನು ಸಂಸಾರರಹಿತನೂ, ನಿತ್ಯಾನಂದೈಕರೂಪನೂ ಆಗಿದ್ದರೂ ಅಶುದ್ಧನಯಾನುಸಾರವಾಗಿ ದ್ರವ್ಯ, ಕ್ಷೇತ್ರ, ಭವ, ಭಾವರೂಪವಾದ ಪಂಚವಿಧ ಸಂಸಾರದಲ್ಲಿರುವವನು.

ಸಿದ್ಧ- ಸ್ವಾತ್ಮೋಪಲಬ್ಧಿ ರೂಪವಾದ ಸಿದ್ಧತ್ವಕ್ಕೆ ಪ್ರತಿಪಕ್ಷ ಭೂತವಾದ ಕರ್ಮಗಳ ಉದಯದಿಂದ ಜೀವನು ಅಸಿದ್ಧನಾದರೂ ನಿಶ್ಚಯನಯಾನುಸಾರವಾಗಿ ಅನಂತಗುಣ ಸ್ವಭಾವನಾದುದರಿಂದ ಸಿದ್ಧನು.

ಊರ್ಧ್ವಗತಿಶೀಲ- ವ್ಯವಹಾರನಯಾನುಸಾರವಾಗಿ ಜೀವನು ಚತುರ್ಗತಿಗಳಿಗೆ ಕಾರಣೀಭೂತವಾದ ಕರ್ಮಗಳ ಉದಯದಿಂದ ಊರ್ಧ್ವ- ಅಧಸ್- ತಿರ್ಯಕ್- ಗತಿಗಳುಳ್ಳವನಾದರೂ ನಿಶ್ಚಯನಯಾನುಸಾರವಾಗಿ ಮೋಕ್ಷಕಾಲದಲ್ಲಿ ಊರ್ಧ್ವಗತಿ ಶೀಲನು.

## ಜೀವನ ಸ್ವತತ್ತ್ವ (ಗುಣ)ಗಳು.

ಉದಯ, ಉಪಶಮ, ಕ್ಷಯ, ಕ್ಷಯೋಪಶಮ ಎಂಬಿವು ಕರ್ಮಗಳ ನಾಲ್ಕು ಅವಸ್ಥೆಗಳು. ಉದಯ-ಕರ್ಮವು ಫಲಕೊಡಲುನ್ಮುಖವಾಗುವ ಅವಸ್ಥೆಯು. ಉಪಶಮ- ಕರ್ಮಗಳಲ್ಲಿ ಫಲ ಕೊಡುವ ಸಾಮರ್ಥ್ಯವು ಕೆಲವು ಕಾರಣಗಳಿಂದ ಉತ್ಪನ್ನವಾಗದಿರುವುದು; ಕ್ಷಯ-ಕರ್ಮಗಳು ನಿಶ್ಶೇಷವಾಗಿ ನಾಶವಾಗುವುದು; ಕ್ಷಯೋಪಶಮ- ಒಂದು ಕರ್ಮದ ಕೆಲವಂಶದ ಕ್ಷಯವೂ, ಕೆಲವಂಶದ ಉಪಶಮವೂ. ಔದಯಿಕಭಾವ- ಉದಯದಲ್ಲುಂಟಾಗುವ ಮನುಷ್ಯ ದೇವ ನಾರಕ ತಿರ್ಯಗ್ಗತಿಗಳೆಂಬ ನಾಲ್ಕು ಗತಿ, ಕ್ರೋಧ ಮಾನ ಮಾಯಾಲೋಭಗಳೆಂಬ ನಾಲ್ಕು ಕಷಾಯ, ಸ್ತ್ರೀವೇದ ಪುಂವೇದ ನಪುಂಸಕವೇದ ಎಂಬ ಮೂರು ಲಿಂಗ, ಮಿಥ್ಯಾದರ್ಶನ, ಅಜ್ಞಾನ, ಅಸಂಯಮ, ಅಸಿದ್ಧತ್ವ, ಆರು ಲೇಶ್ಯೆ ( ಪೀತ, ಪದ್ಮ, ಶುಕ್ಲ, ಕೃಷ್ಣ, ನೀಲ, ಕಪೋತ ಎಂಬಿವು) ಎಂಬ ೨೧ ಭಾವಗಳು ಔದಾಯಿಕ ಭಾವಗಳು. ಔಪಶಮಿಕಭಾವ- ಉಪಶಮದಿಂದುಂಟಾಗುವ ಔಪಶಮಿಕಸಮ್ಯಕ್ತ್ವ, ಔಪಶಮಿಕ ಚಾರಿತ್ರ ಎಂಬ ಎರಡು ಭಾವಗಳು ಔಪಶಮಿಕಗಳು. ಕ್ಷಾಯಿಕಭಾವ- ಕ್ಷಯದಿಂದುಂಟಾಗುವ ಕೇವಲ ಜ್ಞಾನ, ಕೇವಲ ದರ್ಶನ, ಕ್ಷಾಯಿಕದಾನ, ಕ್ಷಾಯಿಕಲಾಭ, ಕ್ಷಾಯಿಕಭೋಗ, ಕ್ಷಾಯಿಕ ಉಪಭೋಗ, ಕ್ಷಾಯಿಕ ವೀರ್ಯ, ಕ್ಷಾಯಿಕ ಸಮ್ಯಕ್ತ್ವ, ಕ್ಷಾಯಿಕಚಾರಿತ್ರ ಎಂಬ ಒಂಬತ್ತು ಭಾವಗಳು ಕ್ಷಾಯಿಕಗಳು. ಕ್ಷಾಯೋಪಶಮಿಕ (ಮಿಶ್ರ) ಭಾವ- ಕ್ಷಯೋಪಶಮಗಳಿಂದುಂ

ಟಾಗುವ ಮತಿಜ್ಞಾನ, ಶ್ರುತಜ್ಞಾನ, ಅವಧಿಜ್ಞಾನ, ಮನಃಪರ್ಯಯಜ್ಞಾನ, (೪ ಜ್ಞಾನ) ಕುಮತಿಜ್ಞಾನ, ಕುಶ್ರುತಜ್ಞಾನ, ವಿಭಂಗಜ್ಞಾನ (ಕು ಅವಧಿಜ್ಞಾನ) (೩ ಅಜ್ಞಾನ) ಚಕ್ಷುರ್ದರ್ಶನ, ಅಚಕ್ಷುರ್ದರ್ಶನ, ಅವಧಿದರ್ಶನ, (೩ ದರ್ಶನ) ಕ್ಷಾಯೋಪಶಮಿಕದಾನ, ಕ್ಷಾಯೋಪಶಮಿಕಲಾಭ, ಕ್ಷಾಯೋಪಶಮಿಕಭೋಗ, ಕ್ಷಾಯೋಪಶಮಿಕಉಪಭೋಗ, ಕ್ಷಾಯೋಪಶಮಿಕ ವೀರ್ಯ (೫ ಲಬ್ಧಿ) ವೇದಕ ಸಮ್ಯಕ್ತ್ವ,ಸರಾಗ ಚಾರಿತ್ರ, ಸಂಯಮಾ ಸಂಯಮ ಎಂದು ೧೮ ವಿಧ ವಾಗಿದೆ. ಪಾರಿಣಾಮಿಕಭಾವ– ಕರ್ಮಗಳ ಉದಯ, ಉಪಶಮ ಮೊದಲಾದುವು ಗಳ ಅಪೇಕ್ಷೆಯಿಲ್ಲದೆ ಆತ್ಮನಲ್ಲಿ ಅನಾದಿಯಿಂದಿರುವ ಜೀವತ್ವ, ಭವ್ಯತ್ವ, ಅಭ ವ್ಯತ್ವ ಎಂಬಿವು ಪಾರಿಣಾಮಿಕ ಭಾವಗಳು.

ಜೀವಲಕ್ಷಣ– "ಚೇತನಾಲಕ್ಷಣೋ ಜೀವಃ ಶರೀರ ಪರಿಮಾಣ ಭಾಕ್"– ನೇಮಿನಿರ್ವಾಣಕಾವ್ಯ "ಅನನ್ಯಭೂತಸ್ತಸ್ಯಸ್ಯಾದುಪಯೋಗೋಹಿ ಲಕ್ಷಣಂ"– ತತ್ತ್ವಾರ್ಥಸಾರ. ಉಪಯೋಗೋ ಲಕ್ಷಣಂ– ತತ್ತ್ವಾರ್ಥಸೂತ್ರ. ಈ ಎಲ್ಲ ವಾಕ್ಯಗಳಲ್ಲಿ ಚೈತನ್ಯ ಇಲ್ಲವೆ ಉಪಯೋಗವೆಂಬುದು ಜೀವನ ಅನ*ನ್ಯಭೂತ ಲಕ್ಷಣವೆಂದು ಹೇಳಲ್ಪಟ್ಟಿದೆ. ಉಪಯೋಗವೆಂದರೆ, ಆತ್ಮನಲ್ಲಿ ಉಂಟಾಗುವ ತಿಳಿಯುವ ಕ್ರಿಯೆ. ವಸ್ತುಜ್ಞಾನವುಂಟಾಗಬೇಕಾದರೆ ಈ ತಿಳಿಯುವ ಕ್ರಿಯೆಯು (ಆತ್ಮನ ವ್ಯಾಪಾರವು) ಉಂಟಾಗಲೇ ಬೇಕು. ಒಮ್ಮೊಮ್ಮೆ ನಾವು ವಿಷಯಾಂ ತರದಲ್ಲಿ ಮಗ್ನರಾಗಿದ್ದರೆ ನಮ್ಮ ಇದಿರಿನಲ್ಲಿದ್ದ ವಸ್ತುವಿನ ಜ್ಞಾನವೂ ನಮಗೆ ಆಗು ವುದಿಲ್ಲ. ಆದುದರಿಂದ ವಸ್ತುಜ್ಞಾನಕ್ಕೆ ವಸ್ತು, ಇಂದ್ರಿಯ ಇವುಗಳ ಸಂಯೋ ಗವಷ್ಟೇ ಅಲ್ಲದೆ ತಿಳಿಯುವ ಕ್ರಿಯೆ– ಇಲ್ಲವೆ– ಉಪಯೋಗ ಎಂಬ ಅಂತರಂಗ ಕಾರಣವೂ ಅವಶ್ಯವೆಂಬುದು ಸ್ಪಷ್ಟವು.

ಉಪಯೋಗದಲ್ಲಿ ದರ್ಶನೋಪಯೋಗ, ಜ್ಞಾನೋಪಯೋಗ ಎಂಬ ಎರಡು ಪ್ರಕಾರಗಳು.

ದರ್ಶನೋಪಯೋಗ– ವಿಶೇಷಜ್ಞಾನರಹಿತವಾದ ಸಾಮಾನ್ಯ ಅನುಭೂ ತಿಯು ದರ್ಶನೋಪಯೋಗವು. ಇದರಲ್ಲಿ ಚಕ್ಷುರ್ದರ್ಶನ, ಅಚಕ್ಷುರ್ದರ್ಶನ, ಅವಧಿದರ್ಶನ, ಕೇವಲದರ್ಶನ ಎಂಬ ನಾಲ್ಕು ಪ್ರಕಾರಗಳುಂಟು. ಚಕ್ಷುರಿಂ ದ್ರಿಯದಿಂದಾಗುವ ಅನುಭೂತಿಯು ಚಕ್ಷುರ್ದರ್ಶನವು; ಕರ್ಣರಸನಾದಿ ಇಂದ್ರಿ ಯಗಳಿಂದಾಗುವ ಅನುಭೂತಿಯು ಅಚಕ್ಷುರ್ದರ್ಶನವು; ಸ್ಥೂಲೇಂದ್ರಿಯಗಳಿಗೆ ಗೋಚರವಾಗದ ವಿಷಯಗಳು ಕೆಲವೊಂದು ಮರ್ಯಾದೆ(ಅವಧಿ)ಯಿಂದ ಗೋಚ ರವಾಗುವುದು ಅವಧಿ ದರ್ಶನವು; ಜಗತ್ತಿನೊಳಗಿನ ಸಮಸ್ತ ವಸ್ತುಗಳ ನಿತ್ಯವಾದ

* ಅಗ್ನಿಗೆ ಉಷ್ಣತೆಯು ಆತ್ಮಭೂತಲಕ್ಷಣವು; ದೇವದತ್ತನಿಗೆ ದಂಡವು ಅನಾತ್ಮಭೂತ ಲಕ್ಷಣವು.

ಅಪರೋಕ್ಷಾನುಭೂತಿಯು ಕೇವಲದರ್ಶನವು. ಅವಧಿದರ್ಶನ, ಕೇವಲದರ್ಶನಗಳು ಅಸಾಧಾರಣಗಳು; ಎಂದರೆ ಅವು ಎಲ್ಲ ಜೀವರಲ್ಲಿರುವುದಿಲ್ಲ. ಕೇವಲ ದರ್ಶನವು ಮುಕ್ತ ಜೀವರಲ್ಲಿ ಮಾತ್ರ ಇರುವುದು.

ಚಕ್ಷುರ್ದರ್ಶನ– ಜೀವನು ತನ್ನ ಅನಂತ ಪ್ರದೇಶಗಳಲ್ಲಿ ವ್ಯಾಪ್ತವಾಗಿರುವ ಶುದ್ಧದರ್ಶನ ಸ್ವರೂಪನಾಗಿದ್ದರೂ ಅನಾದಿ– ದರ್ಶನಾವರಣೀಯ ಕರ್ಮ ಪುದ್ಗಲಗಳಿಂದ ಆತನ ಪ್ರದೇಶಗಳು ಆಚ್ಛಾದಿಸಲ್ಪಟ್ಟಿರುವುವು. ಇದರಿಂದ ಚಕ್ಷುರ್ದರ್ಶನಾವರಣೀಯ ಕರ್ಮದ ಕ್ಷಯೋಪಶಮವಾದಾಗ ನೇತ್ರೇಂದ್ರಿಯದ ಸಹಾಯದಿಂದ ಆತ್ಮನಿಗೆ ಮೂರ್ತ ದ್ರವ್ಯಗಳ ವಿಕಲ (ಏಕದೇಶ) ಜ್ಞಾನವುಂಟಾಗುವುದು. ಇದು ಚಕ್ಷುರ್ದರ್ಶನವು.

ಅಚಕ್ಷುರ್ದರ್ಶನ– ಅಚಕ್ಷುರ್ದರ್ಶನಾವರಣೀಯ ಕರ್ಮದ ಕ್ಷಯೋಪಶಮವಾಗಲು ಚಕ್ಷುರ್ಭಿನ್ನವಾದ ಇಂದ್ರಿಯಗಳೂ, ಮನಸ್ಸೂ ಇವುಗಳ ಸಹಾಯದಿಂದ ಆತ್ಮನಿಗೆ ಮೂರ್ತ, ಅಮೂರ್ತ ದ್ರವ್ಯಗಳ ವಿಕಲಜ್ಞಾನವುಂಟಾಗುವುದು; ಇದು ಅಚಕ್ಷುರ್ದರ್ಶನವು.

ಅವಧಿ ದರ್ಶನ– ಅವಧಿ ದರ್ಶನಾವರಣೀಯ ಕರ್ಮದ ಕ್ಷಯೋಪಶಮವಾಗಲು ಇಂದ್ರಿಯ ಮನಸ್ಸುಗಳ ಸಹಾಯವಿಲ್ಲದೆ ಆತ್ಮನಿಗಾಗುವ ಮೂರ್ತ ದ್ರವ್ಯಗಳ ಸಾಮಾನ್ಯಜ್ಞಾನವು ಅವಧಿದರ್ಶನವು.

ಕೇವಲ ದರ್ಶನ– ದರ್ಶನಾವರಣೀಯ ಕರ್ಮದ ಸಮೂಲ ನಾಶವಾಗಲು ಇಂದ್ರಿಯ ಮನಸ್ಸುಗಳ ಸಹಾಯವಿಲ್ಲದೆ ಆತ್ಮನಿಗೆ ಸಮಸ್ತ ಮೂರ್ತಾಮೂರ್ತ ದ್ರವ್ಯಗಳ ಸಾಮಾನ್ಯಜ್ಞಾನವುಂಟಾಗುವುದು; ಅದು ಕೇವಲ ದರ್ಶನವು.

ವಸ್ತುವಿನ ಸಾಮಾನ್ಯ ಜ್ಞಾನಕ್ಕೆ ದರ್ಶನವೆನ್ನುವರು; ವಿಶೇಷ ಜ್ಞಾನಕ್ಕೇ ಜ್ಞಾನವೆಂಬ ಹೆಸರು. ಇದರಿಂದ ದರ್ಶನ ಜ್ಞಾನಗಳು ಜ್ಞಾನದ ಎರಡು ಪ್ರಕಾರಗಳೆಂದು ಹೇಳಬಹುದು.

ದರ್ಶನಾನಂತರದಲ್ಲಿ ಉಂಟಾಗುವ ಜ್ಞಾನವು ಉಪಯೋಗದ ಎರಡನೆಯ ಪ್ರಕಾರವು. ಮತಿಜ್ಞಾನ, ಶ್ರುತಜ್ಞಾನ, ಅವಧಿಜ್ಞಾನ, ಮನಃಪರ್ಯಯ ಜ್ಞಾನ, ಕೇವಲಜ್ಞಾನ ಎಂಬ ಐದು ಸದ್‌ಜ್ಞಾನಗಳೂ, ಕುಮತಿಜ್ಞಾನ, ಕುಶ್ರುತ ಜ್ಞಾನ, ವಿಭಂಗಾವಧಿ (ಕು- ಅವಧಿಜ್ಞಾನ) ಎಂಬ ೩ ಅಸದ್- ಜ್ಞಾನಗಳೂ ಸೇರಿದರೆ ಜ್ಞಾನೋಪಯೋಗವು ಎಂಟು ತೆರನಾಗಿದೆ.

ನಿಜವಾಗಿ ನೋಡಿದರೆ ಆತ್ಮನು ತನ್ನ ಎಲ್ಲ ಪ್ರದೇಶಗಳಲ್ಲಿ ಶುದ್ಧ ಜ್ಞಾನದಿಂದ ವ್ಯಾಪ್ತನಾಗಿದ್ದರೂ ಅನಾದಿಜ್ಞಾನಾವರಣಕರ್ಮದ ಪುದ್ಗಲಗಳಿಂದ

* ಕ್ಷಯ, ಉಪಶಮ. ಕ್ಷಯೋಪಶಮ ಎಂದು ತಿಳಿಯ ಬೇಕು

ಆತನ ಪ್ರದೇಶಗಳು ಆಚ್ಛಾದಿಸಲ್ಪಟ್ಟಿರುವುವು. ಆಯಾ ಜ್ಞಾನಾವರಣೀಯ ಕರ್ಮದ ಕ್ಷಯ, ಉಪಶಮ, ಕ್ಷಯೋಪಶಮಗಳುಂಟಾಗಲು ಆತ್ಮನಿಗೆ ಜ್ಞಾನವುಂಟಾಗುವುದು. ಕೇವಲ ಜ್ಞಾನವನ್ನುಳಿದು ಮೇಲೆ ಹೇಳಿದ ಎಲ್ಲ ಜ್ಞಾನಗಳಲ್ಲಿ ವಿಷಯಗಳು ಪೂರ್ಣವಾಗಿ ಗೋಚರವಾಗದೆ ಏಕದೇಶದಿಂದ ಗೋಚರವಾಗುವುವು, ಎಂದರೆ ವಸ್ತುಗಳು ಅನೇಕ ಧರ್ಮಯುಕ್ತವಾಗಿದ್ದರೂ ಒಂದೊಂದು ಧರ್ಮದಿಂದ ವಸ್ತುಜ್ಞಾನವಾಗುವುದು. ಈ ಏಕದೇಶಜ್ಞಾನಕ್ಕೆ ವಿಕಲಜ್ಞಾನವೆನ್ನುವರು. ಕೇವಲಜ್ಞಾನದಲ್ಲಿ ವಸ್ತುಗಳ ಎಲ್ಲ ಧರ್ಮಗಳು ಒಮ್ಮೆಲಿ ಗೋಚರವಾಗುವುದರಿಂದ ಅದಕ್ಕೆ ಸಕಲಜ್ಞಾನವೆನ್ನುವರು.

ಮತಿಜ್ಞಾನ- ಮತಿಜ್ಞಾನಾವರಣ ಕರ್ಮದ ಕ್ಷಯೋಪಶಮವಾಗಲು ಚಕ್ಷು ಮೊದಲಾದ ಇಂದ್ರಿಯಗಳೂ ಮನಸ್ಸೂ ಇವುಗಳ ಸಹಾಯದಿಂದ ಆತ್ಮನಿಗಾಗುವ ಮೂರ್ತ-ಅಮೂರ್ತ ಪದಾರ್ಥಗಳ ವಿಕಲಜ್ಞಾನವು ಮತಿಜ್ಞಾನವೆನಿಸುವುದು. ಇದು ಘಟ, ಇದು ಆಕಾಶ ಮೊದಲಾದ ಜ್ಞಾನವು.

ಶ್ರುತಜ್ಞಾನ- ಶ್ರುತಜ್ಞಾನಾವರಣ ಕರ್ಮದ ಕ್ಷಯೋಪಶಮವಾಗಲು ಚಕ್ಷುರಾದಿ ಇಂದ್ರಿಯಗಳು ಮನಸ್ಸು ಇವುಗಳ ಸಹಾಯದಿಂದ ಆತ್ಮನಿಗೆ ಆಗುವ ಮೂರ್ತ, ಅಮೂರ್ತ ಪದಾರ್ಥಗಳ ವಿಕಲಜ್ಞಾನವು ಶ್ರುತಜ್ಞಾನವು. ಶ್ರುತಜ್ಞಾನಕ್ಕೆ ಮತಿಜ್ಞಾನವು ಕಾರಣವು ಎಂದರೆ ಮೊದಲು ಮತಿಜ್ಞಾನವು ಬಳಿಕ ಶ್ರುತಜ್ಞಾನವು ಮತಿಜ್ಞಾನದಲ್ಲಿ ಸಮಾವೇಶವಾಗುವ ಪ್ರತ್ಯಕ್ಷ, ಅನುಮಾನ, ಉಪಮಾನ, ಶಬ್ದ ಇವುಗಳಲ್ಲಿ ಯಾವುದೊಂದು ಜ್ಞಾನವಾದ ಬಳಿಕ ಉಂಟಾಗುವ ಜ್ಞಾನವು ಶ್ರುತಜ್ಞಾನವು. ಉದಾ:- ಈ ದಿನ ಪಂಚಕಲ್ಯಾಣೋತ್ಸವವುಂಟೆಂದು ಒಬ್ಬನು ನಮಗೆ ಹೇಳಲು ಆ ಉತ್ಸವ ದರ್ಶನದಿಂದ ಪುಣ್ಯಸಂಪಾದನ ಮಾಡಬೇಕೆಂದೆನಿಸುವುದು. ಇಲ್ಲಿ ಪಂಚಕಲ್ಯಾಣೋತ್ಸವವುಂಟೆಂಬ ಶಬ್ದಗಳನ್ನು ಕೇಳಿದ ತರುವಾಯ ನಮಗೆ ಆಗುವ ಅರ್ಥಜ್ಞಾನವು ಶಬ್ದಶ್ರವಣಾನಂತರ ಉಂಟಾದುದರಿಂದ ಮತಿಜ್ಞಾನವು, ಪುಣ್ಯಸಂಪಾದನ ಮಾಡಬೇಕೆಂಬ ಜ್ಞಾನವು ಶ್ರುತಜ್ಞಾನವು. ಶ್ರುತಜ್ಞಾನದಲ್ಲಿ ದ್ರವ್ಯಶ್ರುತ, ಭಾವಶ್ರುತ, ಇಲ್ಲವೆ ಅಂಗಬಾಹ್ಯ ಅಂಗಪ್ರವಿಷ್ಟ ಎಂಬ ಎರಡು ಭೇದಗಳು. ಅಂಗಪ್ರವಿಷ್ಟದಲ್ಲಿ ಆಚಾರಾಂಗ ಮೊದಲಾದ ೧೨ ಅಂಗಗಳುಂಟು. ಉತ್ಪಾದ ಪೂರ್ವ ಮೊದಲಾದ ೧೪ ಪೂರ್ವಗಳು ಶ್ರುತಜ್ಞಾನದಲ್ಲಿ ಸೇರುವುವು. ಅಂಗಬಾಹ್ಯಗಳು ಹಲವುಂಟು.

ಅವಧಿಜ್ಞಾನ- ಅವಧಿಜ್ಞಾನಾವರಣೀಯ ಕರ್ಮದ ಕ್ಷಯೋಪಶಮದಿಂದ ಆತ್ಮನಿಗೆ ಉಂಟಾಗುವ ಮೂರ್ತದ್ರವ್ಯಗಳ ವಿಶೇಷ ರೂಪವಾದ ವಿಕಲಜ್ಞಾನವು ಅವಧಿಜ್ಞಾನವು. ಈ ಜ್ಞಾನದಲ್ಲಿ ಭೂತಭವಿಷ್ಯದ್ವರ್ತಮಾನರೂಪವಾದ ಮೂರೂ ಕಾಲಗಳ ಪದಾರ್ಥಗಳು ಗೋಚರವಾಗುವುವು.

ಮನಃಪರ್ಯಯ ಜ್ಞಾನ- ಮನಃಪರ್ಯಯ ಜ್ಞಾನಾವರಣೀಯ ಕರ್ಮದ ಕ್ಷಯೋಪಶಮವಾಗಲು ಪರರ ಮನಸ್ಸಿನೊಳಗಿನ ಪದಾರ್ಥಗಳ ವಿಶೇಷ ರೂಪವಾದ ವಿಕಲಜ್ಞಾನವು ಮನಃಪರ್ಯಯ ಜ್ಞಾನವು.

ಕೇವಲಜ್ಞಾನ- ಸಂಪೂರ್ಣ ಜ್ಞಾನಾವರಣೀಯ ಕರ್ಮದ ಅತ್ಯಂತ ಕ್ಷಯವಾಗಲು ಆತ್ಮನಿಗೆ ಉಂಟಾಗುವ ಮೂರ್ತಾಮೂರ್ತ ಪದಾರ್ಥಗಳ ವಿಶೇಷ ರೂಪವಾದ ಸಕಲ ಜ್ಞಾನವು ಕೇವಲ ಜ್ಞಾನವು. ಈ ಜ್ಞಾನವು ಆತ್ಮನ ಶುದ್ಧ ಸ್ವಭಾವವು.

ಮೇಲಿನ ಐದು ಜ್ಞಾನಗಳು ಸಮ್ಯಗ್- ಜ್ಞಾನಗಳು. ಮಿಥ್ಯಾದರ್ಶನದ ಉದಯದಿಂದ ಯುಕ್ತವಾದ ಮತಿಜ್ಞಾನ, ಶ್ರುತಜ್ಞಾನ, ಅವಧಿಜ್ಞಾನಗಳಿಗೆ ಕ್ರಮದಿಂದ ಕುಮತಿಜ್ಞಾನ, ಕುಶ್ರುತಜ್ಞಾನ, ಕುಅವಧಿಜ್ಞಾನ (ವಿಭಂಗಾವಧಿ) ಎಂದೆನ್ನುವರು.

ಆತ್ಮನಿಗೂ ಜ್ಞಾನಕ್ಕೂ ಭೇದವಿಲ್ಲ

ಣಹಿ ಇಂದ್ರಿಯಾಣಿ ಜೀವಾ। ಕಾಯಾಪುಣಛಪ್ಪಯಾರಪಣ್ಣತ್ತಾ।
ಜಂ ಹವದಿ ತೇಸುಣಾಣಂ। ಜೀವೋತ್ತಿಯ ತಂ ಪರೂವಿಂತಿ॥

ಪಂಚಾಸ್ತಿಕಾಯ ಸಮಯಸಾರ. ೧೨೧.

— ಇಂದ್ರಿಯಗಳೂ, ಆರು ತರದ ಶರೀರಗಳೂ (ಪುದ್ಗಲ ಪರ್ಯಾಯಗಳಾದುದರಿಂದ) ಜೀವಗಳಲ್ಲ. ಆದರೆ ಆ ಇಂದ್ರಿಯ, ಶರೀರಗಳಲ್ಲಿ (ಸ್ವಪರದ್ರವ್ಯ ವಿವೇಕರೂಪವಾಗಿ) ಪ್ರಕಟವಾಗುವ ಜ್ಞಾನವೇ ಜೀವವು.

ಜೀವವು ದ್ರವ್ಯರೂಪವು; ಜ್ಞಾನವು ಗುಣವು. ಇದರಿಂದ ದ್ರವ್ಯಗುಣಗಳಿಗೆ ಜ್ಞಾನಜೀವಗಳಿಗೆ- ಭೇದವಿರಬೇಕೆಂಬುದು ಸಹಜವು. ಆದರೆ ಹಾಗೆ ಹೇಳಕೂಡದು. ಗುಣ ದ್ರವ್ಯಗಳು ಕಥಂಚಿತ್ ಭಿನ್ನವಾಗಿಯೂ, ಕಥಂಚಿತ್ ಅಭಿನ್ನವಾಗಿಯೂ ಇರುವುವು. ನಿಶ್ಚಯನಯಾಪೇಕ್ಷೆಯಿಂದ ಜೀವದ್ರವ್ಯವೂ ಜ್ಞಾನವೂ ಕಥಂಚಿತ್ ಅಭಿನ್ನವಾಗಿರುವುದರಿಂದ ಜೀವ ಜ್ಞಾನರೂಪವು. ಜೀವವು ದ್ರವ್ಯವಾದುದರಿಂದ ಅದು ಅನೇಕಾಂತವು (ಅನೇಕ ಧರ್ಮಯುಕ್ತವು)- ಎಂದರೆ ಅನೇಕವಿಧ ಜ್ಞಾನಾತ್ಮಕವು ಆಗಿರುವುದು.

**ಜೀವಭೇದ.**

ಜೀವರಲ್ಲಿ ಸಂಸಾರಿ, ಮುಕ್ತ (ಸಿದ್ಧ) ಎಂಬ ಎರಡು ಭೇದಗಳು. ಕರ್ಮಸಹಿತರಾಗಿ, ಕರ್ಮವಶರಾಗಿ, ನಾನಾಯೋನಿಗಳಲ್ಲಿ ಜನ್ಮವನ್ನು ತಾಳುತ್ತ ಸಂಸಾರಾಟವಿಯಲ್ಲಿ ಅಲೆಯುವವರು ಸಂಸಾರಿಗಳು; ಸಂಪೂರ್ಣವಾಗಿ ಕರ್ಮ ನಾಶ ಮಾಡಿ ಸಂಸಾರದಿಂದ ಬಿಡುಗಡೆ ಹೊಂದಿದವರು ಮುಕ್ತರು.

ಸಂಸಾರಿ ಜೀವರಲ್ಲಿ ಸಮನಸ್ಕ ಅಮನಸ್ಕ ಎಂಬ ಎರಡು ವರ್ಗಗಳು. ಮನಸ್ಸುಳ್ಳ ಜೀವರು ಸಮನಸ್ಕರು; ಇವರಿಗೆ ಸಂಜ್ಞಿಗಳೆಂಬ ಹೆಸರೂ ಉಂಟು ತಾಹಿತಜ್ಞಾನ, ಗುಣದೋಷವಿಚಾರ, ಶಿಕ್ಷಣಕ್ರಿಯೆ ಮೊದಲಾದುವನ್ನು ಗ್ರಹಿಸುವ ಶಕ್ತಿ ಇವು ಉಳ್ಳ ಜೀವಗಳಿಗೆ ಸಂಜ್ಞಿಗಳೆನ್ನುವರು ಮನಸ್ಸಿಲ್ಲದ ಜೀವಗಳು ಅಮನಸ್ಕಗಳು. ಸಾಂಸಾರಿ ಜೀವಗಳಲ್ಲಿ ಇನ್ನೊಂದು ಬಗೆಯಿಂದ ತ್ರಸ ಸ್ಥಾವರ ಎಂದು ಎರಡು ವರ್ಗಗಳುಂಟು ದ್ವೀಂದ್ರಿಯ, ತ್ರೀಂದ್ರಿಯ, ಚತುರಿಂದ್ರಿಯ ಪಂಚೇಂದ್ರಿಯ ಜೀವಗಳು ತ್ರಸಗಳು. ಏಕೇಂದ್ರಿಯ ಜೀವಗಳು ಸ್ಥಾವರಗಳು. ಪೃಥ್ವೀಕಾಯ, ಅಪ್‌ಕಾಯ, ತೇಜಸ್ಕಾಯ, ವಾಯುಕಾಯ, ವನಸ್ಪತಿ ಕಾಯ ಎಂದು ಸ್ಥಾವರಗಳಲ್ಲಿ ಐದು ಪ್ರಕಾರಗಳು. ಜೀವವಿಪಾಕವುಳ್ಳ ಸ್ಥಾವರ ಎಂಬ ಕರ್ಮದ ಉದಯವಾಗಲು ಪೃಥಿವ್ಯಾದಿಗಳಲ್ಲಿ ಸ್ಥಾವರ ಜೀವಗಳು ಜನ್ಮತಾಳುವುವು. ಜೀವವಿಪಾಕವುಳ್ಳ ತ್ರಸವೆಂಬ ಕರ್ಮದ ಉದಯವಾಗಲು ದ್ವೀಂದ್ರಿಯಾದಿ ಶರೀರಗಳಲ್ಲಿ ಜನ್ಮ ತಾಳುವುವು ತ್ರಸಜೀವಗಳು. (ತ್ರಸ=ಜಂಗಮ, ತ್ರಸ್– ಕಂಪನೇ.) ಸ್ಥಾವರ ಜಂಗಮ ಜೀವಗಳಲ್ಲಿ ಮತ್ತೆ ಪರ್ಯಾಪ್ತ ಅಪರ್ಯಾಪ್ತ ಎಂದು ಎರಡು ತೆರಗಳು. ಆಹಾರ, ಶರೀರ, ಇಂದ್ರಿಯ, ಶ್ವಾಸೋಚ್ಛ್ವಾಸ, ಭಾಷೆ, ಮನಸ್ಸು ಇವು ಪರ್ಯಾಪ್ತಿಗಳು. ಈ ಆರೂ ಪರ್ಯಾಪ್ತಿಗಳು ಪೂರ್ಣತೆ ಹೊಂದಿದ ಜೀವಗಳು ಪರ್ಯಾಪ್ತಗಳು. ಅಪೂರ್ಣವಾಗಿದ್ದ ಜೀವಗಳು ಅಪರ್ಯಾಪ್ತಗಳು.

ಸ್ಥಾವರ ಜೀವಗಳಿಗೆ ಸ್ಪರ್ಶೇಂದ್ರಿಯವೊಂದೇ ಇರುವುದರಿಂದ ಅವು ಏಕೇಂದ್ರಿಯಗಳು. ಉದಾ:– ಪೃಥ್ವಿ, ಅಪ್ಪು, ತೇಜಸ್ಸು, ವಾಯು, ವನಸ್ಪತಿ. ಪ್ರಾಣಿಗಳಿಗಿರುವ ಹತ್ತು ಪ್ರಾಣಗಳಲ್ಲಿ ಸ್ಪರ್ಶೇಂದ್ರಿಯ ಪ್ರಾಣ, ಕಾಯಬಲಪ್ರಾಣ, ಶ್ವಾಸೋಚ್ಛ್ವಾಸ ಪ್ರಾಣ, ಆಯುಃಪ್ರಾಣ ಎಂಬ ನಾಲ್ಕು ಪ್ರಾಣಗಳು ಮಾತ್ರ ಅವುಗಳಿಗಿರುವುವು. ತ್ರಸ ಜೀವಗಳು ದ್ವೀಂದ್ರಿಯ ಮೊದಲಾದುವು. ಸ್ಪರ್ಶ ರಸನೇಂದ್ರಿಯಗಳೆರಡೇ ಉಳ್ಳುವು. ದ್ವೀಂದ್ರಿಯಗಳು. ಉದಾ:– ಶಂಬೂಕ, ಶಂಖ, ಶುಕ್ತಿ, ಕಪರ್ದಕ, ಕೃಮಿ ಮುಂ. ಸ್ಪರ್ಶರಸನಾಘ್ರಾಣಗಳುಳ್ಳುವು ತ್ರೀಂದ್ರಿಯಗಳು. ಉದಾ:– ಇರುವೆ, ತಿಗುಣೆ, ಚೇಳು, ಇಂದ್ರಗೋಪ, ಕೂರಿ ಹೇನು ಮುಂ. ಸ್ಪರ್ಶನ ರಸನಾ ಘ್ರಾಣ ನೇತ್ರಗಳುಳ್ಳುವು ಚತುರಿಂದ್ರಿಯಗಳು ಉದಾ:– ಭ್ರಮರ, ಮತ್ಸ್ಯ, ಪತಂಗ, ಮಕ್ಷಿಕ ಮುಂ. ಸ್ಪರ್ಶನರಸನ ಘ್ರಾಣ ಚಕ್ಷುಃಶ್ರೋತ್ರಗಳುಳ್ಳುವು ಪಂಚೇಂದ್ರಿಯಗಳು. ಉದಾ– ಪಶು, ದೇವ, ನಾರಕ, ಮನುಷ್ಯ.

ಪಂಚೇಂದ್ರಿಯಗಳಲ್ಲಿ ದ್ರವ್ಯೇಂದ್ರಿಯ, ಭಾವೇಂದ್ರಿಯ ಎಂದು ಎರಡು ಬಗೆಗಳು. ದ್ರವ್ಯೇಂದ್ರಿಯಗಳು ನಿರ್ವೃತ್ತಿ, ಉಪಕರಣ ಎಂದು ಎರಡು ಬಗೆಯಾ

ಗಿವೆ. ಕರ್ಮ ನಿಮಿತ್ತದಿಂದ ವಿಶಿಷ್ಟ ಪ್ರಕಾರದ ರಚನೆಯಾಗುವುದು ನಿರ್ವೃತ್ತಿಯು. ನಿರ್ವೃತ್ತಿಗೆ ಸಹಾಯ ಮಾಡುವುದು ಉಪಕರಣವು. ಲಬ್ಧಿ ಉಪಯೋಗ ಇವೆರಡು ಭಾವೇಂದ್ರಿಯಗಳು. ಆತ್ಮನನ್ನು ದ್ರವ್ಯೇಂದ್ರಿಯ ರಚನೆಯಲ್ಲಿ ತೊಡಗಿಸುವುದೂ, ಜ್ಞಾನಾವರಣೀಯಕರ್ಮದ ಕ್ಷಯೋಪಶಮರೂಪವೂ ಆದ ವಿಶಿಷ್ಟ ಶಕ್ತಿಯು ಲಬ್ಧಿಯು. ಈ ಕ್ಷಯೋಪಶಮ ಲಬ್ಧಿಯಿಂದ ಆತ್ಮನು ವಿಷಯಾಭಿಮುಖನಾಗಲು ಪ್ರಾಪ್ತವಾಗುವ ಪರಿಣಾಮವು ಉಪಯೋಗವೆನಿಸುವುದು

ಸ್ಪರ್ಶ ರಸ ಗಂಧವರ್ಣ ಶಬ್ದಗಳು ಸ್ಪರ್ಶನಾದಿ ಪಂಚೇಂದ್ರಿಯಗಳ ವಿಷಯಗಳು. ಶ್ರುತಜ್ಞಾನಗೋಚರ ವಿಷಯವು ಮನಸ್ಸಿನ ವಿಷಯವು.

ಜೀವನು ಶರೀರದಿಂದ ಶರೀರಾಂತರಕ್ಕೆ ಗಮನ ಮಾಡುವಲ್ಲಿ ಕಾರ್ಮಣ ಯೋಗವು ಕಾರಣವು. ಶರೀರಾಂತರ ಗಮನಕ್ಕೆ ವಿಗ್ರಹಗತಿಯೆನ್ನುವರು. ಮರಣೋತ್ತರದಲ್ಲಿ ಜೀವನು ಆಕಾಶದ ಪಂಕ್ತಿಯನ್ನನುಸರಿಸಿ (ಅನುಶ್ರೇಣಿ) ಗಮಿಸುವನು. ವಕ್ರವಾಗಿ ಗಮಿಸುವುದಿಲ್ಲ. ವಿಗ್ರಹಗತಿಯಲ್ಲಿ ಜೀವನು ಒಂದು, ಎರಡು, ಮೂರು ಸಮಯಗಳ ವರೆಗೆ ಅನಾಹಾರಕನಾಗಿರುವನು; ಎಂದರೆ ನೋಕರ್ಮವರ್ಗಣೆಯ ಆಹಾರವನ್ನು ಹೊಂದುವುದಿಲ್ಲ (ನೋಕರ್ಮ= ಶರೀರವಾಙ್ಮನಸ್ಸುಗಳು; ವರ್ಗಣಾ= ಶರೀರ ವಾಙ್ಮನೋರೂಪವಾಗಿ ಪರಿಣಮಿಸುವ ಪುದ್ಗಲ ಪರಮಾಣು.) ಔದಾರಿಕ, ವೈಕ್ರಿಯಕ, ಆಹಾರಕ ಎಂಬ ಮೂರು ತರದ ಶರೀರಗಳು, ಆರು ಪರ್ಯಾಪ್ತಿಗಳು ಇವುಗಳ ಯೋಗ್ಯ ಪುದ್ಗಲವರ್ಗಣೆಗಳನ್ನು ಗ್ರಹಿಸುವುದು ಆಹಾರವೆನಿಸುವುದು. ಈ ಆಹಾರವನ್ನು ಹೊಂದದಿರುವ ವರೆಗೆ (ಹೆಚ್ಚೆಂದರೆ ೩ ಸಮಯಗಳ ವರೆಗೆ) ಜೀವನು ಅನಾಹಾರಕನಾಗಿರುವನು. ನಾಲ್ಕನೆಯ ಸಮಯದಲ್ಲಿ ಶರೀರ, ಪರ್ಯಾಪ್ತಿಗಳನ್ನು ಹೊಂದಿ ಆಹಾರಕನಾಗುವನು. ಜನ್ಮವು (ನವಶರೀರ ಧಾರಣ) ೧ ಸಮ್ಮೂರ್ಛನ ಜನ್ಮ, ೨ ಗರ್ಭ ಜನ್ಮ ೩ ಉಪಪಾದ ಜನ್ಮ ಎಂದು ತ್ರಿವಿಧವಾಗಿದೆ. ದ್ರವ್ಯಕ್ಷೇತ್ರಕಾಲಭಾವ ವಿಶೇಷಗಳಿಂದ ತಾನು ಸ್ವೀಕರಿಸಬಹುದಾದ, ಮೂಲೋಕದಲ್ಲಿ ಸುತ್ತಲು ತುಂಬಿರುವ ಪುದ್ಗಲ ಪರಮಾಣುಗಳಿಂದ ಮಾತಾಪಿತೃಗಳ ರಜೋವೀರ್ಯಗಳಿಲ್ಲದೆ ಶರೀರ ರಚನೆಯಾಗುವುದು ಸಮ್ಮೂರ್ಛನ ಜನ್ಮವು. ಮಾತಾಪಿತೃಗಳ ಶುಕ್ರ ಶೋಣಿತಗಳಿಂದ ಶರೀರ ರಚನೆಯಾಗುವುದು ಗರ್ಭ ಜನ್ಮವು. ಮಾತಾಪಿತೃಗಳ ರೇತಸ್ಸಿಲ್ಲದೆ ದೇವರೂ ನಾರಕರೂ ಜನ್ಮ ಹೊಂದುವ ಬಗೆಯು ಉಪಪಾದ ಜನ್ಮವು. ಈ ಸಮ್ಮೂರ್ಛನ ಮೊದಲಾದ ಜನ್ಮಗಳಿಗೆ ಸಚಿತ್ತ, ಅಚಿತ್ತ, ಶೀತ, ಉಷ್ಣ, ಸಂವೃತ, ವಿವೃತ, ಸಚಿತ್ತಶೀತ, ಶೀತೋಷ್ಣ, ಸಂವೃತವಿವೃತ, ಎಂಬೀ

ಒಂಬತ್ತು ಉತ್ಪತ್ತಿಸ್ಥಾನಗಳು. ಜರಾಯುಜ, ಅಂಡಜ, ಪೋತ ಎಂಬ ಮೂರು ತರದ ಜೀವಿಗಳಿಗೆ ಗರ್ಭದಲ್ಲಿ ಜನ್ಮವಾಗುವುದು. ಜರಾಯು (ಗರ್ಭಕೋಶ)ವೂ ಅಂಡವೂ ಇಲ್ಲದೆ ಮಾತೃಗರ್ಭದಿಂದ ಹೊರಗೆ ಬಂದ ಕೂಡಲೆ ಚಲನವಲನ ಹೊಂದುವ ಜೀವಿಗಳು ಪೋತಗಳೆನಿಸುವುವು. ದೇವನಾರಕರಿಗೆ ಉಪಪಾದ ಜನ್ಮವು; ಉಳಿದಜೀವರಿಗೆ ಸಮ್ಮೂರ್ಛನ ಜನ್ಮವು.

ಔದಾರಿಕ, ವೈಕ್ರಿಯಕ, ಆಹಾರಕ, ತೈಜಸ, ಕಾರ್ಮಣ ಎಂಬ ಆರು ತರದ ಶರೀರಗಳುಂಟು. ಇಂದ್ರಿಯ ಗೋಚರವಾಗುವ ಶರೀರವು ಔದಾರಿಕವು. ಸ್ಥೂಲ ಸೂಕ್ಷ್ಮ ಗುರು ಲಘು ಮೊದಲಾದ ವಿಕಾರಗಳನ್ನು ಹೊಂದುವ ಯೋಗ್ಯತೆಯುಳ್ಳ ಶರೀರವು ವೈಕ್ರಿಯಕವು. ಸೂಕ್ಷ್ಮ ಪದಾರ್ಥಗಳ ನಿರ್ಣಯ ಮಾಡಿಕೊಳ್ಳುವುದಕ್ಕಾಗಿ ಇಲ್ಲವೆ ಸಂಯಮ ಪಾಲನಕ್ಕಾಗಿ ಪ್ರಮತ್ತ ಗುಣಸ್ಥಾನವಲ್ಲಿರುವ ಮುನಿಗಳು ಪಡೆಯುವ ಶರೀರವು ಆಹಾರಕವು. ತೇಜಸ್ಸು ಹುಟ್ಟುವ ಯೋಗ್ಯತೆಯುಳ್ಳ ಶರೀರವು ತೈಜಸವು ಜ್ಞಾನಾವರಣಾದಿ ಎಂಟು ತರದ ಕರ್ಮಗಳ ಸಮೂಹರೂಪವಾದ ಶರೀರವು ಕಾರ್ಮಣ ಶರೀರವು. ಔದಾರಿಕ ಶರೀರದ ಅಸಂಖ್ಯ ಗುಣ (ಪಟ್ಟು) ಪರಮಾಣುಗಳು ವೈಕ್ರಿಯಕ ಶರೀರದಲ್ಲಿ, ವೈಕ್ರಿಯಕದ ಅಸಂಖ್ಯಗುಣ ಪರಮಾಣುಗಳು ಆಹಾರಕದಲ್ಲಿ ಈ ಮೇರೆಗೆ ಉತ್ತರೋತ್ತರ ಅಧಿಕಾಧಿಕ ಪರಮಾಣುಗಳು ಮುಂದಿನ ಶರೀರಗಳಲ್ಲಿರುವುವು.

ತೈಜಸ ಕಾರ್ಮಣ ಶರೀರಗಳು, ಬೇರೆ ಮೂರ್ತ ಪುದ್ಗಲಾದಿಗಳಿಂದ ತಡೆಯಲ್ಪಡುವುದಿಲ್ಲ. ಮತ್ತು ಈ ಎರಡು ತರದ ಶರೀರಗಳಿಗೆ ಆತ್ಮನ ಸಂಬಂಧವು ಅನಾದಿಕಾಲದಿಂದಿರುವುದು. ಈ ಎರಡು ಶರೀರಗಳು ಸಂಸಾರಿ ಜೀವರಿಗೆಲ್ಲ ಇರುವುವು. ಜೀವನಿಗೆ ಏಕಕಾಲದಲ್ಲಿ ಎರಡು ಶರೀರಗಳಿದ್ದರೆ ಅವು ತೈಜಸ ಕಾರ್ಮಣಗಳೇ, ಮೂರು ಇದ್ದರೆ ಔದಾರಿಕ ತೈಜಸ ಕಾರ್ಮಣಗಳಾಗಲಿ, ವೈಕ್ರಿಯಕ ತೈಜಸ ಕಾರ್ಮಣಗಳಾಗಲಿ ಇರಬಹುದು. ಆದರೆ ಈ ಮೂರು ಶರೀರಗಳು ದೇವನರಕಗತಿಗಳಲ್ಲಿಯೇ ಪ್ರಾಪ್ತವಾಗುವುವು ಏಕಕಾಲದಲ್ಲಿ ನಾಲ್ಕು ಶರೀರಗಳಿದ್ದರೆ ಔದಾರಿಕ, ಆಹಾರಕ, ತೈಜಸ, ಕಾರ್ಮಣಗಳು ಇಲ್ಲವೆ ಔದಾರಿಕ ವೈಕ್ರಿಯಕ ತೈಜಸ, ಕಾರ್ಮಣಗಳು ಇರುವುವು. ಕಾರ್ಮಣ ಶರೀರಕ್ಕೆ ಉಪಭೋಗವಿಲ್ಲ. ಉಪಭೋಗ– ಇಂದ್ರಿಯಗಳಿಂದ ಶಬ್ದಾದಿ ವಿಷಯಗಳ ಸುಖದುಃಖಾನುಭವವು.

ಔದಾರಿಕ ಶರೀರವು ಗರ್ಭಜನ್ಮ, ಸಮ್ಮೂರ್ಛನ ಜನ್ಮಗಳಿಂದ ಉಂಟಾಗುವುದು. ವೈಕ್ರಿಯಕವು ಉಪಪಾದ ಜನ್ಮದಿಂದ ಬರುವುದು. ತಪೋವಿಶೇಷ, ಋದ್ಧಿ ಪ್ರಾಪ್ತಿಗಳಿಂದ ವೈಕ್ರಿಯಕ ತೈಜಸ ಶರೀರಗಳುಂಟಾಗುವುವು. ಆಹಾರಕ

ಶರೀರವ ಶುಭಕಾರ್ಯೋತ್ಪಾದಕವು; ಅದು ವಿಶುದ್ಧವಾದುದು ಎಂದರೆ, ಅದು ಶುದ್ಧ ಕರ್ಮದ ಕಾರ್ಯವು. ಅದಕ್ಕೆ ವ್ಯಾಘಾತಗಳಿಲ್ಲ. ಅದು ಪ್ರಮತ್ತಸಂಯತ ಮುನಿಗಳಿಗೆ ಮಾತ್ರ ಪ್ರಾಪ್ತವಾಗುವುದು.

ನಾರಕ ಸಮ್ಮೂರ್ಚ್ಛನ ಜೀವಗಳು ನಪುಂಸಕಗಳು; ಆದರೆ ನಾಲ್ಕು ತರದ ದೇವತೆಗಳು ನಪುಂಸಕರಲ್ಲ. ದೇವತೆಗಳಲ್ಲಿ ಪುರುಷವೇದ, ಸ್ತ್ರೀವೇದಗಳೆಂಬ ಎರಡೇ ಲಿಂಗಗಳು. ನಾರಕ, ದೇವ, ಸಮ್ಮೂರ್ಚ್ಛನ ಜೀವಗಳನ್ನುಳಿದು ಗರ್ಭಜ, ತಿರ್ಯಂಚ, ಮನುಷ್ಯ ಇವರು ತ್ರಿಲಿಂಗಗಳಾಗಿರುವರು. ದೇವರು, ನಾರಕರು ಚರಮೋತ್ತಮ ದೇಹಿಗಳು (=ತದ್ಭವ ಮೋಕ್ಷಗಾಮಿಗಳಾದ ತೀರ್ಥಂಕರಾದಿಗಳು) ಅಸಂಖ್ಯಾತವರ್ಷ ಆಯುಷ್ಯವುಳ್ಳ ಭೋಗ ಭೂಮಿಜ ದೇವರು ಇವರಿಗೆ ಆಯುಷ್ಯವು ತೀರಿದ ಹೊರತು ಯಾವ ಕಾರಣದಿಂದಲೂ ಮರಣವಿಲ್ಲ. ವಿಷ ಶಸ್ತ್ರಾದಿಗಳಿಂದ ಅವರಿಗೆ ಅಪಮೃತ್ಯುವಿಲ್ಲ.

## ತ್ರಿಲೋಕ ಸಾಮಾನ್ಯ ಸ್ವರೂಪ.

ಎತ್ತೆತ್ತ ನೋಡಿದರೂ ಅನಂತವೂ ಅಪಾರವೂ ಆದ ಆಕಾಶದ ನಟ್ಟನಡುವೆ ತ್ರಿಲೋಕಗಳಿರುವುವು ಈ ತ್ರಿಲೋಕಗಳು ೨೦ಸಾವಿರ ಯೋಜನ ದಪ್ಪ* ವಾದ ಘನೋದಧಿ ಘನಾನಿಲ, ತನುವಾತಗಳೆಂಬ ಮೂರು ವಾತವಲಯಗಳಿಂದ ವೇಷ್ಟಿತವಾಗಿವೆ. ಈ ಲೋಕಗಳು ಅಕೃತ್ರಿಮಗಳೂ ನಿತ್ಯಗಳೂ ಅಲ್ಲದೆ ಜೀವ, ಅಜೀವ, ಧರ್ಮ, ಅಧರ್ಮ, ಆಕಾಶ, ಕಾಲಗಳೆಂಬ ಷಡ್ ದ್ರವ್ಯಗಳಿಂದ ತುಂಬಿವೆ. ಈ ಲೋಕಗಳನ್ನೊಳಗೊಂಡ ಆಕಾಶದ ಆಚೆಗಿರುವುದೆಲ್ಲ ಅಲೋಕಾಕಾಶವು.

ಈ ತ್ರಿಲೋಕವು ಆದಿಯಿಂದ ತುದಿಯ ವರೆಗೆ ದಕ್ಷಿಣೋತ್ತರ ೧೪ ರಜ್ಜು + ಉದ್ದವಾಗಿದೆ. ಪೂರ್ವ ಪಶ್ಚಿಮ ಅಗಲಳತೆಯು ಅಡಿಯಲ್ಲಿ ೭ ರಜ್ಜು. ಈ ಅಗಲವು ಮೇಲೆ ಮೇಲೆ ಹೋದಂತೆ ಕಡಿಮೆಯಾಗುತ್ತ ೭ ರಜ್ಜು ಎತ್ತರದಲ್ಲಿ ಒಂದು ರಜ್ಜು ಮಾತ್ರ ಇರುವುದು. ಮತ್ತೆ ಅಗಲವು ಹೆಚ್ಚುತ್ತ ೧೧ರಜ್ಜು ಎತ್ತರದಲ್ಲಿ ೫ ರಜ್ಜು ಇರುವುದು. ಮತ್ತೆ ಅಗಲವು ಕಡಿಮೆಯಾಗುತ್ತ ತುದಿಯಲ್ಲಿ ಒಂದೇ ರಜ್ಜು ಇರುವುದು.

---

* ಮೇಲೆ ಹೋದಂತೆ ದಪ್ಪವು ಕಡಿಮೆಯಾಗುತ್ತ ಹೋಗುವುದು.

\+ ಒಂದು ಸಮಯ ಕಾಲದಲ್ಲಿ ಅಸಂಖ್ಯಾತಯೋಜನ ಹೋಗುವ ಸುರವಿಮಾನವು ಹಗಲಿರುಳು ಒಂದೇ ಸವನೆ ಅಸಂಖ್ಯಾತಾಬ್ದ ಹೋಗಲು ಎಷ್ಟು ದಾರಿಯಾಗುವುದೋ ಅದು ಒಂದು ರಜ್ಜುವೆನಿಸುವುದು

* ಪರಮಾಣುವು ಲೋಕಾಕಾಶದಲ್ಲಿ ಅರ್ಧಕಾಲಾಣುವನ್ನು ಮಂದಗತಿಯಿಂದ ದಾಟುವ ಕಾಲಾವಧಿಗೆ ಸಮಯವೆಂದು ಹೆಸರು.

ಮರದೊಳಗೆ ನಡುವೆ ಕೆಚ್ಚು ಇರುವಂತೆ ಈ ಲೋಕದ ನಡುವೆ ಅಡಿಯಿಂದ ತುದಿಯವರೆಗೆ ತ್ರಸನಾಳಿ ಎಂಬ ಭಾಗವುಂಟು. ಅದು ಒಂದು ರಜ್ಜು ಅಗಲವಾಗಿಯೂ ಚತುರಸ್ರವಾಗಿಯೂ ೧೪ ರಜ್ಜು ಉದ್ದವಾಗಿಯೂ ಇದೆ. ತ್ರಸವೆಂದರೆ ಚರಿಸುವ ಜೀವಗಳು. ತ್ರಸಗಳೇ ಅಲ್ಲಿ ವಾಸಿಸುವುದರಿಂದ ಆ ಭಾಗಕ್ಕೆ ತ್ರಸನಾಳಿಯೆನ್ನುವರು. ತ್ರಸನಾಳಿಯ ಹೊರಗೆ ಸ್ಥಾವರಗಳೇ ಜೀವಿಸುವುವು.

ಅಧೋಲೋಕವು ಏಳು ರಜ್ಜು ಆಯವುಳ್ಳುದೂ ತ್ರಿಲೋಕಗಳೊಳಗೆ ಕೆಳಗಿನದೂ, ನಾರಕಜೀವರಿಗೆ ಆಧಾರವಾದುದೂ ಆಗಿದೆ. ತ್ರಿಲೋಕಗಳೊಳಗೆ ನಡುವಿನದೂ, ದ್ವೀಪಸಮುದ್ರಗಳಿಗೆ ಆಧಾರವಾದುದೂ, ಮಹಾ ಮಂದರದ ಬುಡದಿಂದ ಅಗ್ರಭಾಗದವರೆಗೆ ೧ ಲಕ್ಷ ಯೋಜನೋತ್ಸೇಧವುಳ್ಳುದೂ ಮಧ್ಯಮಲೋಕವು ಮೂಲೋಕಗಳಲ್ಲಿ ಮೇಲಿನದೂ, ಸ್ವರ್ಗಾದಿಗಳಿಗೆ ಆಧಾರವಾದುದೂ ಮಂದರ ಚೂಳಿಕಾ ಮೂಲದಿಂದಾರಂಭಿಸಿ ಸ್ವಲ್ಪ ಕಡಿಮೆ ಏಳು ರಜ್ಜು ಉದ್ದವಾದುದೂ ಊರ್ಧ್ವಲೋಕವು

ತ್ರಿಲೋಕದ ಅಡಿಯು ಜಕ್ಕಳದಂತೆ ಇಲ್ಲದೆ ವೇತ್ರಾಸನದಂತೆ ನಡುವಣ ಭಾಗವು ಝಲ್ಲರಿ(ಜರಡಿ)ಯಂತೆ ಮೇಲಣಭಾಗವು ಮೃದಂಗದಂತೆ ಇರುವುದು.

ಸ್ಫುಟವೈಶಾಖಸ್ಥಾನಂ ಕಟಿ ।
ತಟವಿನ್ಯಸ್ತಹಸ್ತಯುಗನಾಗಿ ಮಹಾ ।
ಲಟಹಂ ಬೆರಸಿರ್ದೂರ್ಧ್ವವ ।
ನಟನಾಕೃತಿ ತಾನೆ ಲೋಕದೊಂದಾಕಾರಂ ॥
'..............................ಲೋ ।
ಕತ್ರಯ ಮದನುಕ್ರಮದೊಳ್ ।
ವೇತ್ರಾಸನ ಝಲ್ಲರೀ ಮೃದಂಗ ಸಮಾನಂ' ॥

(ಪಂಪನ ಆದಿ ಪುರಾಣ. . ೪೫-೪೭)

ಅಡಿಜಕ್ಕಳಮೆಂಬಂದಂ । ನಡು ಝಲ್ಲರಿಯಂತೆ ಮೇಲೆ ಮರ್ದಳೆಯಂ ನೇ ॥
ರ್ಪಡೆದಿರಿಸಿದಂತೆ ಮೊದಲಿಂ । ಕಡೆ ಮುಟ್ಟಲ್ನೋಡೆ ಲೋಕದಾಕೃತಿಯೆಸೆಗುಂ ॥

(ರತ್ನಾಕರಕೃತ ತ್ರಿಲೋಕ ಸಪಾದ ಶತಕಂ)

## ಅಧೋಲೋಕ- ಸ್ವರೂಪ.

ಅಧೋಲೋಕಗಳು ಏಳು. ಅವುಗಳಿಗೆ ಘರ್ಮಾ, ವಂಶಾ, ಮೇಘಾ, ಅಂಜನಾ, ಅರಿಷ್ಟಾ, ಮಘವಿ, ಮಾಘವೀ ಎಂಬ ಹೆಸರುಗಳುಂಟು. ವರ್ಣ, ಸ್ವರೂಪ ಭೇದದಿಂದ ಇವನ್ನೇ ರತ್ನಪ್ರಭೆ, ಶರ್ಕರಾಪ್ರಭೆ, ವಾಲುಕಾಪ್ರಭೆ, ಪಂಕಪ್ರಭೆ, ಧೂಮಪ್ರಭೆ, ತಮಃಪ್ರಭೆ, ಮಹಾತಮಃಪ್ರಭೆ ಎಂದು ಹೇಳುವರು. ನರಕಗ

ಳೆಲ್ಲ ಈ ಅಧೋಲೋಕಗಳಲ್ಲಿವೆ. ಪ್ರತಿ ನರಕವು ಒಂದರ ಕೆಳಗೊಂದರಂತೆ ಇರುವ ಘನೋದಧಿ, ಘನ, ತನು ಎಂಬ ಮೂರು ವಾತವಲಯಗಳ ಮೇಲೆ ನಿಂತಿದೆ. ಈ ವಾತವಲಯಗಳು (ಪ್ರತಿ ಒಂದು) ೨೦ ಸಾವಿರ ಯೋಜನ ದಪ್ಪವಾಗಿವೆ. ಅವುಗಳ ಕೆಳಗೆ ಆಕಾಶವಿದೆ. ಈ ಎಲ್ಲ ಅಧೋಭೂಮಿ(ಲೋಕ)ಗಳಲ್ಲಿ ಸೇರಿ ೮೪ಲಕ್ಷ ನರಕ ಬಿಲಗಳುಂಟು:– ಮೊದಲ ನರಕದಲ್ಲಿ ೩೦ಲಕ್ಷ, ನೆಯದರಲ್ಲಿ ೨೫ಲಕ್ಷ, ೩ನೆಯದರಲ್ಲಿ ೧೫ಲಕ್ಷ, ೪ನೆಯದರಲ್ಲಿ ೧೦ಲಕ್ಷ, ೫ನೆಯದರಲ್ಲಿ ೩ಲಕ್ಷ, ೬ನೆಯದರಲ್ಲಿ ೫ ಕಡಿಮೆ ೧ಲಕ್ಷ, ೭ನೆಯದರಲ್ಲಿ ೫. ಈ ನರಕಬಿಲಗಳು ತ್ರಿಕೋಣ ಚೌಕೋಣ ಮೊದಲಾದ ಬೇರೆ ಬೇರೆ ತರದ ಆಕಾರದವಾಗಿವೆ. ಅವು ಸಂಖ್ಯಾತ, ಅಸಂಖ್ಯಾತ ಯೋಜನ ವಿಸ್ತಾರವಾಗಿವೆ. ಈ ಬಿಲಗಳ ಸುತ್ತಲು ಪ್ರತಿಒಂದು ಬಿಲದ ಪೃಥ್ವೀಸ್ಕಂಧಗಳಿರುವುದರಿಂದ ಮೃದಂಗವನ್ನು ನೆಲದಲ್ಲಿ ಹೂಳಿದರೆ ಅದರ ಸುತ್ತಲೂ ನೆಲವೂ, ನಡುವೆ ಕೊಳವೆಯಂತಹ ಭಾಗವೂ ಆಗುವ ಹಾಗೆ ಇವುಗಳ ಆಕಾರವುಂಟು.

ಈ ಏಳೂ ನರಕಗಳಲ್ಲಿ ಸೇರಿ ೪೯ ಪಟಲಗಳುಂಟು. ಪಟಲಗಳಿಗೆ ಇಂದ್ರಕ, ಪ್ರಸ್ತಾರ, ಅಂತರ್ಭೂಮಿ ಎಂಬ ಹೆಸರುಗಳೂ ಉಂಟು. ಯಾವ ನರಕಬಿಲಗಳ ಮೇಲ್ಭಾಗವು ಒಂದೇ ಸಮತಲದಲ್ಲಿ ಆಗುವುದೋ ಆ ಬಿಲಗಳು ಒಂದು ಪಟಲದವೆಂದು ಹೇಳುವರು. ಪಟಲವೆಂದರೆ ಅಂತಸ್ತು (ನೆಲೆ) ಎಂದು ಹೇಳಬಹುದು. ಪ್ರತಿಯೊಂದು ನರಕ ಭೂಮಿಯಲ್ಲಿ ಮೇಲೂ ಕೆಳಗೂ ಒಂದೊಂದು ಸಾವಿರ ಯೋಜನ ಬಿಟ್ಟು ನಡುವೆ ಪಟಲಗಳಿರುತ್ತವೆ. ಅವುಗಳಲ್ಲಿ ಇಂದ್ರಕ ಶ್ರೇಣೀಬದ್ಧ, ಪ್ರಕೀರ್ಣಕ ಎಂಬ ಮೂರು ತರದ ಬಿಲಗಳಿರುತ್ತವೆ. ಇಂದ್ರಕಗಳೆಂಬಿವು ಮಧ್ಯದಲ್ಲಿಯ ಮುಖ್ಯಬಿಲಗಳು. ಶ್ರೇಣೀಬದ್ಧಗಳೆಂಬಿವು ಇಂದ್ರಕಗಳ, ಎಂಟೂ ದಿಕ್ಕುಗಳಲ್ಲಿಯೂ, ಇರುತ್ತವೆ. ಪ್ರಕೀರ್ಣಕಗಳೆಂಬಿವು ಅವುಗಳ ಸುತ್ತಲೂ ನಡುನಡುವೆ ಪೂವಲಿಗೆದರಿದಂತೆ ನಾನಾ ಪ್ರಕಾರವಾಗಿ ಇರುತ್ತವೆ.

ರತ್ನ ಪ್ರಭೆಯೆಂಬ ಮೊದಲ ನರಕಭೂಮಿಯಲ್ಲಿ ಖರ ಭಾಗವು ೧೬ಸಾವಿರ ಯೋಜನ, ಪಂಕಭಾಗವು ೮೪ಸಾ. ಯೋ. ಅಬ್ಬಹುಲಭಾಗವು ೮೦ ಸಾ. ಯೋ. ಹೀಗೆ ಅದು ೧ ಲಕ್ಷ ೮೦ಸಾ. ಯೋ. ದಪ್ಪವಾಗಿದೆ.

ರತ್ನಪ್ರಭೆಯ ಖರಭಾಗದಲ್ಲಿ ಅಸುರ ಕುಮಾರರನ್ನು ಬಿಟ್ಟು ೯ ತರದ ಭವನವಾಸಿ ದೇವತೆಗಳೂ, ರಾಕ್ಷಸರನ್ನು ಬಿಟ್ಟು ೭ ತರದ ವ್ಯಂತರದೇವತೆಗಳೂ, ಪಂಕಭಾಗದಲ್ಲಿ ಅಸುರ ಕುಮಾರದೇವತೆಗಳೂ ರಾಕ್ಷಸರೂ ಇರುತ್ತಾರೆ. ಅಬ್ಬಹುಲಭಾಗದಲ್ಲಿಯೂ, ಶರ್ಕರಾಪ್ರಭೆ ಮೊದಲಾದ ಮುಂದಿನ ಆರು ಅಧೋಭೂಮಿಗಳಲ್ಲಿಯೂ ನಾರಕರು ವಾಸಿಸುತ್ತಾರೆ.

**ಪ್ರತಿ ಒಂದು ನರಕಭೂಮಿಯ ದಪ್ಪ, ಮತ್ತು ಅದರಲ್ಲಿರುವ ಪಟಲಗಳು.**

(೧) ಘರ್ಮೆಯ ಅಬ್ಬಹುಲಭಾಗ- ದಪ್ಪ ೮೦ ಸಾವಿರ ಯೋಜನ. ೧೩ ಪಟಲಗಳು:- ಸೀಮಂತ, ನಿರಯ, ರೌರವ, ಭ್ರಾಂತ, ಉದ್ಭ್ರಾಂತ, ಸಂಭ್ರಾಂತ, ಅಸಂಭ್ರಾಂತ, ವಿಭ್ರಾಂತ, ತ್ರಸ್ತ, ತ್ರಸಿತ, ವಕ್ರಾಂತ, ಅವಕ್ರಾಂತ, ವಿಕ್ರಾಂತ.

೨ನೆಯ ನರಕ- ದಪ್ಪ- ೩೨ಸಾ. ಯೋ. ೧೧ ಪಟಲಗಳು:- ತತಕ, ಸ್ತನಕ, ವನಕ, ಮನಕ, ಖಡಾ, ಖಡೀಕಾ, ಜಿಹ್ವೆ, ಜಿಹ್ವಿಕೆ, ಲೋಲ, ಲೋಲುಕ, ಲೋಲವತ್ಸ.

೩ನೆಯ ನರಕ- ದಪ್ಪ- ೨೮ಸಾ. ಯೋ. ೯ ಪಟಲಗಳು:- ತಪ್ತ, ತಪಿತ, ತಪನ, ತಾಪನ, ನಿದಾಘ, ಉಜ್ವಲಿತ, ಪ್ರಜ್ವಲಿತ, ಸಂಜ್ವಲಿತ, ಸಂಪ್ರಜ್ವಲಿತ;

೪ನೆಯ ನರಕ- ದಪ್ಪ- ೨೪ಸಾ ಯೋ. ಏಳು ಪಟಲಗಳು:- ಆರ, ಮಾರ, ತಾರ, ವರ್ಚಸ್ವ, ತಮ, ಘಡಾ, ಘಡಾಯ;

೫ನೆಯ ನರಕ- ದಪ್ಪ- ೨೦ಸಾ. ಯೋ. ೫ ಪಟಲಗಳು:- ತಮಕ, ಭ್ರಮಕ ಝುಷಕ, ಅಂಧ, ತಮಿಸ್ರ,

೬ನೆಯ ನರಕ- ದಪ್ಪ ೧೬ಸಾ. ಯೋ. ೩ ಪಟಲಗಳು:- ಹಿಮ, ವಾರ್ಧವಿಲಲ್ಲಕ್ಯ.

೭ನೆಯ ನರಕ- ದಪ್ಪ- ೮ಸಾ. ಯೋ. ೧ ಪಟಲ:- ಅವಧಿಸ್ಥಾನ. (ಈ ಪಟಲಕ್ಕೆ ಪ್ರಕೀರ್ಣಕ ಬಿಲಗಳಿಲ್ಲ.)

ಎಲ್ಲ ಪಟಲಗಳಿಗೆ ಒಟ್ಟು ೯೬೦೪ ಶ್ರೇಣಿಬದ್ಧಗಳಿವೆ. ೮೩೯೦೩೪೭ ಪ್ರಕೀರ್ಣಕಗಳಿವೆ. ೫ನೆಯ ನರಕದ ೩/೪ ಭಾಗದ ವರೆಗಿರುವ ಬಿಲಗಳು (೮೨೨೫ಸಾವಿರ) ಅತ್ಯುಷ್ಣವಾದುವು; ಕೆಳಗಿನ ಉಳಿದ ಬಿಲಗಳು (೧೭೫ಸಾ.) ಅತಿಶೀತವಾದುವು. ಆ ಉಷ್ಣತೆ ಶೈತ್ಯಗಳ ಪ್ರಮಾಣ-

ಇಳೆಯೊಳ್ ಬಿಡೆ ನಿಡುಲೋಹಾ । ಚಳಮಾಗಳೆ ಮೇಣದಂತೆ ಕರಗುವುದೂರ್ಧ್ವ ॥
ಸ್ಥಳದುಷ್ಣದಿನಾರಸಮುಂ । ಘಳಿಲನೆ ಬಲಿಯಿಸುವ ಶಕ್ತಿ ಕೆಳಗಣ ಶೈತ್ಯಂ ॥

**ನಾರಕರು.**

ಈ ನರಕಬಿಲಗಳಲ್ಲಿ ನಾರಕಜೀವರು ವಾಸಿಸುವರು. ರತ್ನಪ್ರಭೆಯ ಅಬ್ಬಹುಲಭಾಗದ ೧ನೆಯ ಪಟಲದ ಜೀವರ ದೇಹ ಪ್ರಮಾಣ ಮೂರು ಮೊಳ; ಇದು ಕ್ರಮದಿಂದ ಹೆಚ್ಚುತ್ತ ೧೩ನೆಯ ಪಟಲದಲ್ಲಿ ೭ ಧನುಷ್ಯ + ೩। ಮೊಳ; ಹೀಗೆಯೇ ಮುಂದಿನ ಶರ್ಕರಾ ಪ್ರಭಾದಿ ನರಕಗಳ ಪಟಲಗಳಲ್ಲಿ ದೇಹ ಪ್ರಮಾಣವು ಹೆಚ್ಚುತ್ತ ೭ನೆಯ ಮಹಾತಮಃ ಪ್ರಭೆಯ ೪. ನೆಯ ಪಟಲದಲ್ಲಿ ಶರೀರ ಪ್ರಮಾಣವು ೫೦೦ ಧನುಷ್ಯವುಂಟು. ನಾರಕರೆಲ್ಲರೂ ಯಾವಾಗಲೂ ಅಶುಭತರ

ಪಾಪ ಲೇಶ್ಯ, ಪರಿಣಾಮ, ದೇಹ, ವೇದನೆ, ವಿಕ್ರಿಯೆ ಇವುಗಳನ್ನು ಹೊಂದುವವರಾಗಿರುವರು. ಇವರಿಗೆ ಯಾವಾಗಲೂ ಅಶುಭಕರ್ಮದ ಉದಯವಾಗುತ್ತಿರುವುದರಿಂದ ಲೇಶ್ಯಾದಿಗಳು ಅಶುಭಗಳೇ ಆಗುತ್ತವೆ. ನಾರಕರು ಸಹಜ, ಶಾರೀರ, ಮಾನಸ, ಆಗಂತುಕವೆಂಬ ನಾಲ್ಕು ತರದ ದುಃಖಗಳನ್ನು ಹೊಂದುವರು ನಾರಕರಿಗೆ ನಾನಾರೂಪಗಳನ್ನು ಧರಿಸುವ ಶಕ್ತಿಯುಂಟು; ಆದರೆ ಆ ರೂಪಗಳಿಂದ ಅವರು ದುಃಖವನ್ನೇ ಭೋಗಿಸುವರು; ಅವರು ಪರಸ್ಪರವಾಗಿಯೂ ದುಃಖವನ್ನು ಕೊಡುವರು. ತಮ್ಮ ತಮ್ಮೊಳಗೆ ಜಗಳವಾಡುವರು. ಮೊದಲಿನ ಮೂರು ನರಕಗಳಲ್ಲಿರುವ ನಾರಕರಿಗೆ ಸಂಕ್ಲಿಷ್ಟಪರಿಣಾಮದ ದೇವತೆಗಳು ಹೋಗಿ ದುಃಖಕೊಡುವರು. ಹೇಗೆಂದರೆ ಪರರನ್ನು ದುಃಖಬಡಿಸಿ ಸಂತೋಷಬಡುವ ಅಸುರ ಕುಮಾರ ದೇವತೆಗಳು ಮೊದಲಿನ ಮೂರು ನರಕಗಳಿಗೆ ಹೋಗಿ ತಮ್ಮ ಅವಧಿ ಜ್ಞಾನದಿಂದ ಅವರ ಪೂರ್ವಭವದ ವೈರಕಾರಣವನ್ನು ಹೇಳಿ ಜಗಳ ಹುಟ್ಟಿಸಿ ಅವರು ದುಃಖಹೊಂದುವುದನ್ನು ನೋಡಿ ಸಮಾಧಾನಬಡುವರು ಮೊದಲ ನರಕದ ೧ನೆಯ ಸೀಮಂತ ಪಟಲದಲ್ಲಿ ೧೦ ಸಾವಿರದಿಂದ ೯೦ ಸಾವಿರ ವರ್ಷ ಆಯುಷ್ಯ. ಇದರಂತೆಯೇ ಪ್ರತಿ ಪಟಲದಲ್ಲಿ ಹೆಚ್ಚುತ್ತ ಹೋಗುವುದು. ೨ನೆಯ ನರಕದಲ್ಲಿ ೧ರಿಂದ ೩ ಸಮುದ್ರ, ೩ನೆಯದರಲ್ಲಿ ೩ರಿಂದ ೭ ಸಮುದ್ರ, ೪ನೆಯದರಲ್ಲಿ ೭ರಿಂದ ೧೦ ಸಮುದ್ರ. ೫ನೆಯದರಲ್ಲಿ ೧೦ರಿಂದ ೧೭ ಸಮುದ್ರ, ೬ನೆಯದರಲ್ಲಿ ೧೭ರಿಂದ ೨೨ ಸಮುದ್ರ. ೭ನೆಯದರಲ್ಲಿ ೨೨ರಿಂದ ೩೩ ಸಮುದ್ರ ಆಯುಷ್ಯಪರಿಮಿತಿಯುಂಟು.

## ಮಧ್ಯಮಲೋಕ.

ಮಧ್ಯಮಲೋಕವು ಮನುಷ್ಯರ ವಾಸಸ್ಥಾನವು. ಇದರಲ್ಲಿ ಅಸಂಖ್ಯ ದ್ವೀಪಗಳೂ ಸಮುದ್ರಗಳೂ ಉಂಟು. ಜಂಬೂದ್ವೀಪವು ಆ ದ್ವೀಪಗಳಲ್ಲೊಂದಾಗಿದೆ. ಅದರ ವ್ಯಾಸವು ೧ ಲಕ್ಷಯೋಜನ. ಜಂಬೂದ್ವೀಪವು ಸೂರ್ಯಮಂಡಲದಂತೆ ಗೋಲಾಕಾರವಾಗಿದೆ. ಇದರ ನಡುವೆ ಮಂದರವೆಂಬ ಪರ್ವತವುಂಟು. ಜಂಬೂದ್ವೀಪದ ಸುತ್ತಲು ಮಹಾಸಾಗರವುಂಟು. ಆ ಮಹಾಸಾಗರದ ಸುತ್ತಲು ಮತ್ತೆ ಮಹಾದ್ವೀಪವುಂಟು. ಈ ಮೇರೆಗೆ ಮಧ್ಯಮಲೋಕದಲ್ಲಿ ಸಾಗರಗಳೂ ದ್ವೀಪಗಳೂ ಉಂಟು. ಜಂಬೂದ್ವೀಪವನ್ನು ಲವಣಸಾಗರವು ಸುತ್ತಿದೆ. ಲವಣ ಸಮುದ್ರವನ್ನು ಧಾತಕೀಖಂಡ ದ್ವೀಪವು ಸುತ್ತಿದೆ. ಧಾತಕೀಖಂಡವನ್ನು ಕಾಲೋದಸಮುದ್ರವು ಸುತ್ತಿದೆ. ಅದನ್ನು ಸುತ್ತಿ ಪುಷ್ಕರದ್ವೀಪವುಂಟು. ಈ ಮೇರೆಗೆ ಸ್ವಯಂಭೂರಮಣವೆಂಬ ಕೊನೆಯ ಮಹಾಸಮುದ್ರದವರೆಗೆ ಅಸಂಖ್ಯ ಮಹಾದ್ವೀಪಗಳೂ ಮಹಾಸಾಗರಗಳೂ ಉಂಟು.

ಜಂಬೂದ್ವೀಪದಲ್ಲಿ ಏಳು ಕ್ಷೇತ್ರಗಳು:— ಭರತ, ಹೈಮವತ, ಹರಿ, ವಿದೇಹ

ರಮ್ಯಕ, ಹೈರಣ್ಯವತ, ಐರಾವತ. ಇವುಗಳಿಗೆ ವರ್ಷಗಳೆಂದೂ ಹೆಸರು. ಈ ವರ್ಷಗಳು ಆರು ವರ್ಷಧರ ಪರ್ವತಗಳಿಂದ ಒಂದರಿಂದೊಂದು ಬೇರೆಯಾಗಿವೆ. ಆ ಪರ್ವತಗಳು- ಹಿಮವಂತ, ಮಹಾಹಿಮವಂತ, ನಿಷಧ, ನೀಲ, ರುಕ್ಮಿ, ಶಿಖರಿ. ಇವಕ್ಕೆ ಕುಲಪರ್ವತಗಳೆಂದೂ ಹೆಸರು. ಇವುಗಳ ಪಾರ್ಶ್ವ ಭಾಗಗಳು ಹಲವು ಬಗೆಯ ರತ್ನಗಳಿಂದ ತುಂಬಿವೆ ಇವು ಪೂರ್ವ ಪಶ್ಚಿಮವಾಗಿ ಬಹು ದೂರ ಹಬ್ಬಿವೆ. ಹಿಮವಂತವು ಚಿನ್ನದ ಪರ್ವತವು, ಮಹಾಹಿಮವಂತವು ಬೆಳ್ಳಿಯದು; ಹರಿಪರ್ವತವು ತಾಮ್ರವರ್ಣ ಸುವರ್ಣದಿಂದ ನಿರ್ಮಿತವಾದುದು ನೀಲಗಿರಿಯಲ್ಲಿ ವೈಡೂರ್ಯಗಳು ತುಂಬಿವೆ. ರುಕ್ಮಿಯೂ ಬೆಳ್ಳಿಯದೇ. ಶಿಖರಿ ಪರ್ವತವು ಚಿನ್ನದಿಂದ ಆಗಿದೆ. ಈ ಪರ್ವತಗಳ ಮೇಲೆ ಕ್ರಮದಿಂದ ಪದ್ಮ, ಮಹಾಪದ್ಮ, ತಿಗಂಛ, ಕೇಸರಿ, ಮಹಾಪುಂಡರೀಕ, ಪುಂಡರೀಕ ಎಂಬ ಆರು ಸರೋವರಗಳುಂಟು ಇವೂ ಪರ್ವತಗಳಂತೆ ಪೂರ್ವ ಪಶ್ಚಿಮವಾಗಿ ಹಬ್ಬಿವೆ. ಪದ್ಮ ಸರೋವರವು ೧೦೦೦ ಯೋಜನ ಉದ್ದವಾಗಿಯೂ ೫೦ ಯೋಜನ ಅಗಲವಾಗಿಯೂ ಇದೆ. ಎರಡನೆಯ ಸರೋವರವು ಮೊದಲ ಸರೋವರದ ಇಮ್ಮಡಿ ಉದ ಅಗಲಗಳುಳ್ಳುದು; ಮೂರನೆಯುದು ಎರಡನೆಯುವರ ಇಮ್ಮಡಿ ಉದ್ದ ಅಗಲಗಳುಳ್ಳುದು ೪ನೆಯದು ಮೂರನೆಯುದಕ್ಕೂ. ಐದನೆಯುದು ಎರಡನೆಯುದಕ್ಕೂ ಆರನೆಯದು ಮೊದಲನೆಯುದಕ್ಕೂ ಸಮಾನವಾದುವು. ಇವೆಲ್ಲವೂ ಕ್ರಮವಾಗಿ ೧೦–೨೦ ೪೦–೪೦ ೨೦ ೧೦ ಯೋಜನ ಆಳವಾಗಿವೆ ಪ್ರತಿ ಸರೋವರದಲ್ಲಿಯೂ ಒಂದೊಂದು ಮಹಾಕಮಲವುಂಟು. ಆ ಕಮಲಗಳ ಮೇಲೆ ಕ್ರಮದಿಂದ ಶ್ರೀ, ಹ್ರೀ, ಧೃತಿ, ಕೀರ್ತಿ, ಬುದ್ಧಿ, ಲಕ್ಷ್ಮಿ ಎಂಬ ದೇವತೆಯರು ನೆಲಸಿರುವರು. ಇವರ ಆಯುಷ್ಯವು ಒಂದು ಪಲ್ಯ. ತಾವು ವಾಸಿಸಿನ ಭಾಗಕ್ಕೆ ಇವರು ಒಡತಿಯರು; ಇವರ ಬಳಿಯಲ್ಲಿ ಸಭಾಸದ ಸಾಮಾನಿಕ ಎಂಬ ದೇವತೆಗಳು ಸುತ್ತಲಿದ್ದ ಬೇರೆ ಕಮಲಗಳ ಮೇಲೆ ಇರುವರು ಭರತ ಮೊದಲಾದ ಏಳು ಕ್ಷೇತ್ರಗಳಲ್ಲಿ ಕ್ರಮದಿಂದ– (೧) ಗಂಗೆ, ಸಿಂಧು (೨) ರೋಹಿತ, ರೋಹಿತಾಸ್ಯೆ, (೩) ಹರಿತ್, ಹರಿಕಾಂತೆ, (೪) ಶೀತೆ, ಶೀತೋದೆ, (೫) ನಾರಿ, ನರಕಾಂತೆ, (೬) ಸುವರ್ಣಕೂಲೆ, ರೂಪ್ಯಕೂಲೆ, (೭) ರಕ್ತೆ, ರಕ್ತೋದೆ ಎಂಬ ೭ ಜೋಡು (ಹದಿನಾಲ್ಕು) ನದಿಗಳು ಹರಿದಿವೆ. ಪ್ರತಿಕ್ಷೇತ್ರದ ಪೂರ್ವಕ್ಕೂ ಪಶ್ಚಿಮಕ್ಕೂ ಸಮುದ್ರವಿದೆ. ಕ್ಷೇತ್ರದೊಳಗಿನ ಮೊದಲಿನ ನದಿಯು ಪೂರ್ವ ಸಮುದ್ರಕ್ಕೂ, ಎರಡನೆಯ ನದಿಯು ಪಶ್ಚಿಮಸಮುದ್ರಕ್ಕೂ ಕೂಡಿದೆ. ಗಂಗಾ ಸಿಂಧುಗಳಿಗೆ ಉಪ ನದಿಗಳು ೧೪೦೦೦ ೨ನೆಯ. ೩ನೆಯ, ೪ನೆಯ ಕ್ಷೇತ್ರಗಳ ನದಿಗಳಿಗೆ ಇದರ ಇಮ್ಮಡಿ ಉಪನದಿಗಳು. ೫ನೆಯ ೬ನೆಯ ೭ನೆಯ ಕ್ಷೇತ್ರಗಳ ಈ ಮಹಾನದಿಗಳಿಗೆ ಉಪನದಿಗಳು ಅರ್ಧದಷ್ಟು ಕಡಿಮೆಯಾಗುತ್ತ ಹೋಗುವುವು.

ಭರತ ಕ್ಷೇತ್ರದ ಮಧ್ಯದಲ್ಲಿ ಪೂರ್ವಪಶ್ಚಿಮ ಸಮುದ್ರಗಳ ವರೆಗೆ ವಿಜಯಾರ್ಧವೆಂಬ ಪರ್ವತವು ಹಬ್ಬಿದೆ ಭರತಕ್ಷೇತ್ರದಲ್ಲಿ ಆರು ಖಂಡಗಳುಂಟು. ಅವುಗಳಲ್ಲಿ ಮೂರು ವಿಜಯಾರ್ಧದ ಉತ್ತರದಲ್ಲುಂಟು, ಮೂರು ದಕ್ಷಿಣದಲ್ಲುಂಟು. ಈ ಆರೂ ಖಂಡಗಳನ್ನು ಜಯಿಸಿದ ಅರಸರು ಚಕ್ರವರ್ತಿಗಳೆನಿಸುವರು. ಉತ್ತರದ ಮೂರು ಖಂಡಗಳನ್ನು ಜಯಿಸದಿದ್ದರೆ ಅವರು ಅರ್ಧ ವಿಜಯಿಗಳೆನಿಸುವರು. ಈ ಕಾರಣದಿಂದಲೇ ನಡುವಿನ ಪರ್ವತಕ್ಕೆ ವಿಜಯಾರ್ಧವೆಂದು ಹೆಸರು. ಇದಕ್ಕೆ ರಜತಾದ್ರಿಯೆಂದೂ ಹೆಸರು. ಗಂಗಾ ಸಿಂಧುಗಳು ವಿಜಯಾರ್ಧದ ಉತ್ತರದ ಕಡೆಯಿಂದ ಹರಿಯುತ್ತ ಅದರ ಗುಹೆಯೊಳಗಿಂದ ಹಾಯ್ದು ದಕ್ಷಿಣಕ್ಕೆ ಬಂದು ಸಮುದ್ರಕ್ಕೆ ಕೂಡುವವು. ವಿಜಯಾರ್ಧದ ಉತ್ತರಕ್ಕಿರುವ ಮೂರು ಖಂಡಗಳೂ ದಕ್ಷಿಣದಲ್ಲಿ ನಡುವಿನ ಖಂಡವನ್ನು ಬಿಟ್ಟು ಉಳಿದ ಎರಡು ಖಂಡಗಳೂ ಮ್ಲೇಚ್ಛ ಖಂಡಗಳು. ಮಧ್ಯದಲ್ಲಿ ಆರ್ಯಖಂಡವು. ಭರತಕ್ಷೇತ್ರದ ಪಶ್ಚಿಮ ದಕ್ಷಿಣ ಪೂರ್ವಗಳಲ್ಲಿ ಸಮುದ್ರವುಂಟು. ಉತ್ತರಕ್ಕೆ ಕುಲಾಚಲವುಂಟು.

೨ನೆಯ ೩ನೆಯ ೪ನೆಯ ೫ನೆಯ ಕ್ಷೇತ್ರಗಳಲ್ಲಿ ಒಂದೊಂದು ಗೋಲಾಕಾರ ಪರ್ವತವುಂಟು. ಹೈಮವತ ಕ್ಷೇತ್ರದಲ್ಲಿರುವ ಇಂತಹ ಪರ್ವತಕ್ಕೆ ವೃತ್ತವೇದಾಢ್ಯ ಎಂಬ ಹೆಸರು. ಹಿಮವಂತದ ಮೇಲಿನ ಪದ್ಮಸರೋವರದಿಂದ ಎರಡು ನದಿಗಳು ಹೊರಟು ಭರತ ಕ್ಷೇತ್ರದಲ್ಲಿ ಬಂದಿವೆ. ಮತ್ತು ರೋಹಿತಾಸ್ಯೆಯೆಂಬ ಮತ್ತೊಂದು ನದಿಯು ಹೈಮವತ ಕ್ಷೇತ್ರದಲ್ಲಿ ವೃತ್ತವೇದಾಢ್ಯ ಪರ್ವತದ ದಕ್ಷಿಣ ದಿಕ್ಕಿನ ಅರ್ಧಭಾಗವನ್ನು ಸುತ್ತಿ ಪಶ್ಚಿಮ ಸಮುದ್ರವನ್ನು ಸೇರುವುದು. ಹೈಮವತ ಕ್ಷೇತ್ರದ ಉತ್ತರಕ್ಕೆ ಮಹಾಹಿಮವಂತವೆಂಬ ಪರ್ವತವುಂಟು. ಈ ಪರ್ವತದಿಂದ ಹೊರಟ ಮತ್ತೊಂದು ನದಿಯು ಹೈಮವತ ಕ್ಷೇತ್ರದ ವೃತ್ತವೇದಾಢ್ಯ ಪರ್ವತದ ಉತ್ತರ ದಿಕ್ಕಿನ ಅರ್ಧಭಾಗವನ್ನು ಸುತ್ತಿ ಪೂರ್ವಸಮುದ್ರಕ್ಕೆ ಕೂಡುವುದು. ಇದೇ ಮೇರೆಗೆ ಮೂರನೆಯ ಕ್ಷೇತ್ರದಲ್ಲಿಯೂ ನದೀ ಪರ್ವತಗಳ ಸ್ಥಿತಿಯುಂಟು. ೨ನೆಯ ಮತ್ತು ೩ನೆಯ ಕ್ಷೇತ್ರಗಳಲ್ಲಿ ಜಘನ್ಯ, ಮತ್ತು ಮಧ್ಯಮ ಭೋಗ ಭೂಮಿಗಳುಂಟು.

೪ನೆಯ ಕ್ಷೇತ್ರಕ್ಕೆ ವಿದೇಹವೆಂದು ಹೆಸರು. ವಿದೇಹದೊಳಗಿನ ಗೋಲಾಕಾರ ಪರ್ವತಕ್ಕೆ ಸುಮೇರುವೆನ್ನುವರು. ಸುಮೇರುವಿನ ಉತ್ತರ ದಕ್ಷಿಣ ಭಾಗಗಳಲ್ಲಿ ಉತ್ಕೃಷ್ಟ ಭೋಗ ಭೂಮಿಗಳುಂಟು. ಪೂರ್ವಕ್ಕೂ ಪಶ್ಚಿಮಕ್ಕೂ ಕರ್ಮ ಭೂಮಿಗಳುಂಟು. ವಿದೇಹದಲ್ಲಿ ಸೀತಾ, ಸೀತೋದಾ ಎಂಬ ಎರಡು ನದಿಗಳು ಪರ್ವತವನ್ನು ಸುತ್ತಿ ಕ್ರಮದಿಂದ ಪೂರ್ವ ಸಮುದ್ರ, ಪಶ್ಚಿಮ ಸಮುದ್ರಗಳನ್ನು ಸೇರುವವು. ವಿದೇಹ ಕ್ಷೇತ್ರದೊಳಗಿನ ಮೂವತ್ತೆರಡು ಕರ್ಮ ಭೂಮಿ

ಗಳಲ್ಲಿ ಪ್ರತಿ ಒಂದರಲ್ಲಿ ಒಂದೊಂದು ವಿಜಯಾರ್ಧ ಪರ್ವತವೂ, ಎರಡು ಮಹಾ ನದಿಗಳೂ ಇರುವುವು.

ಐದನೆಯ ಆರನೆಯ ಕ್ಷೇತ್ರಗಳಲ್ಲಿ ಎರಡೆರಡು ಮಹಾನದಿಗಳೂ ಒಂದೊಂದು ಪರ್ವತವೂ ಉಂಟು. ಈ ಎರಡು ಕ್ಷೇತ್ರಗಳು ಮಧ್ಯಮ, ಜಘನ್ಯ ಭೋಗ ಭೂಮಿಗಳಾಗಿವೆ.

ಭರತ ಐರಾವತ ಕ್ಷೇತ್ರಗಳಲ್ಲಿ ಕಾಲಚಕ್ರಭ್ರಮಣಾನುಸಾರವಾಗಿ ಜೀವರ ಆಯುಷ್ಯ, ಶಕ್ತಿ, ಶರೀರ ಇವುಗಳ ಹ್ರಾಸ ವೃದ್ಧಿಗಳಾಗುವುವು; ಭೂರಚನೆಯಲ್ಲಿಯೂ ಸ್ವಲ್ಪ ಪರಿವರ್ತನವಾಗುವುದು.

ಜಂಬೂದ್ವೀಪದ ಸುತ್ತಲಿನ ಲವಣೋದ ಸಮುದ್ರವು ಎರಡು ಲಕ್ಷ ಯೋಜನ ಅಗಲವದೆ. ಲವಣ ಸಮುದ್ರದ ಸುತ್ತಲು ಧಾತಕೀಖಂಡವೆಂಬ ದ್ವೀಪವುಂಟು. ಅದು ಲವಣೋದ ಸಮುದ್ರದ ಇಮ್ಮಡಿ ಜಂಬೂದ್ವೀಪದ ನಾಲ್ಮಡಿ ವಿಸ್ತಾರವಾಗಿದೆ. ಇದರ ಅಗಲವು ೪ ಲಕ್ಷ ಯೋಜನ. ಜಂಬೂದ್ವೀಪವು ಗೋಲಾಕಾರವಾಗಿರುವುದರಿಂದ ಅದರೊಳಗಿನ ಪರ್ವತಗಳು ಒಂದು ಕಡೆಯಿಂದ ಇನ್ನೊಂದು ಕಡೆಯವರೆಗೆ ಹಬ್ಬಿವೆ. ಆದರೆ ಧಾತಕೀಖಂಡವು ಕಂಕಣಾಕೃತಿ ಇಲ್ಲವೆ ಚಕ್ರಾಕಾರವಾಗಿದೆ. ಚಕ್ರವು ಹಲ್ಲುಗಳಿಂದ ವಿಭಕ್ತವಾಗಿರುವಂತೆ ಇದೂ ಪರ್ವತಗಳಿಂದ ವಿಭಕ್ತವಾಗಿದೆ. ಆ ಪರ್ವತಗಳ ನಡುವಿನ ಪ್ರದೇಶಗಳು ಒಂದೊಂದು ಕ್ಷೇತ್ರವಾಗಿದೆ. ಧಾತಕೀಖಂಡದಲ್ಲಿ ೧೨ ಪರ್ವತಗಳೂ, ೨ ಮೇರುಗಳೂ, ೧೪ ಕ್ಷೇತ್ರಗಳೂ ಉಂಟು. ಈ ಖಂಡದಲ್ಲಿ ೬೮ ಕರ್ಮಭೂಮಿಗಳೂ, ೧೨ ಭೋಗ ಭೂಮಿಗಳೂ ಇರುವುವು.

ಧಾತಕೀಖಂಡದ ಆಚೆಗೆ ಕಾಲೋದ ಸಮುದ್ರವೂ ಅದರಾಚೆಗೆ ಪುಷ್ಕರ ದ್ವೀಪವೂ ಉಂಟು. ಕಾಲೋದ ಸಮುದ್ರದ ವಿಸ್ತಾರವು ೮ ಲಕ್ಷ ಯೋಜನ. ಪುಷ್ಕರದ್ವೀಪವು ೧೬ ಲಕ್ಷ ಯೋಜನ ವಿಸ್ತೀರ್ಣವಾಗಿದೆ. ಪುಷ್ಕರದ್ವೀಪದ ಅರ್ಧಭಾಗದಲ್ಲಿ (೮ ಲಕ್ಷಯೋ.) ಧಾತಕೀ ಖಂಡದಂತೆ ಕ್ಷೇತ್ರ ಪರ್ವತ ಮೊದಲಾದವು ಉಂಟು. ಉಳಿದ ೮ ಲಕ್ಷ ಯೋಜನಗಳಲ್ಲಿ ಕ್ಷೇತ್ರ ಮೊದಲಾದ ವಿಭಾಗವಿಲ್ಲ. ಪುಷ್ಕರದ್ವೀಪದ ನಟ್ಟ ನಡುವೆ ಮಾನುಷೋತ್ತರವೆಂಬ ಪರ್ವತವುಂಟು. ಈ ಪರ್ವತದ ಹೊರಗೆ ಮನುಷ್ಯರ ವಾಸ ಸಂಚಾರಗಳಿಲ್ಲ. ವಿದ್ಯಾಧರ, ಋಷಿ ಮೊದಲಾದವರು ಅಲ್ಲಿಗೆ ಹೋಗಬಹುದು. ಈ ಕಾರಣದಿಂದಲೇ ಆ ಪರ್ವತಕ್ಕೆ ಈ ಹೆಸರು ಬಂದಿದೆ. ಇದರ ಬಹಿರ್ಭಾಗದಲ್ಲಿ ಕೇವಲ ಭೋಗಭೂಮಿಗಳುಂಟು. ಅಲ್ಲಿ ತಿರ್ಯಂಚಗಳು ವಾಸಿಸುವುವು.

ಮಧ್ಯಮಲೋಕದಲ್ಲಿ ಕರ್ಮಭೂಮಿಗಳೂ ಭೋಗಭೂಮಿಗಳೂ ಹಲವು

ಉಂಟು ರಾಜ್ಯಭಾರ ಕೃಷಿ, ವಾಣಿಜ್ಯ, ಅಧ್ಯಾಪನ, ಸೇವೆ ಮೊದಲಾದುವುಗಳಿಂದ ಎಲ್ಲಿ ಉಪಜೀವನವು ನಡೆಯುವುದೋ, ಎಲ್ಲಿ ಸಂಸಾರ ಪರಿಹಾರೋಪಾಯವುಂಟೋ, ಎಲ್ಲಿ ಪಾಪಪುಣ್ಯಗಳಿಂದ ಜೀವರು ಬಂಧವನ್ನೈದುವರೋ ಅವು ಕರ್ಮಭೂಮಿಗಳು. ಕರ್ಮಭೂಮಿಗಳ ಸಂಖ್ಯೆ ೧೭೦. ಅವು ಜಂಬೂದ್ವೀಪದ ಭರತ ಐರಾವತಕ್ಷೇತ್ರಗಳಲ್ಲಿ ೨, ವಿದೇಹದಲ್ಲಿ ೩೨, ಧಾತಕೀಖಂಡದಲ್ಲಿ ೬೮, ಪುಷ್ಕರದ್ವೀಪಾರ್ಧದಲ್ಲಿ ೬೮. ವಿದೇಹಕ್ಷೇತ್ರದ ೩೨ ಕರ್ಮಭೂಮಿಗಳಲ್ಲಿ ಪ್ರತಿ ಒಂದು ಭರತ ಐರಾವತ ಕ್ಷೇತ್ರಗಳಂತೆ ವಿಜಯಾರ್ಧಪರ್ವತ ಮತ್ತು ಎರಡು ನದಿಗಳು ಇವುಗಳಿಂದ ೬ ಖಂಡಗಳಾಗಿವೆ. ವಿದೇಹದ ಚಕ್ರವರ್ತಿಗಳು ಈ ಆರು ಖಂಡಗಳನ್ನು ಜಯಿಸುವರು.

ವಾಣಿಜ್ಯ ಕೃಷ್ಯಾದಿಗಳಿಂದ ಎಲ್ಲಿ ಜೀವಿಸಬೇಕಾಗುವುದಿಲ್ಲವೋ, ಎಲ್ಲಿ ರಾಜ ಪ್ರಜೆಗಳೆಂಬ ಭೇದವಿಲ್ಲವೋ, ಎಲ್ಲಿ ಮೋಕ್ಷಮಾರ್ಗದ ಪ್ರಚಾರವಿಲ್ಲವೋ ಅವು ಭೋಗಭೂಮಿಗಳು. ಭರತಐರಾವತಕ್ಷೇತ್ರಗಳು ಅವಸರ್ಪಿಣೀಕಾಲದ ಮೂರು ಅಂತಃಕಾಲಗಳ ವರೆಗೆ ಭೋಗಭೂಮಿಗಳಾಗಿದ್ದುವು. ಅವಸರ್ಪಿಣಿಯ ೪ನೆಯ ಕಾಲದ ಆರಂಭಕ್ಕೆ ಇವು ಕರ್ಮಭೂಮಿಗಳಾಗಿ ಪರಿಣಮಿಸಿದುವು. ಅವಸರ್ಪಿಣಿಕಾಲದ ಕೊನೆಯಭಾಗವಲ್ಲಿಯೂ, ಉತ್ಸರ್ಪಿಣಿಯ ಮೂರು ಅಂತಃಕಾಲಗಳಲ್ಲಿಯೂ ಇವು ಕರ್ಮಭೂಮಿಗಳಾಗಿಯೇ ಇರುವುವು. ಭರತ, ಐರಾವತ ಕ್ಷೇತ್ರಗಳು ಈ ಮೇರೆಗೆ ಕರ್ಮಭೂಮಿಗಳಾಗುವುದರಿಂದ ಇವಕ್ಕೆ ವಾಡಿಕೆಯಾಗಿ ಕರ್ಮಭೂಮಿಗಳೆನ್ನುವರು. ವಿದೇಹದೊಳಗಿನ ೩೨ ಕರ್ಮಭೂಮಿಗಳು ಮೇರುವಿನ ಪೂರ್ವಪಶ್ಚಿಮ ಭಾಗಗಳಲ್ಲಿರುವುವು ಇವಲ್ಲದೆ ಆ ಪರ್ವತದ ದಕ್ಷಿಣೋತ್ತರ ಭಾಗಗಳಲ್ಲಿ ಎರಡು ಉತ್ತಮ ಭೋಗಭೂಮಿಗಳುಂಟು. ಅವು ದೇವಕುರು, ಉತ್ತರಕುರು ಎಂದು ಪ್ರಸಿದ್ಧವಾಗಿರುವುವು. ಹೈಮವತ, ಹೈರಣ್ಯವತ ಕ್ಷೇತ್ರಗಳು ಜಘನ್ಯಭೋಗಭೂಮಿಗಳು. ಮತ್ತು ಹರಿರಮ್ಯಕಕ್ಷೇತ್ರವು ಮಧ್ಯಮ ಭೋಗಭೂಮಿಯು. ಜಘನ್ಯಭೋಗಭೂಮಿಯಲ್ಲಿ ಜೀವರ ಆಯುಃಪರಿಮಿತಿಯು ಒಂದು ಪಲ್ಯ. ಮಧ್ಯಮದಲ್ಲಿ ೨ ಪಲ್ಯ; ಉತ್ತಮದಲ್ಲಿ ೩ ಪಲ್ಯ. ಜಂಬೂದ್ವೀಪದ ಆರುಭೋಗ ಭೂಮಿಗಳಲ್ಲದೆ ಧಾತಕೀಖಂಡದಲ್ಲಿ ೧೨, ಪುಷ್ಕರದ್ವೀಪಾರ್ಧದಲ್ಲಿ ೧೨ ಭೋಗಭೂಮಿಗಳುಂಟು. ಈ ಎರಡುವರೆ ದ್ವೀಪಗಳನ್ನುಳಿದು ಎಲ್ಲ ಸ್ಥಾನವೂ ಭೋಗಭೂಮಿಯಾಗಿದೆ. ಆದರೆ ಅಲ್ಲಿ ಮನುಷ್ಯವಾಸವಿಲ್ಲ. ಅಂತರ ದ್ವೀಪಗಳು ಕು-ಭೋಗಭೂಮಿಗಳು.

## ಮನುಷ್ಯರು.

ಜಂಬೂದ್ವೀಪ, ಧಾತಕೀಖಂಡ, ಪುಷ್ಕರದ್ವೀಪಾರ್ಧ ಈ ಎರಡುವರೆ ದ್ವೀಪ

ಗಳಲ್ಲಿಯೂ, ಲವಣೋದ, ಕಾಲೋದ ಸಮುದ್ರಗಳಲ್ಲಿಯೂ ಮನುಷ್ಯರ ವಾಸ ಸಂಚಾರಗಳುಂಟು. ಮನುಷ್ಯಜಾತಿಯು ಈ ವಾಸ ಪ್ರದೇಶದಲ್ಲಿ ೯೬ ಅಂತರ್ದ್ವೀಪಗಳುಂಟು. ಈ ಅಂತರ್ದ್ವೀಪದ ನಿವಾಸಿಗಳು ಕುಭೋಗಭೂಮಿಜರು. ಅವರಲ್ಲಿ ಕೆಲವರು ವಾನರಾಕೃತಿಗಳೂ ಕೆಲವರು ಅಶ್ವಮುಖರೂ ಉಂಟು. ಅವರೆಲ್ಲರು ಮ್ಲೇಚ್ಛರು.

ಮನುಷ್ಯಜಾತಿಯಲ್ಲಿ ಆರ್ಯ, ಮ್ಲೇಚ್ಛ ಎಂಬ ಎರಡು ವರ್ಗಗಳು. ಆರ್ಯ ಖಂಡದಲ್ಲಿ ಆರ್ಯರು ಹುಟ್ಟುವರು. ಆದರೆ ಆರ್ಯ ಖಂಡದಲ್ಲಿರುವ ಶಕ-ಭಿಲ್ಲ ಮೊದಲಾದ ಜಾತಿಗಳು ಮ್ಲೇಚ್ಛರು. ಆರ್ಯರಲ್ಲಿ ಕಾಶಿ ಮೊದಲಾದ ಪವಿತ್ರ ಕ್ಷೇತ್ರಗಳಲ್ಲಿ ಹುಟ್ಟುವ ಕ್ಷೇತ್ರಾರ್ಯರು, ಇಕ್ಷ್ವಾಕು ಮೊದಲಾದ ಉತ್ತಮಕುಲದಲ್ಲಿ ಜನಿಸುವ ಜಾತ್ಯಾರ್ಯರು, ವಾಣಿಜ್ಯಾದಿಗಳಿಂದ ಉಪಜೀವಿಸುವ ಸಾವದ್ಯಕರ್ಮಾರ್ಯರು, ಗೃಹಿಶ್ರಾವಕರಾಗಿ ಸಂಯಮಾಸಂಯಮಧಾರಿಗಳಾಗಿರುವ ಅಲ್ಪಸಾವದ್ಯಕರ್ಮಾರ್ಯರು, ಪೂರ್ಣಸಂಯಮಿ-ಸಾಧುಗಳಾದ ಅಸಾವದ್ಯಕರ್ಮಾರ್ಯರು, ಪವಿತ್ರ ಚರಿತ್ರರಾಗಿ ಮೋಕ್ಷಮಾರ್ಗದಲ್ಲಿರುವ ಚರಿತ್ರಾರ್ಯರು, ಸಮ್ಯಗ್ದರ್ಶನಾಧಿಕಾರಿಗಳಾದ ದರ್ಶನಾರ್ಯರು, ಎಂಬ ವರ್ಗಗಳುಂಟು ಇವಲ್ಲದೆ ಬುದ್ಧಿ, ಕ್ರಿಯೆ, ತಪಸ್ಸು, ಬಲ, ಔಷಧ, ರಸ, ಕ್ಷೇತ್ರ, ವಿಕ್ರಿಯೆ ಈ ಎಂಟು ವಿಷಯಗಳಲ್ಲಿ ಋದ್ಧಿಯನ್ನು ಹೊಂದಿದವರೂ ಆರ್ಯರೆನಿಸುವರು.

ಹೈಮವತ, ಹರಿವರ್ಷ, ದೇವಕುರು ಇವುಗಳಲ್ಲಿ ವಾಸಿಸುವ ಮನುಷ್ಯರಿಗೆ ಕ್ರಮವಾಗಿ ೧, ೨, ೩ ಪಲ್ಯ ಆಯುಷ್ಯವು ವಿದೇಹದ ಮನುಷ್ಯರ ಆಯುಷ್ಯವು ೧ಕೋಟಿ ಪೂರ್ವ. ಇದು ಪರಮಾಯುಷ್ಯವು. ಜಘನ್ಯಾಯುಷ್ಯವು ಅಂತರ್ಮುಹೂರ್ತಪರಿಮಿತವು. ಇವರ ಎತ್ತರವು ೫೦೦ ಬಿಲ್ಲು. ಉಳಿದ ಮನುಷ್ಯರ ಮತ್ತು ತಿರ್ಯಂಚಗಳ ಪರಮಾಯುಷ್ಯವು ೩ ಪಲ್ಯ ಪರಿಮಿತವು. ಜಘನ್ಯಾಯುಷ್ಯವು ಅಂತರ್ಮುಹೂರ್ತ ಪರಿಮಿತವು.

## ಊರ್ಧ್ವಲೋಕ.

ವೈಮಾನಿಕ ದೇವರು ವಾಸಿಸುವ ಲೋಕವು ಊರ್ಧ್ವಲೋಕವು. ಸುಮೇರುಪರ್ವತದ ಶಿಖರದಿಂದ ಊರ್ಧ್ವಲೋಕದ ಪ್ರಾರಂಭವಾಗುವುದು. ಊರ್ಧ್ವಲೋಕದಲ್ಲಿ ೧೬ ಕಲ್ಪಗಳು ಇಲ್ಲವೆ ಸ್ವರ್ಗಗಳುಂಟು:- ೧ ಸೌಧರ್ಮಕಲ್ಪ, ಉತ್ತರಕ್ಕೆ ಹಬ್ಬಿದೆ. ೨ ಈಶಾನಕಲ್ಪ-ದಕ್ಷಿಣಕ್ಕಿರುವುದು. ಈ ಎರಡು ಕಲ್ಪಗಳ ಮೇಲ್ಗಡೆಗೆ ಕ್ರಮದಿಂದ ೩ ಸನತ್ಕುಮಾರಕಲ್ಪ, ೪ ಮಾಹೇಂದ್ರಕಲ್ಪ ಎಂಬವೆರಡು ಇರುವುವು. ಮುಂದೆ ೫ ಬ್ರಹ್ಮಕಲ್ಪ, ೬ ಬ್ರಹ್ಮೋತ್ತರಕಲ್ಪಗಳು; ಇವುಗಳ ಮೇಲ್ಗಡೆಗೆ ೭ ಲಾಂತವ, ೮ ಕಾಪಿಷ್ಠ ಎಂಬ ಕಲ್ಪಗಳಿರುವುವು. ಇವುಗಳ

ಮೇಲ್ಗಡೆಗೆ ೯ ಶುಕ್ರಕಲ್ಪ, ೧೦ ಮಹಾಶುಕ್ರಕಲ್ಪಗಳಿರುವುವು. ಇವುಗಳ ಮೇಲೆ ೧೧ ಶತಾರ ೧೨ ಸಹಸ್ರಾರಕಲ್ಪಗಳು; ಇವುಗಳ ಮೇಲೆ ೧೩ ಆನತ ೧೪ ಪ್ರಾಣತ ಕಲ್ಪಗಳು. ಇವುಗಳ ಮೇಲೆ ೧೫ ಆರಣ ೧೬ ಅಚ್ಯುತ ಕಲ್ಪಗಳು ಉಂಟು ಈ ಹದಿನಾರು ಕಲ್ಪಗಳನ್ನು ೧೨ ಜನ ಇಂದ್ರರು ಆಳುವರು. ಸೌಧರ್ಮೇಂದ್ರ, ಈಶಾನೇಂದ್ರ, ಸನತ್ಕುಮಾರೇಂದ್ರ, ಮಾಹೇಂದ್ರೇಂದ್ರ ಇವರು ಮೊದಲಿನ ನಾಲ್ಕು ಕಲ್ಪಗಳ ಒಡೆಯರು. ಬ್ರಹ್ಮ, ಬ್ರಹ್ಮೋತ್ತರ ಕಲ್ಪಗಳಿಗೆ ಬ್ರಹ್ಮೇಂದ್ರನು ಒಡೆಯನು. ಲಾಂತವೇಂದ್ರನು ೭ನೆಯ ೮ನೆಯ ಕಲ್ಪಗಳಿಗೆ ಒಡೆಯನು. ಶುಕ್ರ, ಮಹಾಶುಕ್ರಗಳು ಶುಕ್ರೇಂದ್ರನಿಂದ ಆಳಲ್ಪಡುವುವು. ಶತಾರ ಇಂದ್ರನು ೧೧ನೆಯ ೧೨ನೆಯ ಕಲ್ಪಗಳ ಒಡೆಯನು. ಆನತೇಂದ್ರ, ಪ್ರಾಣತೇಂದ್ರ, ಆರಣೇಂದ್ರ, ಅಚ್ಯುತೇಂದ್ರರು ಕ್ರಮವಾಗಿ ಕೊನೆಯ ನಾಲ್ಕು ಸ್ವರ್ಗಗಳ ಒಡೆಯರು. ಈ ಕಲ್ಪಗಳ ಆಚೆಗೆ ಗ್ರೈವೇಯಕವೆಂಬ ವಿಮಾನವುಂಟು. ಅದರ ಮೇಲ್ಗಡೆಗೆ ಅನುದಿಶವಿಮಾನವೂ ಅನುದಿಶವಿಮಾನದ ಆಚೆಗೆ ಅನುತ್ತರ ವಿಮಾನವೂ ಉಂಟು. ಈ ವಿಮಾನಗಳಲ್ಲಿ ಪಟಲಗಳೆಂಬ ಭಾಗಗಳುಂಟು. ಗ್ರೈವೇಯಕ, ಅನುದಿಶ, ಅನುತ್ತರ ವಿಮಾನಗಳಲ್ಲಿಯೂ ಹಲವು (೬ ) ಪಟಲಗಳುಂಟು

ಮೇಲೆ ಹೇಳಿದ ೧೬ ಕಲ್ಪಗಳಲ್ಲಿ ೫೨ ಪಟಲಗಳುಂಟು. ಪ್ರತಿಪಟಲದಲ್ಲಿ ಇಂದ್ರಕ, ಶ್ರೇಣೀಬದ್ಧ, ಪ್ರಕೀರ್ಣಕಗಳೆಂಬ ೩ ವಿಮಾನಗಳಿರುವುವು ಅನುತ್ತರ ವಿಮಾನದ ಸರ್ವಾರ್ಥಸಿದ್ಧಿ ಎಂಬ ಪಟಲ (ವಿಮಾನ)ಕ್ಕೆ ಪ್ರಕೀರ್ಣಕವಿಮಾನಗಳಿಲ್ಲ; ಅದರ ನಾಲ್ಕು ದಿಕ್ಕುಗಳಲ್ಲಿ ವಿಜಯ, ವೈಜಯಂತ, ಜಯಂತ, ಅಪರಾಜಿತ ಎಂಬ ನಾಲ್ಕು ಶ್ರೇಣೀಬದ್ಧ ವಿಮಾನಗಳುಂಟು.

ಗ್ರೈವೇಯಕದ ವರೆಗಿನ ೧೬ ಸ್ವರ್ಗಗಳಿಗೆ ಕಲ್ಪಗಳೆಂಬ ಹೆಸರು. ಆವುಗಳ ಮೇಲಿನ ನವಗ್ರೈವೇಯಕಾದಿ ವಿಮಾನಗಳಿಗೆ ಕಲ್ಪಾತೀತಗಳೆಂಬ ಹೆಸರು.

## ದೇವತೆಗಳು.

ದೇವತೆಗಳಲ್ಲಿ ಮುಖ್ಯವಾಗಿ ಭವನವಾಸಿ, ವ್ಯಂತರವಾಸಿ, ಜ್ಯೋತಿಷ್ಕ, ವೈಮಾನಿಕ ಎಂಬ ನಾಲ್ಕು ವರ್ಗಗಳು. ಮೊದಲಿನ ಮೂರು ವರ್ಗಗಳ ದೇವರು ಕೃಷ್ಣ ನೀಲ, ಕಾಪೋತ, ಪೀತ ಲೇಶ್ಯೆಗಳುಳ್ಳವರು. ಹದಿನಾರನೆಯ ಸ್ವರ್ಗದವರೆಗೆ ಈ ನಾಲ್ಕು ತೆರದ ದೇವತೆಗಳಲ್ಲಿ ಕ್ರಮದಿಂದ ೧೦, ೮, ೫, ೧೨ ಭೇದಗಳುಂಟು. ಎಂದರೆ ಭವನವಾಸಿಗಳಲ್ಲಿ ೧೦, ವ್ಯಂತರರಲ್ಲಿ ೮, ಜ್ಯೋತಿಷ್ಕರಲ್ಲಿ ೫ ಕಲ್ಪವಾಸಿ ವೈಮಾನಿಕರಲ್ಲಿ ೧೨ ಭೇದಗಳು. ಈ ನಾಲ್ಕು ಪ್ರಕಾರದ ದೇವತೆಗಳಲ್ಲಿ ಇಂದ್ರ, ಸಾಮಾನಿಕ, ತ್ರಾಯಸ್ತ್ರಿಂಶ, ಪಾರಿಷದ, ಆತ್ಮರಕ್ಷ, ಲೋಕಪಾಲ, ಅನೀಕ, ಪ್ರಕೀರ್ಣಕ, ಆಭಿಯೋಗ್ಯ, ಕಿಲ್ಬಿಷಿಕ ಎಂದು ಹತ್ತು ಭೇದಗಳುಂಟು

ಇಂದ್ರರು ಇತರ ದೇವತೆಗಳಿಗೆ ಇಲ್ಲದ ಐಶ್ವರ್ಯವುಳ್ಳವರು. ಅವರು ದೇವತೆಗಳ ರಾಜರು. ಇಂದ್ರರಿಗಿಂತ ಐಶ್ವರ್ಯದಲ್ಲಿ ನ್ಯೂನರಾಗಿ ಇಂದ್ರರಿಗೂ ಪೂಜ್ಯರಾದ ದೇವತೆಗಳು ಸಾಮಾನಿಕರು. ಮಂತ್ರಿ, ಪುರೋಹಿತರಂತೆ ಇಂದ್ರರಿಗೆ ಪ್ರಿಯರಾಗಿರುವ ೩೩ ದೇವತೆಗಳಿಗೆ ತ್ರಾಯಸ್ತ್ರಿಂಶರೆನ್ನುವರು. ಇಂದ್ರರ ಬಾಹ್ಯ, ಅಭ್ಯಂತರ, ಮಧ್ಯಗಳೆಂಬ ಮೂರೂ ಸಭೆಗಳಲ್ಲಿ ಕುಳಿತುಕೊಳ್ಳಲು ಯೋಗ್ಯರಾದ ದೇವತೆಗಳು ಪಾರಿಷದರು. ಇಂದ್ರ ಸಭೆಯಲ್ಲಿ ಅವರ ಹಿಂದೆ ಶಸ್ತ್ರಧಾರಿಗಳಾಗಿ ನಿಲ್ಲುವ ದೇವತೆಗಳು ಆತ್ಮರಕ್ಷರು ದುರ್ಗಪಾಲರಂತಿರುವ ದೇವತೆಗಳು ಲೋಕಪಾಲರು. ಪತ್ತಿ, ಅಶ್ವ, ರಥ, ಹಸ್ತಿ, ಗಂಧರ್ವ, ನರ್ತಕಿ ಈ ಏಳು ತರದ ರೂಪಗಳನ್ನು ಧರಿಸುವ ಸೈನಿಕ ದೇವತೆಗಳು ಅನೀಕರೆನಿಸುವರು. ಪ್ರಜೆಗಳಂತಿರುವವರು ಪ್ರಕೀರ್ಣಕರು. ಸೇವಕರಂತೆ ಆನೆ ಕುದುರೆ ಮೊದಲಾದ ವಾಹನರೂಪವನ್ನು ಧರಿಸಿ ಇಂದ್ರಸೇವೆ ಮಾಡುವವರು ಆಭಿಯೋಗ್ಯರೆನಿಸುವರು. ದೂರದಲ್ಲಿ ನಿಲ್ಲುವವರೂ, ಇಂದ್ರಾದಿದೇವತೆಗಳಿಂದ ಆದರ ಹೊಂದದವರೂ ಹೊರಗೇ ನಿಲ್ಲುವವರೂ ಕಿಲ್ಬಿಷಿಕ ದೇವತೆಗಳೆನಿಸುವರು.

ವ್ಯಂತರ ಮತ್ತು ಜ್ಯೋತಿಷ್ಕ ದೇವರಲ್ಲಿ ತ್ರಾಯಸ್ತ್ರಿಂಶ, ಲೋಕಪಾಲ ಎಂಬ ವರ್ಗಗಳನ್ನು ಬಿಟ್ಟು ಉಳಿದ ಎಂಟು ವರ್ಗಗಳ ದೇವತೆಗಳಿರುವರು.

ಭವನವಾಸಿ, ವ್ಯಂತರವಾಸಿ ದೇವತೆಗಳಲ್ಲಿ ಇಂದ್ರರು ಇಬ್ಬಿಬ್ಬರು ಎಂದರೆ ಹತ್ತುತರದ ಭವನವಾಸಿ ದೇವರಲ್ಲಿ ೨೦ ಜನ ಇಂದ್ರರು, ಎಂಟು ತರದ ವ್ಯಂತರರಲ್ಲಿ ೧೬ ಜನ ಇಂದ್ರರು ಇರುವರು.

ಭವನವಾಸಿ ದೇವತೆಗಳಲ್ಲಿ ಅಸುರಕುಮಾರ, ನಾಗಕುಮಾರ, ವಿದ್ಯುತ್ಕುಮಾರ, ಸುಪರ್ಣಕುಮಾರ, ಅಗ್ನಿಕುಮಾರ, ವಾತಕುಮಾರ, ಸ್ತನಿತಕುಮಾರ, ಉದಧಿಕುಮಾರ, ದ್ವೀಪಕುಮಾರ, ದಿಕ್ಕುಮಾರ ಎಂದು ಹತ್ತು ಪ್ರಕಾರಗಳು. ವ್ಯಂತರರಲ್ಲಿ ಕಿನ್ನರ, ಕಿಂಪುರುಷ, ಮಹೋರಗ, ಗಂಧರ್ವ, ಯಕ್ಷ, ರಾಕ್ಷಸ, ಭೂತ, ಪಿಶಾಚ ಎಂದು ಎಂಟು ವರ್ಗಗಳು ಜ್ಯೋತಿಷ್ಕರಲ್ಲಿ ಸೂರ್ಯ, ಚಂದ್ರ, ಗ್ರಹ, ನಕ್ಷತ್ರ, ಪ್ರಕೀರ್ಣಕತಾರಕ ಎಂದು ಐದು ಪ್ರಕಾರಗಳು. ಜ್ಯೋತಿಷ್ಕ ದೇವತೆಗಳೆಲ್ಲ ಮನುಷ್ಯಲೋಕದಲ್ಲಿ ಎಂದರೆ ಎರಡುವರೆ ದ್ವೀಪಗಳಲ್ಲಿ ಮೇರು ಪ್ರದಕ್ಷಿಣೆ ಮಾಡುವ ನಿತ್ಯಗತಿಯುಳ್ಳವರು. ಇವರಿಂದಲೇ ಅಲ್ಲಿ ಹಗಲಿರುಳು, ಗಳಿಗೆ, ಪಳ ಮೊದಲಾದ ಕಾಲ ವಿಭಾಗವು. ಎರಡುವರೆ ದ್ವೀಪಗಳ ಹೊರಗಿರುವ ಸೂರ್ಯಚಂದ್ರಾದಿ ಜ್ಯೋತಿಷ್ಕರು ಸ್ಥಿರರು.

ವಿಮಾನಗಳು. ಪುಣ್ಯವಂತರ ವಾಸಸ್ಥಾನಗಳು. ೮೪೯೭೦೨೩ ವಿಮಾನಗಳುಂಟು. ಅವು ಅಸಂಖ್ಯಯೋಜನೆ ವಿಸ್ತೀರ್ಣವಾಗಿವೆ. ವಿಮಾನವಾಸಿಗಳಾದ

ವೈಮಾನಿಕ ದೇವರಲ್ಲಿ ಕಲ್ಪೋಪಪನ್ನರೆಂದೂ ಕಲ್ಪಾತೀತರೆಂದೂ ಎರಡು ವರ್ಗಗಳು. ಕಲ್ಪಾತೀತದೇವತೆಗಳಲ್ಲಿ ಭೇದಗಳಿಲ್ಲ ಅಲ್ಲಿ ಎಲ್ಲರೂ ಇಂದ್ರರೇ ಆದರಿಂದ ಅವರಿಗೆ ಅಹಮಿಂದ್ರ ಎಂಬ ಹೆಸರು.

ಭವನವಾಸಿ, ವ್ಯಂತರ, ಜ್ಯೋತಿಷ್ಕ, ಸೌಧರ್ಮವಾಸಿ, ಐಶಾನವಾಸಿ ದೇವತೆಗಳು ಮನುಷ್ಯರಂತೆ ಶರೀರದಿಂದ ಕಾಮಸೇವನ ಮಾಡುವರು. ಸನತ್ಕುಮಾರ ಮಹೇಂದ್ರವಾಸಿಗಳು ದೇವೀಸ್ಪರ್ಶಮಾತ್ರದಿಂದ ಕಾಮತೃಪ್ತಿ ಹೊಂದುವರು. ಬ್ರಹ್ಮ ಬ್ರಹ್ಮೋತ್ತರ ಲಾಂತಕ, ಕಾಪಿಷ್ಟವಾಸಿಗಳು ದೇವಿಯರ ಶೃಂಗಾರ, ಸೌಂದರ್ಯಗಳನ್ನು ನೋಡಿಯೇ ತೃಪ್ತಿಹೊಂದುವರು. ಶುಕ್ರ, ಮಹಾಶುಕ್ರ, ಶತಾರ, ಸಹಸ್ರಾರವಾಸಿಗಳು ದೇವಿಯರೊಡನೆ ಪ್ರೇಮಭಾಷಣ ಅವರ ಸಂಗೀತ ಇವುಗಳಿಂದ ತೃಪ್ತಿ ಹೊಂದುವರು. ಆನತ ಪ್ರಾಣತ ಆರಣ ಅಚ್ಯುತ ವಾಸಿಗಳು ದೇವಿಯರೊಡನೆ ಪರಸ್ಪರ ಚಿಂತನಮಾತ್ರದಿಂದ ತೃಪ್ತಿಹೊಂದುವರು. ನವಗ್ರೈವೇಯಕಾದಿ ೩೦೯ ವಿಮಾನಗಳು, ೯ ಅನುದಿಶವಿಮಾನಗಳು, ೫ ಅನುತ್ತರ ವಿಮಾನಗಳು, ಇವುಗಳಲ್ಲಿರುವ ದೇವರಿಗೆ ಕಾಮಪೀಡೆಯೇ ಇಲ್ಲ. ದೇವತೆಗಳು ಮುಕ್ತಜೀವರಲ್ಲ ಸುಕರ್ಮಫಲದಿಂದ ಅವರಿಗೆ ಉತ್ತಮೋತ್ತಮ ಭೋಗಗಳು ದೊರೆಯುವುವು. ಅವರಿಗೆ ಜನ್ಮ ಮರಣಗಳುಂಟು. ಮನುಷ್ಯಾದಿ ಜೀವರ ಶರೀರಗಳಲ್ಲಿ ಘಟಕವಾಗಿರುವ ಉಪಾದಾನಗಳಿಂದಲೇ ದೇವಶರೀರಗಳು ನಿರ್ಮಿತವಾಗಿವೆ. ಸುರತವ್ಯಾಪಾರದಲ್ಲಿ ಅವರಿಗೆ ವೀರ್ಯಸ್ಖಲನವಿಲ್ಲ. ದೇವಿಯರಿಗೆ ಗರ್ಭಧಾರಣವಿಲ್ಲ. ದೇವರು ಮಾತೃಗರ್ಭದಿಂದ ಹುಟ್ಟುವುದಿಲ್ಲ.

೫ನೆಯ ಬ್ರಹ್ಮಸ್ವರ್ಗದ ಕೊನೆಯ ಭಾಗಕ್ಕೆ ಬ್ರಹ್ಮಲೋಕವೆಂದೆನ್ನುವರು. ಅಲ್ಲಿ ವಾಸಿಸುವ ದೇವತೆಗಳಿಗೆ ಲೌಕಾಂತಿಕರೆಂದೆನ್ನುವರು. ಅವರು ಒಂದು ಜನ್ಮದ ತರುವಾಯ ಮೋಕ್ಷವನ್ನೈದುವರು. ಅರ್ಹಂತರ ಪರಿನಿರ್ವಾಣ (ದೀಕ್ಷಾ) ಕಲ್ಯಾಣದಲ್ಲಿ ಈ ದೇವತೆಗಳೇ ಉತ್ಸವವನ್ನು ಮಾಡುವುದಕ್ಕೆ ಬರುವರು. ಬೇರೆ ಸಮಯಗಳಲ್ಲಿ ಅವರು ಬರುವುದಿಲ್ಲ. ಇವರಲ್ಲಿ ಸಾರಸ್ವತ, ಆದಿತ್ಯ ವಹ್ನಿ, ಅರುಣ, ಗರ್ದತೋಯ, ತುಷಿತ, ಅವ್ಯಾಬಾಧ, ಅರಿಷ್ಟ ಎಂದು ಎಂಟು ವರ್ಗಗಳುಂಟು. ವಿಜಯಾದಿ ನಾಲ್ಕು ವಿಮಾನಗಳಲ್ಲಿರುವ ದೇವರು ಎರಡು ಜನ್ಮಗಳನ್ನೆತ್ತಿ ಮುಕ್ತರಾಗುವರು.

## ಜ್ಯೋತಿಷ್ಕ ದೇವರು.

ಭೂತಲದ ಮೇಲಿನ ವಿಶಾಲವಾದ ಮಧ್ಯಮಲೋಕಾಕಾಶದಲ್ಲಿ ಜ್ಯೋತಿಷ್ಕರು ವಾಸಿಸುವರು. ಭೂತಲದಿಂದ ಮೇಲೆ ೭೯೦ ಯೋಜನದೊಳಗಿನ ಆಕಾಶದಲ್ಲಿ ಯಾವ ಜ್ಯೋತಿಷ್ಕರೂ ವಾಸಿಸುವುದಿಲ್ಲ. ಅದಕ್ಕೂ ಮೇಲೆ ತಾರಾಗಣವಿವು

ವುದು. ಭೂತಲದಿಂದ ೮ ೦ಯೋಜನಗಳ ಮೇಲೆ ಸೂರ್ಯ ವಿಮಾನವುಂಟು. ಸೂರ್ಯನಿಂದ ೮೦ ಯೋಜನಗಳ ಮೇಲೆ ಚಂದ್ರನು. ಚಂದ್ರನಿಂದ ೩ ಯೋಜನದ ಮೇಲ್ಗಡೆಗೆ ನಕ್ಷತ್ರಗಣವಿರುವದು. ನಕ್ಷತ್ರಸ್ಥಾನದಿಂದ ೩ ಯೋಜನದ ಮೇಲೆ ಬುಧಗ್ರಹವು, ಬುಧನಿಂದ ೩ ಯೋಜನ ದೂರದಲ್ಲಿ ಬೃಹಸ್ಪತಿ, ಬೃಹಸ್ಪತಿಯಿಂದ ೪ ಯೋಜನಗಳ ಮೇಲೆ ಮಂಗಲನು, ಮಂಗಲನಿಂದ ನಾಲ್ಕು ಯೋಜನಗಳಮೇಲೆ ಶನೈಶ್ಚರನು ಇರುವರು. ಈ ಪ್ರಕಾರ ನೆಲದಿಂದ ೯೯೦ ಯೋಜನಗಳ ಮೇಲೆ ೧೧೦ ಯೋಜನ ಅವಕಾಶದಲ್ಲಿ ಜ್ಯೋತಿಶ್ಚಕ್ರವುಂಟು ಸೂರ್ಯವಿಮಾನವು ಕಾದ ಚಿನ್ನದ ಬಣ್ಣದ್ದು. ಅರ್ಧಗೋಲಾಕಾರವಾಗಿದೆ. ೧೬ ಸಾವಿರ ಸೇವಕರು ಅದನ್ನು ಹೊತ್ತಿರುವರು.

ದೇವತೆಗಳ ಪರಮಾಯುಷ್ಯವು ೧ ಸಾಗರದಿಂದ ೩೩ ಸಾಗರದವರೆಗಿರುವುದು.

ದೇವ, ನಾರಕ, ಮನುಷ್ಯ ಇವರ ಹೊರತು ಉಳಿದ ಜೀವಗಳು ತಿರ್ಯಂಚಗಳು. ಈ ನಾಲ್ಕು ಜನ್ಮಗಳಿಗೆ ಚತುರ್ಗತಿಗಳೆಂಬ ಹೆಸರು. ಸೂಕ್ಷ್ಮವಾದ ಏಕೇಂದ್ರಿಯ ಜೀವಗಳು ಸಂಪೂರ್ಣ ಲೋಕವನ್ನೆಲ್ಲ ತುಂಬಿರುವುವು. ಲೋಕದ ಯಾವ ಭಾಗವೂ ಈ ಸೂಕ್ಷ್ಮಜೀವಗಳಿಂದ ತುಂಬದೆ ಇಲ್ಲ.

## ಸಿದ್ಧಲೋಕ.

ಸರ್ವಾರ್ಥ ಸಿದ್ಧಿಯಿಂದ ಮೇಲೆ ೧೨ ಯೋಜನದಂತರದಲ್ಲಿ ಕಡುಬಿಳಿಸೂ, ಬಟ್ಟೆತೂ ಆಗಿ ಬೆಳ್ಗೊಡೆಯಂತೆ ಶೋಭಿಸುವ ಸಿದ್ಧಶಿಲೆಯೆಂಬುದಿರುವುದು. ಅದು ೪೫ ಲಕ್ಷಯೋಜನ ವಿಶಾಲವಾಗಿದೆ. ಆ ಶಿಲೆಯ ಮೇಲೆ ಘನೋದಧಿ, ಘನಾನಿಲ ತನು ಎಂಬ ಮೂರು ವಾತವಲಯಗಳುಂಟು. ಅವುಗಳಾಚೆಗೆ ಅಕಾಶವಲ್ಲದೆ ಮತ್ತೇನೂ ಇಲ್ಲ. ಕಡೆಯ ವಾತವಲಯದಲ್ಲಿ ಜೀವನ ಊರ್ಧ್ವಗಮನಸ್ವಭಾವವನ್ನನುಸರಿಸಿ ಅಲ್ಲಿಗೆ ಹೋದ ಜ್ಞಾನಿಗಳೂ ಪರಮ ಪವಿತ್ರರೂ ಸರ್ವಕರ್ಮನಿರ್ಮುಕ್ತರೂ ಆದ ಸಿದ್ಧರು ಕಾಯೋತ್ಸರ್ಗ, ಇಲ್ಲವೆ ಪರ್ಯಂಕಾಯತ ಎಂಬ ಎರಡು ಆಸನಗಳಲ್ಲಿದ್ದು ಕೇವಲಜ್ಞಾನದರ್ಶನಗಳಿಂದ ಕೂಡಿದವರಾಗಿ ಮೋಕ್ಷ ಸುಖಾತಿಶಯದಲ್ಲಿ ನಿಮಗ್ನರಾಗಿರುವರು, ಮುಕ್ತರ ಶರೀರವು ಮೂರುವರೆ ಮೊಳದಿಂದ ಐನೂರಿಪ್ಪತ್ತೈದು ಬಿಲ್ಲುಗಳವರೆಗೆ ಎತ್ತರವಾಗಿರುವದು. ಶರೀರಗಳು ಹೀಗೆ ಹಿರಿಕಿರಿಯವಾಗಿದ್ದರೂ ಹೊಳೆಯನ್ನು ಹಾಯ್ದು ಹೋಗುವ ಕರು ಹೋರಿ ಎತ್ತುಗಳ ಶಿರಗಳಂತೆ ಸಿದ್ಧರ ಶಿರಗಳು ಒಂದೇ ಸರಿತ(ಸಾತಳಿ)ದಲ್ಲಿರುವವು. ಸಿದ್ಧರ ಚಿನ್ಮಯ ಶರೀರಗಳು ತಮ್ಮತಮ್ಮೊಳಗೆ ಒಂದರೊಳಗೊಂದು ಸೇರಿಕೊಂಡರೂ ಅವರಿಗೆ ಉಬ್ಬಸ ಮೊದಲಾದ ತೊಂದರೆಯೇನೂ ಇಲ್ಲ. ಅವರಿಗೆ ಬೋಧವೇ ಶರೀರವು; ಇಂದ್ರಿಯಗಳಿಲ್ಲದಿದ್ದರೂ ಸುಖವು ಪರಿಪೂರ್ಣವಾಗಿರುವುದು.

ಜ್ಞಾನಗೋಚರರಾಗುವುದರಿಂದ ಸಿದ್ಧರು ಸಾಕಾರರೆಂದೂ ಇಂದ್ರಿಯಗಳಿಗೆ ಗೋಚರರಾಗದುದರಿಂದ ನಿರಾಕಾರರೆಂದೂ ಹೇಳಬಹುದು.

ಸಂಸಾರಿ ದಶೆಯಲ್ಲಿ ಜೀವನಿಗೆ ಜ್ಞಾನಾವರಣಾದಿ ಕರ್ಮಗಳ ಸಂಬಂಧವಿರುವುದರಿಂದ ಆಗ ಎಲ್ಲ ಜ್ಞೇಯ ವಸ್ತುಗಳು ಗೋಚರವಾಗುವುದಿಲ್ಲ; ಸ್ವಲ್ಪವುಟ್ಟಿಗೆ ಜ್ಞಾನವಾಗುತ್ತಿದ್ದರೂ ಅವಕ್ಕೆ ಪುದ್ಗಲ ದ್ರವ್ಯಗಳು ಎಂದರೆ ಇಂದ್ರಿಯಗಳು ಆವಶ್ಯಕ. ಆದರೆ ಆ ಕರ್ಮಗಳ ಸಂಬಂಧವಿಲ್ಲದಂತಾಗಲು ಜೀವನ ಚೇತನಾ(ಜ್ಞಾನ) ಶಕ್ತಿಯು ಸರ್ವ ವಸ್ತುಗಳಲ್ಲಿ ಒಂದೇ ಕಾಲಕ್ಕೆ ಸಂಚರಿಸುವ ತನ್ನ ಸ್ವಭಾವವನ್ನು ಹೊಂದುವುದು. ಇದನ್ನೇ ಆತ್ಮನ ಸರ್ವಜ್ಞತ್ವವೆಂದೂ, ಸರ್ವದರ್ಶಿತ್ವವೆಂದೂ ಹೇಳುವರು. ಸಿದ್ಧಾತ್ಮರಿಗೆ ಶುಭಾಶುಭಕರ್ಮಜನಿತಸುಖದುಃಖಭೋಕ್ತೃತ್ವವು ಇಲ್ಲದಂತಾಗುವುದು. ಆದುದರಿಂದ ಅವರು ನಿರುಪಾಧಿಕ (ವಿಷಯನಿರಪೇಕ್ಷ) ಸ್ವರೂಪಾನುಭವರೂಪವಾದ ಸುಖವನ್ನು ಭೋಗಿಸುವರು.

ಜೀವದ್ರವ್ಯವು ಅವಿಭಾಜ್ಯವಾದ ಒಂದೇ ದ್ರವ್ಯವಾಗಿದೆ. ಅದು ತನ್ನ ಅನಂತಾನಂತ ಪ್ರದೇಶಗಳಿಂದ ಸಮುದ್ಘಾತದೊಳಗಿನ ಲೋಕಪೂರಣಾವಸ್ಥೆಯಲ್ಲಿ ಸರ್ವಲೋಕವನ್ನು ವ್ಯಾಪಿಸುವುದು. ಎಲ್ಲ ಜೀವದ್ರವ್ಯಗಳೂ ಈ ಮೇರೆಗೆ ಸರ್ವಲೋಕವನ್ನು ವ್ಯಾಪಿಸಬಲ್ಲುವು. ಜೀವನ ಪ್ರದೇಶಗಳೆಂದರೆ ಮತ್ತೆ ವಿಭಾಗ ಮಾಡಲಿಕ್ಕೆ ಬಾರದಂತಹ ಪರಮಾಣುವಿನಂತಹ ಭಾಗಗಳು. ಇವು ಅಸಂಖ್ಯವಾಗಿರುವುವು. ಜೀವನ ಪ್ರದೇಶಗಳು ಅಸಂಖ್ಯವಾಗಿದ್ದರೂ ಸಂಸಾರಿಜೀವನು ತನಗೆ ಪ್ರಾಪ್ತವಾದ ಶರೀರವನ್ನು ಮಾತ್ರ ತನ್ನ ಪ್ರದೇಶಗಳಿಂದ ವ್ಯಾಪಿಸುವನು. ಹಾಲಿನ ಪಾತ್ರೆಯಲ್ಲಿದ್ದ ಪದ್ಮರಾಗಮಣಿಯ ಕಾಂತಿಯು ಆ ಹಾಲಿನಲ್ಲೆಲ್ಲ ಪಸರಿಸುವುದು. ಆ ಹಾಲನ್ನು ಕಾಸಲು ಅದು ಉಕ್ಕೇರಿ ಹೆಚ್ಚಾದಾಗ ಆ ಮಣಿಯ ಕಾಂತಿಯೂ ಆ ಹಾಲನ್ನೆಲ್ಲ ಪಸರಿಸಿದಂತೆ ಕಾಣಿಸುವುದು, ಆ ಹಾಲು ಕಡಿಮೆಯಾದರೆ ಆ ಮಣಿಯ ಕಾಂತಿಯೂ ಸ್ವಲ್ಪ ಪ್ರದೇಶವನ್ನು ವ್ಯಾಪಿಸಿದಂತೆ ಕಾಣಿಸುವುದು. ಹಾಗೆಯೇ ಜೀವನು ವಾಸಿಸಿದ ಶರೀರವು ಪುಷ್ಟವಾದರೆ ಜೀವನ ಪ್ರದೇಶಗಳು ಹೆಚ್ಚುವುವು; ಶರೀರವು ಕೃಶವಾದರೆ ಜೀವನ ಪ್ರದೇಶಗಳು ಕಡಿಮೆಯಾಗುವುವು. ಇದೇ ಮೇರೆಗೆ ಸಣ್ಣದೊಡ್ಡ ಶರೀರಗಳನ್ನು ಹೊಂದಿದಾಗಲೂ ಜೀವನ ಪ್ರದೇಶಗಳು ಸಂಕೋಚವಿಸ್ತಾರಗಳನ್ನು ಹೊಂದುವುವು.

ಸಂಸಾರಿ ಜೀವರಿಗಿದ್ದಂತೆ ಸಿದ್ಧಜೀವರಿಗೆ ಶರೀರ ಸಂಬಂಧವಿಲ್ಲ; ಆದರೆ ಅವರಲ್ಲಿ ಪ್ರಾಣಧಾರಣಮಾಡುವ (ಭಾವಪ್ರಾಣ) ಜೀವಸ್ವಭಾವವು ಇದ್ದೇ ಇರುವುದು.

---

# ಅಜೀವ ತತ್ತ್ವ ೨

ಚೇತನ ಭಿನ್ನವಾದುದು– ಚೇತನಾರಹಿತವಾದುದು– ಅಜೀವವು ಅಜೀವವೆಂಬುದು ವೇದಾಂತಿಗಳು. ಹೇಳುವ ಮಾಯೆಯಲ್ಲ ಮಾಯೆಗೆ ಸ್ವಾಧೀನ ಸತ್ತೆಯು ಎಂದರೆ ಬ್ರಹ್ಮಾತಿರಿಕ್ತ ಸತ್ತೆಯು ಇಲ್ಲ ಆದರೆ ಅಜೀವವು ಜೀವವಂತೆ ಸ್ವಾಧೀನವೂ ಅನಾದ್ಯನಂತವೂ ಆಗಿದೆ ಅಜೀವವು ಸಾಂಖ್ಯರ ಪ್ರಕೃತಿಯೂ ಅಲ್ಲ ಪ್ರಕೃತಿಯು ಸ್ವಾಧೀನವೂ ಅನಾದ್ಯನಂತವೂ ಆಗಿದ್ದರೂ ಅದು ಏಕವು. ಆದರೆ ಅಜೀವವು ಅನೇಕವಾಗಿದೆ ನೈಯಾಯಿಕ ವೈಶೇಷಿಕರ ಪರಮಾಣುವೂ ಅಜೀವವೂ ಒಂದೇ ಅಲ್ಲ. ಏಕೆಂದರೆ ಜೈನರ ಅಜೀವ ತತ್ತ್ವದಲ್ಲಿ ಪರಮಾಣುವೊಂದೇ ಅಲ್ಲದೆ ಬೇರೆ ಪ್ರಕಾರಗಳೂ ಉಂಟು. ಬೌದ್ಧರ ಶೂನ್ಯವೂ ಅಜೀವವಲ್ಲವೆಂಬುದು ಸಹಜವದೆ.

ಅಜೀವ ತತ್ತ್ವದಲ್ಲಿ ಪುದ್ಗಲ, ಧರ್ಮ, ಅಧರ್ಮ ಆಕಾಶ, ಕಾಲ ಎಂದು ಐದು ಪ್ರಕಾರಗಳು. ಈ ಐದು ಅಜೀವಗಳು ಮತ್ತು ಜೀವ ಈ ಆರಕ್ಕೆ ದ್ರವ್ಯಗಳೆಂದು ಹೇಳುವರು. ಈ ಆರರಲ್ಲಿ ಕಾಲವೊಂದನ್ನುಳಿದ ಐದಕ್ಕೆ ಪಂಚಾಸ್ತಿಕಾಯಗಳೆಂದು ಹೆಸರು.

ಧರ್ಮಾ ಧರ್ಮಾವಥಾಕಾಶಸ್ತಥಾ ಕಾಲಶ್ಚ ಪುದ್ಗಲಾಃ ।
ಅಜೀವಾಃಖಲು ಪಂಚೈತೇ ನಿರ್ದಿಷ್ಟಾಃ ಸರ್ವದರ್ಶಿಭಿಃ ॥
ಏತೇ ಧರ್ಮಾದಯಃ ಪಂಚ ಜೀವಾಶ್ಚಪ್ರೋಕ್ತಲಕ್ಷಣಾಃ ।
ಷಡ್ ದ್ರವ್ಯಾಣಿ ನಿಗದ್ಯಂತೇ ದ್ರವ್ಯಯಾಥಾತ್ಮ್ಯವೇದಿಭಿಃ ॥
ವಿನಾಕಾಲೇನ ಶೇಷಾಣಿ ದ್ರವ್ಯಾಣಿ ಜಿನಪುಂಗವೈಃ ।
ಪಂಚಾಸ್ತಿಕಾಯಾಃ ಕಥಿತಾಃ ಪ್ರದೇಶಾನಾಂ ಬಹುತ್ವತಃ ॥

ತತ್ತ್ವಾರ್ಥಸಾರ. ೩; ೨–೪

ದ್ರವ್ಯದ ಸ್ವರೂಪ– " ದ್ರವ್ಯಂ ಸಮುತ್ಪಾದ ವ್ಯಯ ಧ್ರೌವ್ಯಲಕ್ಷಣಂ"– ಉತ್ಪತ್ತಿ ವಿನಾಶ ಧ್ರುವತ್ವಗಳೆಂಬ ಲಕ್ಷಣವುಳ್ಳುದು ದ್ರವ್ಯವೆನಿಸುವುದು. ಸ್ವಸ್ವರೂಪವನ್ನು ಬಿಡದೆ ಭಾವಾಂತರವನ್ನು ಹೊಂದುವುದೇ ಇಲ್ಲಿ ಉತ್ಪತ್ತಿಯು. ಭಾವಾಂತರವನ್ನು ಹೊಂದುವಾಗ ಪೂರ್ವಭಾವದ ತ್ಯಾಗವೇ ವಿನಾಶವು ಅನಾದಿ ಸ್ವಭಾವಕವಾದ ದ್ರವ್ಯದಲ್ಲಿ ಉತ್ಪತ್ತಿ ವಿನಾಶಗಳು ಕಂಡು ಬಾರದಿರುವುದೇ ಧ್ರೌವ್ಯವು. ದ್ರವ್ಯದ ಈ ಸಾಮಾನ್ಯ ಲಕ್ಷಣವು ಚೇತನದ್ರವ್ಯ(ಜೀವ) ಅಚೇತನ ದ್ರವ್ಯಗಳೆರಡಕ್ಕೂ ಅನ್ವಯಿಸುವುದು.

ದವ್ವಂ ಸಲ್ಲಕ್ಖಣಿಯಂ । ಉಪ್ಪಾದವ್ವಯಧುವತ್ತಸಂಜುತ್ತಂ ।
ಗುಣಪಜ್ಜಯಾಸಯಂವಾ । ಜಂ ತಂ ಭಣಂತಿ ಸವ್ವಣ್ಹಾ ॥
ಪಂಚಾಸ್ತಿಕಾಯ ಸಮಯಸಾರ.

— ಸದ್ರೂಪವಾದುದು– ಎಂದರೆ ಸತ್ತಾಯುಕ್ತವಾದುದು ದ್ರವ್ಯವು. ಇಲ್ಲವೆ ಉತ್ಪತ್ತಿಸ್ಥಿತಿನಾಶಗಳಿಂದ ಯುಕ್ತವಾದುದು ದ್ರವ್ಯವು; ಇಲ್ಲವೆ ಗುಣ ಪರ್ಯಾಯಗಳಿಗೆ ಆಶ್ರಯವಾದುದು ದ್ರವ್ಯವು.

ಸದ್‌ವಸ್ತುಗಳ ಧರ್ಮಕ್ಕೆ ಸತ್ತೆ ಎಂದು ಹೆಸರು. ಸದ್‌ವಸ್ತುಗಳೆಂದರೆ ಉತ್ಪತ್ತಿಸ್ಥಿತಿನಾಶಗಳುಳ್ಳುವು. ಆದುದರಿಂದ ಸದ್ವಸ್ತುಗಳ ಧರ್ಮವು ಅಥವಾ ಸತ್ತೆ ಎಂದರೆ ಉತ್ಪತ್ತಿ ಸ್ಥಿತಿನಾಶಗಳೆಂದಂತಾಗುವುದು. ಇದರಿಂದ ಸತ್ತಾಯುಕ್ತವಾದುದು ಎಂಬುದೂ, ಉತ್ಪತ್ತಿಸ್ಥಿತಿನಾಶಗಳಿಂದ ಯುಕ್ತವಾದುದು ಎಂಬುದೂ ಒಂದೇ ಲಕ್ಷಣವಾಗಿವೆ.

ದ್ರವ್ಯದ ದ್ರವ್ಯತ್ವವನ್ನು ಹೋಗಗೊಡದೆ ಕ್ರಮದಿಂದ ಉತ್ಪನ್ನವಾಗುವ ಉತ್ತರೋತ್ತರ ಪರ್ಯಾಯಗಳಲ್ಲಿ ಪೂರ್ವ ಪೂರ್ವ ಪರ್ಯಾಯವು ಇಲ್ಲದಂತಾಗುವುದು ನಾಶವು. ಹೊಸ ಪರ್ಯಾಯದ ಪ್ರಕಟತೆಯೇ ಉತ್ಪತ್ತಿಯು. ಮೃತ್ತಿಕೆಯು ಘಟಪರ್ಯಾಯರೂಪವನ್ನು ಹೊಂದಿದಾಗ ಕಪಾಲಪರ್ಯಾಯವು ಇಲ್ಲದಂತಾಗುವುದರಿಂದ ಅಲ್ಲಿ ಕಪಾಲರೂಪ ದ್ರವ್ಯದ ನಾಶವೂ, ಘಟರೂಪ ದ್ರವ್ಯದ ಉತ್ಪತ್ತಿಯೂ ಆದಂತಾಯಿತು. ಕಪಾಲನಾಶವಾದಾಗಲೂ ಘಟೋತ್ಪತ್ತಿಯಾದಾಗಲೂ ಮೃತ್ತಿಕೆಯ ಮೃತ್ತಿಕಾತ್ವವು ಸ್ಥಿರವಾಗಿ ಉಳಿಯುವುದೇ ಸ್ಥಿತಿಯೆನಿಸುವುದು.

"ಗುಣಪರ್ಯಾಯಗಳಿಗೆ ಆಶ್ರಯವಾದದು" ಎಂಬುದು ದ್ರವ್ಯದ ಮೂರನೆಯ ಲಕ್ಷಣವು. ಅನೇಕಾಂತಾತ್ಮಕ ವಸ್ತುಗಳಲ್ಲಿ ಯಾವಾಗಲೂ ಕಂಡುಬರುವ ವಿಶೇಷ ಧರ್ಮಗಳೇ ಗುಣಗಳು; ಯಾವಾಗಲೋ ಒಮ್ಮೆ ಇರುವ ಧರ್ಮಗಳೇ ಪರ್ಯಾಯಗಳು. ಉದಾ:– ವರ್ಣರಸಗಂಧ ಸ್ಪರ್ಶಗಳೆಂಬಿವು ಪುದ್ಗಲದ ಗುಣಗಳಾದುದರಿಂದ ಅವು ಪುದ್ಗಲದಲ್ಲಿ ಯಾವಾಗಲೂ ಇರುವುವು. ಬೇರೆ ಬೇರೆ ತರದ ಆಕೃತಿಗಳು ದ್ರವ್ಯದ ಪರ್ಯಾಯಗಳು. ಆ ಹಲವು ಆಕೃತಿಗಳು ದ್ರವ್ಯದಲ್ಲಿ ಏಕಕಾಲದಲ್ಲಿ ಕಂಡು ಬರುವುದಿಲ್ಲ. ಒಂದು ಆಕೃತಿಯು ಹೋದಮೇಲೆಯೇ ಇನ್ನೊಂದು ಆಕೃತಿಯು ಪ್ರಕಟವಾಗುವುದು.

ದ್ರವ್ಯಕ್ಕೆ ಹೇಳಿದ ಮೇಲಿನ ಮೂರು ಲಕ್ಷಣಗಳಲ್ಲಿ ಯಾವುದೊಂದನ್ನು ಹೇಳಿದರೂ ಉಳಿದ ಎರಡನ್ನೂ ಹೇಳಿದಂತೆಯೇ ಆಗುವುದು. ಏಕೆಂದರೆ– ದ್ರವ್ಯದಲ್ಲಿ ಉತ್ಪತ್ತಿಸ್ಥಿತಿನಾಶಗಳು ಸಂಭವಿಸಬೇಕಾದರೆ ದ್ರವ್ಯವು ಗುಣ, ಪರ್ಯಾಯಗ

ಳಿಂದ ಯುಕ್ತವಾದುದು ಇರಲೇಬೇಕು. ದ್ರವ್ಯವು 'ಸತ್' ಎಂದು ಹೇಳಿದರೆ ಅದು ಉತ್ಪತ್ತಿಸ್ಥಿತಿನಾಶಗಳಿಂದ ಯುಕ್ತವಾದುದೆಂದೂ, ಗುಣ ಪರ್ಯಾಯಗಳಿಂದ ಯುಕ್ತವಾದುದೆಂದೂ ಹೇಳಿದಂತಾಗುವುದು. ಉತ್ಪತ್ತಿಸ್ಥಿತಿನಾಶಗಳಿಂದ ಯುಕ್ತವಾದುದೆಂದು ಹೇಳಿದರೆ ಸದ್ರೂಪವೆಂದೂ, ಗುಣಪರ್ಯಾಯಯುಕ್ತವೆಂದೂ ಹೇಳಿದಂತಾಗುವುದು. ಗುಣಪರ್ಯಾಯಯುಕ್ತವೆಂದು ಹೇಳಿದರೆ ಸದ್ರೂಪವೆಂದೂ, ಉತ್ಪತ್ತಿ ಸ್ಥಿತಿನಾಶಯುಕ್ತವೆಂದೂ ಹೇಳಿದಂತಾಗುವುದು.

ಜೀವವು ಒಂದು ದ್ರವ್ಯವಾದುದರಿಂದ ಮೇಲೆ ಹೇಳಿದ ದ್ರವ್ಯಲಕ್ಷಣದ ಮೇರೆಗೆ ಜೀವನಿಗೂ ಪಾರಮಾರ್ಥಿಕ ಉತ್ಪತ್ತಿವಿನಾಶಗಳಿಲ್ಲ. ಮೃತ್ತಿಕೆಯು ಘಟ ಪರ್ಯಾಯವನ್ನು ಹೊಂದಿದಾಗ ಘಟೋತ್ಪತ್ತಿಯಾಯಿತೆಂದೂ, ಘಟವು ಒಡೆದು ಕಪಾಲಪರ್ಯಾಯವನ್ನು ಹೊಂದಿದಾಗ ಘಟನಾಶವಾಯಿತೆಂದೂ ಹೇಳಿದರೂ ಮೃತ್ತಿಕಾರೂಪದಲ್ಲಿ ಹೇಗೆ ಉತ್ಪತ್ತಿನಾಶಗಳಿಲ್ಲವೋ ಹಾಗೆ ಜೀವನು ಮನುಷ್ಯಗತಿಯನ್ನು ಬಿಟ್ಟು ದೇವಗತಿಯನ್ನು ಹೊಂದಿದಾಗಲೂ, ಮತ್ತೆ ದೇವಗತಿಯನ್ನು ಬಿಟ್ಟು ತಿರ್ಯಗ್ಗತಿಯನ್ನು ಹೊಂದಿದಾಗಲೂ ಉತ್ಪತ್ತಿನಾಶಗಳಾದಂತೆ ಕಂಡು ಬಂದರೂ ಜೀವನ ಜೀವತ್ವವು ಯಾವಾಗಲೂ ಉಳಿವುದರಿಂದ ಆತನಿಗೆ ನಿಜವಾಗಿ ಉತ್ಪತ್ತಿ ವಿನಾಶಗಳಿಲ್ಲ. ಆಧುನಿಕ ವೈಜ್ಞಾನಿಕರೂ ಪದಾರ್ಥವು ಅವಿನಾಶಿ ಎಂದು ಹೇಳುವರು. ಯಾವ ದ್ರವ್ಯವೂ ಹೊಸದಾಗಿ ಹುಟ್ಟುವುದೂ ಇಲ್ಲ; ನಾಶಹೊಂದುವುದೂ ಇಲ್ಲ; ಒಂದು ಪರ್ಯಾಯದಿಂದ ಇನ್ನೊಂದು ಪರ್ಯಾಯವನ್ನು ಹೊಂದುತ್ತ ಇರುವುದು. ಇದಕ್ಕೇ ಆಧುನಿಕರು ವಿಕಾಸ ಸಿದ್ಧಾಂತವೆನ್ನುವರು.

ದ್ರವ್ಯವು ಗುಣಗಳಿಗೆ ಆಶ್ರಯವಾದುದು ಎಂದು ಹೇಳುವಾಗ ವ್ಯವಹಾರ ನಯಾನುಸಾರವಾಗಿ ದ್ರವ್ಯಕ್ಕೂ, ಗುಣಗಳಿಗೂ ಭೇದವು ಕಂಡುಬರುವುದಾದರೂ ನಿಶ್ಚಯನಯಾನುಸಾರವಾಗಿ, ದ್ರವ್ಯಕ್ಕೂ ಗುಣಗಳಿಗೂ ಭೇದವಿಲ್ಲ. ದ್ರವ್ಯವೆಂದರೆ ಗುಣಗಳ ಸಮುದಾಯವೇ ಸರಿ. ಗುಣಿ (ದ್ರವ್ಯ), ಗುಣ ಇವುಗಳಲ್ಲಿ ಸರ್ವಥಾ ಭೇದವೇ ಇರುವುದೆಂದರೆ ಒಂದೇ ದ್ರವ್ಯವು ಅಸಂಖ್ಯದ್ರವ್ಯಗಳಾಗಿರುವುದೆಂದು, ಇಲ್ಲವೆ ದ್ರವ್ಯವೇ ಇಲ್ಲವೆಂದು ಹೇಳಬೇಕಾಗುವುದು. ಹೇಗೆಂದರೆ:– ಉದಾಹರಣೆಗಾಗಿ ಒಂದು ಘಟವನ್ನು ತೆಗೆದುಕೊಳ್ಳುವ. ಒಂದು ಘಟವೆಂದರೆ ಅನಂತಪರಮಾಣು ಸಮುದಾಯವು. ಘಟವು ಪುದ್ಗಲದ್ರವ್ಯವಾದುದರಿಂದ ಅದರಲ್ಲಿ ಪುದ್ಗಲದ ಅಸಾಧಾರಣಗುಣಗಳಾದ ರೂಪರಸಗಂಧಸ್ಪರ್ಶಗಳೆಂಬಿವೂ, ಸಾಮಾನ್ಯ ಗುಣಗಳಾದ ವಸ್ತುತ್ವ ಮೊದಲಾದುವೂ ಇರುವುವು. ಈ ಗುಣಗಳು ಘಟದಲ್ಲಿರುವುದರಿಂದ ಘಟದ ಪ್ರತಿಒಂದು ಪ್ರದೇಶದಲ್ಲಿಯೂ

ಇರುವುದೆಂದು ಹೇಳಲೇಬೇಕು ಘಟದ ಗುಣಗಳಿರುವ ಪ್ರತಿ ಒಂದು ಪ್ರದೇಶಕ್ಕೆ ಘಟವೆಂದು ಹೇಳಬೇಕಾಗುವುದು ಇದರಿಂದ ಘಟದ ಪ್ರತಿಒಂದು ಪ್ರದೇಶವು ಘಟವಾದುದರಿಂದ ಘಟದ ಪ್ರದೇಶಗಳು ಇಲ್ಲವೆ ಪರಮಾಣುಗಳು ಎಷ್ಟು ಇರುವವುವೋ ಅಷ್ಟು, ಘಟಗಳೇ ಆದುವೆಂದು ಹೇಳಬೇಕಾಗುವುದು. ದ್ರವ್ಯ, ಗುಣ ಇವುಗಳಲ್ಲಿ ಭೇದವನ್ನಿಟ್ಟುಕೊಂಡುದರಿಂದ ಹೀಗೆ ಹೇಳಬೇಕಾಗುವುದು. ಘಟ, ಮತ್ತು ಅದರ ಗುಣ ಇವು ಭಿನ್ನವಾದಾಗ ಅದರ ಪ್ರತಿಒಂದು ಪ್ರದೇಶದಲ್ಲಿರುವ ಗುಣವು ಆಪ್ರದೇಶದಿಂದ ಭಿನ್ನವಾದಂತಾಯಿತು. ಇದರಿಂದ ಘಟದ ಪ್ರದೇಶಗಳು ಅನಂತವಾಗಿರುವಂತೆ ಅದರ ಪ್ರತಿಒಂದು ಪ್ರದೇಶದಲ್ಲಿರುವ ಗುಣಗಳೂ ಅನಂತವಾದುವು. ಮತ್ತು ಆ ಗುಣಗಳಿರುವುದರಿಂದ ಘಟದ ಆ ಪ್ರತಿಒಂದು ಪ್ರದೇಶವು ಘಟವೇ ಆದುದರಿಂದ ಘಟಗಳು ಅನಂತವಾದುವು:– ಹೀಗೆ ಗುಣಗಳು ದ್ರವ್ಯದಿಂದ ಭಿನ್ನವಾದುವೆಂದು ಹೇಳಿದರೆ ದೋಷವು ಬರುವುದು. ಆದುದರಿಂದ ಗುಣಗಳು ದ್ರವ್ಯದಿಂದ ಕಥಂಚಿತ್ ಅಭಿನ್ನವೆಂದು ಭಾವಿಸಿದರೆ ಈ ದೋಷವು ಬಾರದು. ಏಕೆಂದರೆ ಗುಣ, ದ್ರವ್ಯಗಳು ಅಭಿನ್ನವೆಂದು ತಿಳಿದರೆ ಅವುಗಳಲ್ಲಿ ಆಧಾರಾಧೇಯಭಾವವು ಇಲ್ಲದಂತಾಗುವುದರಿಂದ (ಏಕರೂಪವಾಗುವುದರಿಂದ) ಒಂದು ದ್ರವ್ಯವು ಅನಂತ ದ್ರವ್ಯಗಳೆಂದು ಹೇಳಬೇಕಾಗುವುದಿಲ್ಲ

ಇನ್ನು ಎರಡನೆಯ ದೋಷವೆಂದರೆ ದ್ರವ್ಯವೇ ಇಲ್ಲದಂತಾಗುವುದೆಂಬುದು. ಗುಣಗಳು ದ್ರವ್ಯದಿಂದ ಭಿನ್ನವಾದುವೆಂದು ತಿಳಿದರೆ ದ್ರವ್ಯವೆಂಬುದೇ ಉಳಿಯಲಾರದು. ಹೇಗೆಂದರೆ– ಒಂದು ಧಾನ್ಯದ ರಾಶಿಯೆಂಬುದು ಅಸಂಖ್ಯವಾದ ಕಾಳುಗಳ ಸಮುದಾಯರೂಪವಾಗಿರುವುದೆಂಬುದು ಸ್ಪಷ್ಟವು. ಆ ರಾಶಿಯೂ ಕಾಳುಗಳೂ ಭಿನ್ನವೆಂದು ತಿಳಿದರೆ ಅವು ಅಸಂಖ್ಯ ಕಾಳುಗಳಾದುವೇ ಹೊರತು. ರಾಶಿಯೆಂಬ ವಸ್ತುವೇ ಉಳಿಯಲಿಲ್ಲ. ಇದೇ ಮೇರೆಗೆ ಗುಣಗಳನ್ನು ದ್ರವ್ಯದಿಂದ ಭಿನ್ನಗಳೆಂದು ತಿಳಿದರೆ ಧಾನ್ಯರಾಶಿಯೆಂಬ ವಸ್ತುವಿನಂತೆ ದ್ರವ್ಯವೂ ಇಲ್ಲದಂತಾಗುವುದು. ಆದುದರಿಂದ ಗುಣಗಳು ದ್ರವ್ಯಭಿನ್ನಗಳೆಂದು ಹೇಳುವುದು ಸರಿಯಲ್ಲ.

ಗುಣ ಮತ್ತು ದ್ರವ್ಯ ಇವುಗಳ ಪ್ರದೇಶಗಳು ಬೇರೆ ಬೇರೆ ಇಲ್ಲದ ಕಾರಣದಿಂದಲೂ ಗುಣದ್ರವ್ಯಗಳು ಅಭಿನ್ನವಾಗಿವೆ. ಹೇಗೆಂದರೆ– ಪರಮಾಣುವು ತನ್ನ ಪ್ರದೇಶದಿಂದ ಬೇರೆಯಾಗುವುದಿಲ್ಲ; ಅದರೊಡನೆ ಏಕರೂಪವಾಗಿರುವುದು; ಹಾಗೆಯೇ ಅದು ಸ್ಪರ್ಶರಸಗಂಧವರ್ಣಗಳೆಂಬ ತನ್ನ ಗುಣಗಳಿಂದಲೂ ಬೇರೆಯಾಗಿರಲಾರದು. ಸಂಜ್ಞೆ, ಸಂಖ್ಯೆ, ಲಕ್ಷಣ, ಪ್ರಯೋಜನ ಈ ವಿಷಯಗಳಿಂದ ವ್ಯವಹಾರದಲ್ಲಿ ಗುಣ ದ್ರವ್ಯಗಳ ಭೇದವು ತೋರುತ್ತಿದ್ದರೂ ಕಲ್ಲು ಕಟ್ಟಿ

ಗೆಗಳಲ್ಲಿರುವಂತೆ ಅವುಗಳಲ್ಲಿ ಭೇದವಿಲ್ಲ. ನೀರು ಹಾಲುಗಳು ಮಿಶ್ರವಾಗಲು ಅವು ಏಕರೂಪವೆಂದು ಕಾಣಿಸಿದರೂ ನಿಜವಾಗಿ ಅವುಗಳಲ್ಲಿ ಏಕಪ್ರದೇಶತ್ವವು ಆಗದಿರುವುದರಿಂದ ಅವು ಭಿನ್ನವಾಗಿರುತ್ತವೆ. ದ್ರವ್ಯಗುಣಗಳೂ ಹಾಲುನೀರು ಗಳಂತೆ ಮಿಶ್ರಿತವಾಗಿದ್ದರೆ ಭಿನ್ನ ಪ್ರದೇಶಗಳಾಗುತ್ತಿದ್ದುವು; ಆದರೆ ದ್ರವ್ಯಗುಣಗಳು ಭಿನ್ನ ಪ್ರದೇಶಗಳಾಗಿಲ್ಲ. ಆದುದರಿಂದ ದ್ರವ್ಯಗುಣಗಳಲ್ಲಿರುವ ಅಭೇದವು ಅವುಗಳಲ್ಲಿರುವ ಏಕ ಪ್ರದೇಶತ್ವದಿಂದ ಉಂಟಾಗಿದೆ.

ಸಂಜ್ಞೆ, ಸಂಖ್ಯೆ, ಆಕೃತಿ, ಆಧಾರಾಧೇಯಭಾವ ಇವುಗಳಿಂದ ದ್ರವ್ಯಗುಣಗಳಲ್ಲಿ ಭೇದವನ್ನು ಕಲ್ಪಿಸಬೇಕಾಗುವುದೆಂಬುದೂ ಸರಿಯಲ್ಲ. ಹೇಗೆಂದರೆ "ದ್ರವ್ಯದ ಗುಣಗಳು" ಎಂದು ಮಾತನಾಡುವಾಗ "ದೇವದತ್ತನ ಆಕಳುಗಳು" ಎಂಬಲ್ಲಿ ದೇವದತ್ತನಿಗೂ ಆಕಳುಗಳಿಗೂ ಭೇದವಿರುವಂತೆ ದ್ರವ್ಯಕ್ಕೂ ಗುಣಗಳಿಗೂ ಭೇದವುಂಟೆಂದು ಹೇಳುವುದಾದರೆ ಮರದ ಟೊಂಗೆಗಳು ಎಂದು ಹೇಳುವಾಗ ಮರಕ್ಕೂ ಟೊಂಗೆಗಳಿಗೂ ಭೇದವುಂಟೆಂದು ಹೇಳಬೇಕಾಗುವದು. 'ಮರದ' ಎಂದು ಷಷ್ಠೀವಿಭಕ್ತಿಯ ಪ್ರಯೋಗವಿರುವಂತೆ ದ್ರವ್ಯದ ಎಂದು ಷಷ್ಠೀ ಪ್ರಯೋಗವಿರುವುದರಿಂದ ಅವುಗಳಲ್ಲಿ ಭೇದವಿಲ್ಲ. ಆದುದರಿಂದ ಸಂಜ್ಞೆ ಇಲ್ಲವೆ ವ್ಯಪದೇಶ (ಬೇರೆಯಾಗಿ ಹೇಳುವಿಕೆ)ದಿಂದ ಗುಣಗುಣಿಗಳಲ್ಲಿ ಭೇದವುಂಟೆಂದು ಸಿದ್ಧವಾಗುವುದಿಲ್ಲ.

ಇನ್ನು ಸಂಖ್ಯಾಭೇದದಿಂದ ಗುಣಗುಣಿಗಳಲ್ಲಿ ಭೇದವುಂಟೆಂದು ಕೆಲವರು ಆಕ್ಷೇಪಿಸಬಹುದು. ಹೇಗೆಂದರೆ ಒಬ್ಬ ದೇವದತ್ತನ ಹತ್ತು ಆಕಳುಗಳು ಎಂಬಲ್ಲಿ ದೇವದತ್ತನಿಗೂ ಆಕಳುಗಳಿಗೂ ಭೇದವಿರುವುದರಿಂದಲೇ ದೇವದತ್ತನಲ್ಲಿರುವ ಏಕತ್ವಸಂಖ್ಯೆಯೂ ಆಕಳುಗಳಲ್ಲಿರುವ ದಶತ್ವಸಂಖ್ಯೆಯೂ ಕೂಡುವುದು. ಹೀಗೇಯೇ ಒಂದು ದ್ರವ್ಯದ ನಾಲ್ಕು ಗುಣಗಳು ಎಂದು ಹೇಳಿದಾಗ ದ್ರವ್ಯಕ್ಕೂ, ಗುಣಗಳಿಗೂ ಭೇದವಿದ್ದರೆ ಮಾತ್ರ ದ್ರವ್ಯದಲ್ಲಿ ಏಕತ್ವವೂ ಗುಣಗಳಲ್ಲಿ ಚತುಷ್ಟ್ವವೂ ಕೂಡುವುವು. ಆದುದರಿಂದ ಗುಣಗುಣಿಗಳಲ್ಲಿ ಭೇದವೆಂದು ಹೇಳಿದರೆ ಈ ಮಾತು ಸರಿಯಾಗಲಾರದು. ಏಕೆಂದರೆ ಸಂಖ್ಯಾಭೇದದ ಉಪಪತ್ತಿಗಾಗಿ ಭೇದವನ್ನು ಹೇಳಲೇಬೇಕೆಂದಿಲ್ಲ. ಒಂದು ಮರದ ಹತ್ತು ಶಾಖೆಗಳು ಎಂದು ಹೇಳಿದಾಗ ಮರಕ್ಕೂ ಶಾಖೆಗಳಿಗೂ ಭೇದವಿಲ್ಲದಿದ್ದರೂ ಸಂಖ್ಯಾಭೇದವು ಕಂಡು ಬರುವದಿಲ್ಲವೋ ? 'ಪುಷ್ಟನಾದ ದೇವದತ್ತನ ಪುಷ್ಟವಾದ ಆಕಳು' ಎಂಬ ಪ್ರಯೋಗದಲ್ಲಿ ದೇವದತ್ತನ ಮತ್ತು ಆಕಳ ಆಕೃತಿಯು ಭಿನ್ನವಾಗಿರುವದರಿಂದ ಭೇದದರ್ಶಕ ಪ್ರಯೋಗವು ಕಂಡು ಬರುವುದರಿಂದ ಆಕೃತಿ ಭೇದವು ಗುಣಗುಣಿಭೇದಕ್ಕೆ ಕಾರಣವೆಂದು ಹೇಳಿದರೆ ಎತ್ತರವಾದ ಗಿಡದ ಎತ್ತರವಾದ ಟೊಂಗೆಗಳು ಎಂಬಲ್ಲಿ ಭೇದವಿಲ್ಲದಿದ್ದರೂ ಭೇದಾ

ವಲಂಬಿ ಪ್ರಯೋಗವು ಕಂಡುಬರುವದರಿಂದ ಆಕೃತಿ ಭೇದವು ಗುಣಗುಣಿ ಭೇದಕ್ಕೆ ಸಾಧಕವಾಗುವುದಿಲ್ಲ. ಆದುದರಿಂದ ಮೂರ್ತದ್ರವ್ಯದ ಮೂರ್ತ ಗುಣಗಳು ಎಂಬ ಪ್ರಯೋಗವಿದ್ದರೂ ಅದು ದ್ರವ್ಯ ಗುಣಗಳಿಗೆ ಭೇದವನ್ನು ಸಾಧಿಸಲಾರದು. ಇದೇ ಮೇರೆಗೆ ಆಧಾರಾಧೇಯಭಾವವೂ ಗುಣಗುಣಿ ಭೇದ ಸಾಧಕವಾಗಲಾರದು. ಹಕ್ಕಿಯೊಳಗಿನ ಆಕಳುಗಳು ಎಂದು ಹೇಳುವಾಗ ಹಕ್ಕಿಗೂ ಆಕಳುಗಳಿಗೂ ಭೇದವಿರುವಂತೆ ದ್ರವ್ಯದಲ್ಲಿ ಗುಣಗಳಿರುತ್ತವೆ. ಎಂಬ ವಾಕ್ಯದಲ್ಲಿ ದ್ರವ್ಯ ಗುಣಗಳಿಗೆ ಆಧಾರಧೇಯಭಾವವಿರುವುದರಿಂದ ಭೇದವುಂಟೆಂದು ಹೇಳಿದರೆ 'ಮರದಲ್ಲಿ ಟೊಂಗೆಗಳಿರುತ್ತವೆ' ಎಂಬ ವಾಕ್ಯದಲ್ಲಿ ಮರಕ್ಕೂ ಟೊಂಗೆಗಳಿಗೂ ಭೇದವಿಲ್ಲದಿದ್ದರೂ ಆಧಾರಧೇಯಭಾವದ ಪ್ರಯೋಗವಿರುವುದರಿಂದ ಆಧಾರಾಧೇಯ ಭಾವವು ಗುಣಗುಣಿಭೇದಸಾಧಕವಾಗಲಾರದು.

ಮೇಲಿನ ವಿವರಣೆಯಿಂದ ವ್ಯಪದೇಶ, ಸಂಖ್ಯಾಭೇದ, ಆಕೃತಿಭೇದ, ಆಧಾರಧೇಯ ಭಾವ ಇವುಗಳ ಉಪಪತ್ತಿಗಾಗಿ ಗುಣಗುಣಿಗಳಲ್ಲಿ ಭೇದವನ್ನು ಕಲ್ಪಿಸುವ ಆವಶ್ಯಕತೆಯಿಲ್ಲವೆಂದು ಸಿದ್ಧವಾಗುವುದು. ಇದೇ ಉಪಪತ್ತಿಯಿಂದಲೇ ಜೀವನು ಜ್ಞಾನವುಳ್ಳವನು ಎಂಬ ಮಾತಿನಲ್ಲಿ ಜೀವನಿಗೂ ಜ್ಞಾನಕ್ಕೂ ಭೇದವು ಕಂಡು ಬರುವುದಾದರೂ ಅದು ವಾಸ್ತವವಲ್ಲವೆಂದು ತಿಳಿಯಬೇಕು. ಏಕೆಂದರೆ ಇಲ್ಲಿ ಜ್ಞಾನ ಮತ್ತು ಜೀವ ಇವರಲ್ಲಿ ಇರುವ ಸಂಬಂಧವು ಏಕತ್ವಪ್ರಕಾರಕವಾದುದು. ಮತ್ತು ಜ್ಞಾನ ಜೀವ ಇವರ ಅಸ್ತಿತ್ವವು ಬೇರೆ ಬೇರೆ ಇಲ್ಲ; ಆಕೃತಿಯು (ಸಂಸ್ಥಾನ) ಬೇರೆ ಬೇರೆ ಇಲ್ಲ; ಸಂಖ್ಯೆಯು ಬೇರೆ ಬೇರೆ ಇಲ್ಲ; ಆಶ್ರಯವೂ ಒಂದೇ. ಇಂತಹ ಸಂಬಂಧಕ್ಕೆ ಏಕತ್ವಪ್ರಕಾರಕ ಸಂಬಂಧವೆನ್ನುವರು. ಜ್ಞಾನ ಮತ್ತು ಆತ್ಮ ಇವರಲ್ಲಿ ಸರ್ವಥಾ ಭೇದವುಂಟೆಂದು ಹೇಳುವುದಾದರೆ ಜ್ಞಾನಾತ್ಮಗಳೆರಡೂ ಅಚೇತನಗಳೆಂದು ಒಪ್ಪಬೇಕಾಗುವುದು. ಏಕೆಂದರೆ, ಜ್ಞಾನವು ಆತ್ಮನ ಸ್ವರೂಪ ಭೂತವಲ್ಲದಿದ್ದರೆ ಅದು ಆತ್ಮನಿಗೆ ಕರಣರೂಪವಾಗಿರುವುದರಿಂದ, ಛೇದನ ಕ್ರಿಯೆಯ ಕರಣವಾದ ಕೊಡಲಿಯು ಇಲ್ಲದಾಗ ಪುರುಷನಿಂದ ಛೇದನ ಕ್ರಿಯೆಯು ಹೇಗೆ ಉಂಟಾಗಲಾರದೋ ಹಾಗೆ ಜ್ಞಾನರೂಪ ಸಾಧನವಿಲ್ಲದಾಗ ಆತ್ಮನ ಅನುಭವನಕ್ರಿಯೆಯು ಇಲ್ಲದಂತಾಗಬೇಕಾದೀತು. ಆದರಿಂದ ಆತ್ಮನು ಅಚೇತನನೆನಿಸಬೇಕಾಗುವುದು. ಇನ್ನು ಆತ್ಮನಿಂದ ಜ್ಞಾನವು ಭಿನ್ನವಾದುದೆಂದು ಹೇಳಿದರೆ, ಕೊಡಲಿಗೆ ಪುರುಷನ ಸಂಯೋಗವಿಲ್ಲದಿದ್ದರೆ ಹೇಗೆ ಅದು ಕ್ರಿಯೆಯನ್ನು ಮಾಡಲು ಅಸಮರ್ಥವಾಗುವುದೋ ಹಾಗೆಯೆ ಆತ್ಮನ ಸಾನ್ನಿಧ್ಯವಿಲ್ಲದಾಗ ಜ್ಞಾನವು ತನ್ನಿಂದುಂಟಾಗುವ ಆತ್ಮನ ಅನುಭವನ ಕ್ರಿಯೆಯನ್ನು ಮಾಡಲು ಅಸಮರ್ಥವಾಗುವುದರಿಂದ ವ್ಯರ್ಥವಾಗುವುದು. ಆದುದರಿಂದ ಜ್ಞಾನವು ಆತ್ಮ ಭಿನ್ನವಲ್ಲ

ದ್ರವ್ಯಗಳಲ್ಲಿರುವ ಅನೇಕ ಗುಣಗಳಲ್ಲಿ ಕೆಲವು ಗುಣಗಳು ಎಲ್ಲ ದ್ರವ್ಯಗಳಲ್ಲಿ, ಕೆಲವು ಗುಣಗಳು ಕೆಲವು ದ್ರವ್ಯಗಳಲ್ಲಿ ಮಾತ್ರ ಇರುವುವು. ಎಲ್ಲ ದ್ರವ್ಯಗಳಲ್ಲಿರುವುವು ಸಾಮಾನ್ಯ ಗುಣಗಳೆಂದೂ ಕೆಲವುಗಳಲ್ಲಿ ಮಾತ್ರ ಇರುವವುವು ವಿಶೇಷ ಗುಣಗಳೆಂದೂ ಹೇಳಲ್ಪಡುತ್ತವೆ. ಒಂದೊಂದು ವಸ್ತುವಿಗೆ ಬಂದ ಹಲವು ಹೆಸರುಗಳು ಆ ವಸ್ತುವಿನ ಒಂದೊಂದು ಗುಣವನ್ನು ಹೇಳುತ್ತವೆ. ಅಸ್ತಿತ್ವ, ದ್ರವ್ಯತ್ವ, ವಸ್ತುತ್ವ, ಪ್ರಮೇಯತ್ವ, ಪ್ರದೇಶತ್ವ, ಅಗುರು ಲಘುತ್ವ ಎಂಬಿವು ಸಾಮಾನ್ಯ ಗುಣಗಳು. ದ್ರವ್ಯಕ್ಕೆ ಸ್ಥಿತಿಯನ್ನು ಎಂದರೆ ಸತ್ತೆಯನ್ನು ಉಂಟುಮಾಡುವ ಗುಣವು ಅಸ್ತಿತ್ವವು. ದ್ರವಕ್ಕೆ ಬಂದಿರುವ ಸತ್ ಎಂಬ ಹೆಸರು ಅದರ ಅಸ್ತಿತ್ವವನ್ನು ಹೇಳುವುದು. ದ್ರವ್ಯಕ್ಕೆ ಅವಸ್ಥಾಂತರಗಳನ್ನು ಉಂಟುಮಾಡುವ ಗುಣವು ದ್ರವ್ಯತ್ವವು. ಈ ಗುಣದಿಂದ ದ್ರವ್ಯಕ್ಕೆ ದ್ರವ್ಯವೆಂಬ ಹೆಸರು ಬಂದಿದೆ. ಅರ್ಥ ಕ್ರಿಯಾಕಾರಿತ್ವವನ್ನು ಎಂದರೆ ಪ್ರಯೋಜನ ಭೂತ ಕ್ರಿಯೆಯನ್ನು ಉಂಟು ಮಾಡುವ ಗುಣಕ್ಕೆ (ದ್ರವ್ಯ ಶಕ್ತಿಗೆ) ವಸ್ತುತ್ವವೆಂದು ಹೆಸರು. ಇದರಿಂದ ದ್ರವ್ಯಕ್ಕೆ ವಸ್ತು ಎಂಬ ಹೆಸರು ಬಂದಿದೆ. ಜ್ಞಾನಕ್ಕೆ ವಿಷಯವನ್ನಾಗಿ ಮಾಡುವ ಗುಣವು ಪ್ರಮೇಯತ್ವವು. ಇದರಿಂದ ದ್ರವ್ಯವು ಪ್ರಮೇಯವೆನಿಸಿದೆ. ದ್ರವ್ಯಗಳಲ್ಲಿರುವ ಆಕಾರವಿಶೇಷೋತ್ಪಾದಕಶಕ್ತ್ಯಂಶಕ್ಕೆ ಪ್ರದೇಶತ್ವವೆನ್ನುವರು. ವಸ್ತುವಿನ ವಸ್ತುತ್ವಕ್ಕೆ ಭಂಗಬಾರದಂತೆ ನೀರೊಳಗಿನ ತೆರೆಗಳಂತೆ ಸ್ವಸ್ವರೂಪದಲ್ಲಿಯೇ ಪರಿಣಾಮ ಹೊಂದುವ ಗುಣವು ಅಗುರುಲಘುತ್ವವು.

**ಪುದ್ಗಲ**-- ಆಂಗ್ಲ ಭಾಷೆಯಲ್ಲಿ ಮ್ಯಾಟರ್ (Matter) ಎಂಬುದಕ್ಕಿರುವ ಅರ್ಥವೇ ಪುದ್ಗಲ ಶಬ್ದಕ್ಕಿರುವುದು. ಪುದ್ಗಲಕ್ಕೆ ನಾಲ್ಕು ಪರ್ಯಾಯಗಳುಂಟು ಅವು . ಸ್ಕಂಧ, ಸ್ಕಂಧದೇಶ, ಸ್ಕಂಧಪ್ರದೇಶ, ಪರಮಾಣು; ಅನಂತ ಪರಮಾಣುಗಳು ಒಂದೆಡೆಗೆ ಸೇರಲು ಉಂಟಾಗುವ ಪಿಂಡಕ್ಕೆ ಪುದ್ಗಲ ಸ್ಕಂಧವೆನ್ನುವರು. ಸ್ಕಂಧದ ಅರ್ಧಭಾಗಕ್ಕೆ ಸ್ಕಂಧದೇಶವೆಂದೂ, ಸ್ಕಂಧದೇಶದ ಅರ್ಧಭಾಗಕ್ಕೆ ಸ್ಕಂಧ ಪ್ರದೇಶವೆಂದೂ ಹೆಸರು. ಒಂದು ಸ್ಕಂಧ ಪ್ರದೇಶವನ್ನೆ ಸ್ಕಂಧವೆಂದು ತಿಳಿದರೆ ಅದರ ಅರ್ಧಕ್ಕೆ ಮತ್ತೆ ಸ್ಕಂಧದೇಶವೆಂದೂ, ಅದರ ಅರ್ಧಕ್ಕೆ ಸ್ಕಂಧಪ್ರದೇಶವೆಂದೂ ಹೇಳುವರು. ಮತ್ತೆ ಈ ಸ್ಕಂಧಪ್ರದೇಶಕ್ಕೆ ಸ್ಕಂಧವೆಂದು ತಿಳಿದು ಮತ್ತೆ ಅದರ ಭಾಗಗಳನ್ನು ಹೇಳಬಹುದು. ಈ ಮೇರೆಗೆ ವಿಭಾಗಿಸುತ್ತ ಒಂದು ದ್ವ್ಯಣುಕ (ಒಂದಕ್ಕೊಂದು ಹತ್ತಿದ ಪರಮಾಣು ದ್ವಯ)ದ ವರೆಗೆ ಸ್ಕಂಧ, ದೇಶ, ಪ್ರದೇಶ ಎಂಬ ಅನಂತ ಪರ್ಯಾಯಗಳು ಆಗುವುವು. ದ್ವ್ಯಣುಕದೊಳಗಿನ ಒಂದು ಅಂಶವನ್ನು ವಿಭಾಗಿಸಲು ಬಾರದುದರಿಂದ ಅದು ಪುದ್ಗಲಪರಮಾಣುವೆನಿಸುವುದು. ಇವು ಸ್ಕಂಧದ

ವಿಭಾಗದಿಂದ ಉಂಟಾಗುವ ಪರ್ಯಾಯಗಳು. ಇದೇ ಮೇರೆಗೆ ಎರಡು ಪರ ಮಾಣುಗಳು ಸೇರಿ ಒಂದು ದ್ವ್ಯಣುಕ ಸ್ಕಂಧವೂ, ಮತ್ತೆ ಅವಕ್ಕೆ ಪರಮಾಣು ಗಳು ಸೇರುತ್ತ ಹೋಗುವುದರಿಂದ ಬೇರೆಬೇರೆ ಪರ್ಯಾಯಗಳೂ ಆಗುವುವು. ಇವು ಸಂಘಾತದಿಂದ ಉಂಟಾಗುವ ಪರ್ಯಾಯಗಳು. ಸಂಘಾತ ಮತ್ತು ವಿಭಾ ಗ ಈ ಎರಡು ರೀತಿಗಳಿಂದಲೂ ಪುದ್ಗಲ ಪರ್ಯಾಯಗಳು ಉಂಟಾಗುವುವು ಸಂಘಾತದಿಂದ ಉಂಟಾಗುವ ಪರ್ಯಾಯಕ್ಕೆ ಸ್ಕಂಧವೆಂಬ ಒಂದೇ ಹೆಸರು. ವಿಭಾಗದಿಂದ ಉಂಟಾಗುವ ಪರ್ಯಾಯಗಳಿಗೆ ಸ್ಕಂಧ, ಸ್ಕಂಧದೇಶ, ಸ್ಕಂಧ ಪ್ರದೇಶ ಎಂಬ ಹೆಸರುಗಳುಂಟು ಪುದ್ಗಲವೆಂದರೆ ಪೂರಣ (ವೃದ್ಧಿ) ಗಲನ (ಹಾನಿ) ಗಳು ಯಾವುದಕ್ಕೆ ಉಂಟೋ ಇಲ್ಲವೆ ಯಾವುದು ಎರಡನೆಯದರ ವೃದ್ಧಿ ಹಾನಿಗಳನ್ನುಂಟು ಮಾಡುವುದೋ ಅದು ಪುದ್ಗಲವು, ಎಂಬ ಅರ್ಥವುಂಟು.

ಸ್ಪರ್ಶ, ರಸ, ಗಂಧ, ವರ್ಣಗಳೆಂಬಿವು ಪುದ್ಗಲಗುಣಗಳು; ಸ್ಪರ್ಶವು ಮೃದು, ಕಠಿಣ, ಲಘು, ಗುರು, ಶೀತ, ಉಷ್ಣ, ಸ್ನಿಗ್ಧ, ರುಕ್ಷ ಎಂದು ಎಂಟು ತೆರನಾಗಿದೆ. ರಸವು ಮಧುರಾಮ್ಲಲವಣತಿಕ್ತ ಕಷಾಯಗಳೆಂದು ಐದು ವಿಧ ವಾಗಿದೆ. ಗಂಧವು ಸುಗಂಧ ದುರ್ಗಂಧ ರೂಪವಾಗಿ ಎರಡು ಬಗೆಯಾಗಿದೆ. ವರ್ಣವು ಕೃಷ್ಣ, ನೀಲ, ಪೀತ, ಶುಕ್ಲ ಲೋಹಿತವೆಂದು ಐದು ವಿಧವಾಗಿದೆ.

ಪುದ್ಗಲ ಸ್ಕಂಧಗಳಲ್ಲಿ ಬಾದರಬಾದರ, ಬಾದರ, ಬಾದರಸೂಕ್ಷ್ಮ, ಸೂಕ್ಷ್ಮ ಬಾದರ, ಸೂಕ್ಷ್ಮ, ಸೂಕ್ಷ್ಮಸೂಕ್ಷ್ಮ ಎಂದು ಆರು ಪ್ರಕಾರಗಳುಂಟು. ಒಂದರಿಂದೊಂದು ವಿಭಾಗ ಹೊಂದಿದ ಪುದ್ಗಲಗಳು ತಾವಾಗಿ ಏಕರೂಪವಾಗ ದಿರುವ ಪುದ್ಗಲಗಳು ಬಾದರ ಬಾದರಗಳು. ಉದಾ- ಕಟ್ಟಿಗೆ ಕಲ್ಲು ಮೊದಲಾ ದುವುಗಳ ಪುದ್ಗಲಗಳು ವಿಭಾಗ ಹೊಂದಿ ಮತ್ತೆ ಏಕರೂಪವಾಗುವ ಪುದ್ಗಲಗಳು ಬಾದರಗಳು. ಉದಾ- ಹಾಲು, ಎಣ್ಣೆ, ನೀರು ಮುಂ. ಸ್ಥೂಲರೂಪವಾಗಿ ಕಂಡರೂ ಯಾವ ಪುದ್ಗಲಗಳನ್ನು ಛೇದಿಸಲಿಕ್ಕೂ ಅವುಗಳಲ್ಲಿ ಛಿದ್ರವನ್ನು ಮಾಡುವುದಕ್ಕೂ ಅವುಗಳನ್ನು ಹಿಡಿಯುವದಕ್ಕೂ ಬರುವದಿಲ್ಲವೋ ಅವು ಬಾದರ ಸೂಕ್ಷ್ಮಗಳು ಉದಾ- ನೆಳಲು, ಸೂರ್ಯಪ್ರಕಾಶ, ಬೆಳ್ದಿಂಗಳು, ಕತ್ತಲೆ ಮುಂ. ಸೂಕ್ಷ್ಮವಾಗಿದ್ದರೂ ಸ್ಥೂಲದಂತೆ ತೋರುವುವು ಸೂಕ್ಷ್ಮಬಾದರಗಳು. ಉದಾ- ಸ್ಪರ್ಶ, ರಸ, ಗಂಧ, ವರ್ಣ, ಶಬ್ದಗಳು. ಸೂಕ್ಷ್ಮವಾಗಿದ್ದು ಇಂದ್ರಿಯಗಳಿಗೆ ಗೋಚ ರವಾಗದಂತಹುವು ಸೂಕ್ಷ್ಮಗಳು ಉದಾ- ಕರ್ಮ ವರ್ಗಣ (ಕರ್ಮ ಪುದ್ಗಲ ಸಮುದಾಯ) ಮುಂ. ಕರ್ಮವರ್ಗಣೆಗಿಂತ ಸೂಕ್ಷ್ಮವಾದುವುಗಳಿಗೆ ಸೂಕ್ಷ್ಮ ಸೂಕ್ಷ್ಮ ಎಂಬ ಹೆಸರು. ಉದಾ- ಕರ್ಮ ವರ್ಗಣಾ ಸ್ಕಂಧಕ್ಕಿಂತ ಕೆಳಗಿನ ತರಗತಿಯ ಸ್ಕಂಧಗಳಿಂದ ದ್ವ್ಯಣುಕದವರೆಗಿನ ಎಲ್ಲ ಸ್ಕಂಧಗಳು.

ಪರಮಾಣುವು ನಿತ್ಯವು. ಮತ್ತು ಅದು ಮೂರ್ತವು. ರೂಪ ರಸ ಗಂಧ ಸ್ಪರ್ಶಗಳೆಂಬ ವಿಶೇಷ ಗುಣಗಳಿಗೆ ಮೂರ್ತಿಯೆನ್ನುವರು. ಈ ಮೂರ್ತಿಯುಳ್ಳದಾದುದರಿಂದ ಅದು ಮೂರ್ತವು ಆದರೆ ಈ ಗುಣಗಳು ಪರಮಾಣುವಿನಿಂದ ಭಿನ್ನವಾದುವಲ್ಲ; ಪರಮಾಣು ಸ್ವರೂಪವಾಗಿವೆ. ಪರಮಾಣುಗಳು ಒಂದೇ ಜಾತಿಯವು, ಎಂದರೆ ಪೃಥ್ವೀ ಪರಮಾಣುಗಳು ಬೇರೆ, ಜಲ ಪರಮಾಣುಗಳು ಬೇರೆ ಹೀಗೆ ಇಲ್ಲ. ಪರಮಾಣುಗಳ ಪರಿಣಾಮಗಳು ಬಹಳ ವಿಲಕ್ಷಣವಾಗಿರುವುದರಿಂದ ಅವುಗಳಿಂದ ಪೃಥ್ವಿ, ಜಲ, ತೇಜೋವಾಯುಗಳೆಂಬ ಭಿನ್ನ ಭಿನ್ನ ಧಾತುಗಳುಂಟಾಗುವುವು. ಪರಮಾಣುವು ಶಬ್ದರಹಿತವಾದುದು. ಏಕೆಂದರೆ ಪರಮಾಣುವು ಏಕ ಪ್ರದೇಶವುಳ್ಳದು; * ಶಬ್ದವು ಅನೇಕ ಪ್ರದೇಶಗಳುಳ್ಳದು. ಆದುದರಿಂದ ಏಕಪ್ರದೇಶವುಳ್ಳ ಪರಮಾಣುವಿನಲ್ಲಿ ಅನೇಕ ಪ್ರದೇಶವುಳ್ಳ ಶಬ್ದವು ಇರಲಾರದು. ಶಬ್ದವು ಶಬ್ದ ಜನನಕ್ಕೆ ಅನುಕೂಲವಾದ ಪುದ್ಗಲಸ್ಕಂಧಗಳು ಒಂದಕ್ಕೊಂದು ಆಘಾತ ಹೊಂದಲು ಉತ್ಪನ್ನವಾಗುವುದರಿಂದ ಅದು ಪುದ್ಗಲಸ್ಕಂಧದ ಪರಿಣಾಮವಾಗಿದೆ. ಈ ಆಘಾತಕ್ಕೆ ಬಾಹ್ಯ ಸಾಧನಗಳ ಆವಶ್ಯಕತೆಯುಂಟು.

ಶಬ್ದವು ಪ್ರಾಯೋಗಿಕ, ವೈಸ್ರಸಿಕ (ಸ್ವಾಭಾವಿಕ) ಎಂದು ಎರಡು ವಿಧವಾಗಿದೆ. ಮನುಷ್ಯ ಮೊದಲಾದ ಪ್ರಾಣಿಗಳಿಂದ ಉಂಟಾಗುವುದು ಪ್ರಾಯೋಗಿಕವು, ಮೇಘಾದಿಗಳಿಂದ ಉಂಟಾಗುವುದು ವೈಸ್ರಸಿಕವು. ಶಬ್ದವು ಭಾಷಾತ್ಮಕವೆಂದೂ ಅಭಾಷಾತ್ಮಕವೆಂದೂ ಮತ್ತೆ ಎರಡು ವಿಧವು. ಭಾಷಾತ್ಮಕವು ಅಕ್ಷರಾತ್ಮಕ,' ಅನಕ್ಷರಾತ್ಮಕ ಎಂದು ಎರಡು ವಿಧ. ಅಕ್ಷರಾತ್ಮಕವು ಪ್ರಸಿದ್ಧವಾದುದು; ಕೇವಲಿಯ ದಿವ್ಯಧ್ವನಿಯು ಅನಕ್ಷರಾತ್ಮಕವು.

ಪರಮಾಣುವು ಸಂಖ್ಯೆಯ ಪ್ರಕಾರವನ್ನು ತೋರಿಸುವುದಾಗಿದೆ. ಅದು ತನ್ನ ಏಕ ಪ್ರದೇಶದಿಂದ ಸ್ಕಂಧದಲ್ಲಿ ಸೇರುವುದರಿಂದ ತನ್ನ ಒಂದು ಈ ಸಂಖ್ಯೆಯಿಂದ ಮುಂದೆ ಎರಡು, ಮೂರು, ಹೀಗೆ ಸಂಖ್ಯೆಯನ್ನುಂಟು ಮಾಡುವದು. ಹೀಗೆ ಪರಮಾಣುಗಳ ಸಂಯೋಗದಿಂದ ಉಂಟಾದ ಈ ಸಂಖ್ಯೆಗೆ ದ್ರವ್ಯ ಸಂಖ್ಯೆಯೆನ್ನುವರು. ಪರಮಾಣುವು ತನ್ನ ಏಕಪ್ರದೇಶದ ಗತಿರೂಪ ಪರಿಣಾಮದಿಂದ ಕಾಲ ಸಂಖ್ಯೆಯನ್ನುಂಟು ಮಾಡುವುದು. ಏಕ ಪ್ರದೇಶಿಯಾದ ಪರಮಾಣುವು ಆಕಾಶದಲ್ಲಿ ಪ್ರದೇಶಾಂತರಕ್ಕೆ ಹೋಗುವುದಕ್ಕೆ ಹಿಡಿಯುವ ಅವಕಾಶಕ್ಕೆ ಸಮಯ ಎಂದು ಹೆಸರು. ಈ ಸಮಯವೆಂಬ ಮೂಲ ಪರಿಮಾಣದಿಂದ ಕ್ಷಣ, ಪಲ, ಘಟಿಕಾದಿ ಕಾಲಗಣನೆಯುಂಟಾಗುವದು. ಪರಮಾಣುವು ತನ್ನ

* ಒಂದು ಪರಮಾಣುವು ವ್ಯಾಪಿಸುವಷ್ಟು ಆಕಾಶದ ಭಾಗಕ್ಕೆ ಪ್ರದೇಶವೆನ್ನುವರು.

ಏಕ ಪ್ರದೇಶದಿಂದಲೇ ಕ್ಷೇತ್ರಸಂಖ್ಯೆಯನ್ನುಂಟುಮಾಡುವುದು; ಕ್ಷೇತ್ರಸಂಖ್ಯೆ ಮತ್ತು ಇತರ ಯವ, ಅಂಗುಲ ಮೊದಲಾದ ಭೇದಗಳುಂಟಾಗುವುದಕ್ಕೂ ಮೂಲ ಸಾಧನವು ಪರಮಾಣುವೇ ಆಗಿದೆ. ಪರಮಾಣುವು ತನ್ನ ಏಕ ಪ್ರದೇಶದಿಂದಲೇ ತನ್ನಲ್ಲಿರುವ ಜಘನ್ಯ (ಕಡಿಮೆ) ಇಲ್ಲವೆ ಉತ್ಕೃಷ್ಟ ರೂಪಾದಿ ಗುಣಗಳೆಂಬ ಭಾವಗಳನ್ನು ತೋರಿಸುವುದರಿಂದ ಭಾವ ಸಂಖ್ಯೆಯನ್ನೂ ಅದು ತೋರಿಸುವುದಾಗಿದೆ.

ಪರಮಾಣುವಿನಲ್ಲಿ ರೂಪ, ರಸ, ಗಂಧ, ಸ್ಪರ್ಶ ಗುಣಗಳು ತಮ್ಮ ಪರ್ಯಾಯಗಳನ್ನನುಸರಿಸಿಯೇ ಇರುವುವು. ಹೇಗೆಂದರೆ- ಕೃಷ್ಣ, ನೀಲ, ಪೀತ, ರಕ್ತ, ಶುಕ್ಲ ಇವು ರೂಪ ಪರ್ಯಾಯಗಳು. ಇವುಗಳಲ್ಲಿ ಯಾವುದೊಂದು ಪರ್ಯಾಯದಿಂದ ರೂಪ (ವರ್ಣ)ವು ಪರಮಾಣುವಿನಲ್ಲಿರುವುದು. ತಿಕ್ತ, ಆಮ್ಲ ಲವಣ, ಮಧುರ, ಕಷಾಯ (ಒಗರು) ಎಂದು ರಸವು ಐದು ಪರ್ಯಾಯಗಳುಳ್ಳುದು. ರಸವು ಇವುಗಳಲ್ಲಿ ಯಾವುದೊಂದೇ ಪರ್ಯಾಯದಿಂದ ಪರಮಾಣುವಿನಲ್ಲಿರುವುದು. ಗಂಧವು ಸುಗಂಧ ದುರ್ಗಂಧವೆಂದು ದ್ವಿ ಪರ್ಯಾಯವಾಗಿಯೂ, ಸ್ಪರ್ಶವು ಶೀತಸ್ನಿಗ್ಧ, ಶಿತರುಕ್ಷ, ಉಷ್ಣಸ್ನಿಗ್ಧ, ಉಷ್ಣರುಕ್ಷ ಎಂದು ನಾಲ್ಕು ಯುಗ್ಮ ಪರ್ಯಾಯ ರೂಪವಾಗಿಯೂ ಇರುವುವು. ಗಂಧ, ಸ್ಪರ್ಶಗಳೂ ಈ ಯಾವದೊಂದು ಪರ್ಯಾಯದಿಂದಲೇ ಪರಮಾಣುವಿನಲ್ಲಿರುವುವು.

ಇಂದ್ರಿಯೋಪಭೋಗ್ಯವಾದ ಸ್ಪರ್ಶ ರಸ ಗಂಧ ರೂಪಗಳೂ, ಸ್ಪರ್ಶನ, ರಸನ, ಘ್ರಾಣ, ಚಕ್ಷುರಿಂದ್ರಿಯಗಳೂ, ಔದಾರಿಕ, ವೈಕ್ರಿಯಕ, ಆಹಾರಕ, ತೈಜಸ, ಕಾರ್ಮಣಗಳೆಂಬ ಶರೀರಗಳೂ, ದ್ರವ್ಯಮನ, ಕರ್ಮಪುದ್ಗಲ, ನೋಕರ್ಮಗಳೂ ಇವಲ್ಲದೆ ವಿಚಿತ್ರ ಪರಿಣಾಮಗಳನ್ನುಂಟು ಮಾಡುವ ಅನಂತ ಅಸಂಖ್ಯೇಯ ಅಣುವರ್ಗಣ ಮೊದಲಾದುವೂ ಪುದ್ಗಲ ಪರ್ಯಾಯಗಳಾಗಿವೆ.

**ಧರ್ಮ**- ಇದು ಅಮೂರ್ತವೂ (ರೂಪ, ರಸ, ಗಂಧ, ಸ್ಪರ್ಶರಹಿತ) ಶಬ್ದರಹಿತವೂ, ನಿಷ್ಕ್ರಿಯವೂ, ತಿಲದಲ್ಲಿ ತೈಲದಂತೆ ಸಂಪೂರ್ಣಲೋಕಾಕಾಶ ವ್ಯಾಪಕವೂ ಆಗಿದೆ. ತನ್ನ ಅಗುರುಲಘು ಗುಣದ ಹಾನಿವೃದ್ಧಿಗಳಿಂದ ಯಾವಾಗಲೂ ಪರಿಣಾಮವನ್ನು ಹೊಂದುವುದಾದರೂ ನಿತ್ಯವಾಗಿದೆ ಇದು ಗಮನ ಕ್ರಿಯೆಯಿಂದ ಕೂಡಿದ ಜೀವ ಪುದ್ಗಲಗಳ ಗತಿಗೆ ಸಹಾಯಕವಾಗಿದೆ. ನೀರು ಗತಿಶೀಲವಾದ ಮೀನಿನ ಗತಿಗೆ ಸಹಾಯ ಮಾಡುವುದು; ನೀರು ಮೀನಿನೊಡನೆ ಗಮನ ಮಾಡದೆ, ಮೀನವನ್ನು ಗಮನದಲ್ಲಿ ತೊಡಗಿಸದೆ, ತಾನಾಗಿ ಗಮನ ಮಾಡುವ ಮೀನಿಗೆ ಉದಾಸೀನವಾಗಿ ಸಹಾಯವನ್ನು ಮಾತ್ರ ಮಾಡುವಂತೆ ಧರ್ಮ ದ್ರವ್ಯವೂ ಜೀವಪುದ್ಗಲಗಳ ಗತಿಗೆ ಸಹಾಯ ಮಾಡುವುದು. ಧರ್ಮದ್ರವ್ಯವು ತನ್ನ ಅಸ್ತಿತ್ವದಿಂದಲೇ ಉಂಟಾದುವರಿಂದ ಬೇರೆ ಏತರಿಂದಲೂ ಉಂಟಾಗಿಲ್ಲ. ಎಂದರೆ

ಅದು ಅನ್ಯ ದ್ರವ್ಯದ ಕಾರ್ಯವಲ್ಲ; ಸ್ವಯಂ ಸಿದ್ಧವಾಗಿದೆ. ಧರ್ಮದ್ರವ್ಯದ ಪ್ರದೇಶಗಳು ಆಕಾಶಾದಿದ್ರವ್ಯಗಳ ಪ್ರದೇಶಗಳಲ್ಲಿ ಸೇರಿಕೊಂಡಿವೆ

**ಅಧರ್ಮ**— ಧರ್ಮದ್ರವ್ಯದಂತೆ ಅಧರ್ಮದ್ರವ್ಯವೂ ಅಮೂರ್ತವೂ ಶಬ್ದ ರಹಿತವೂ ನಿಷ್ಕ್ರಿಯವೂ ಲೋಕಾಕಾಶವನ್ನು ಸಂಪೂರ್ಣವಾಗಿ ವ್ಯಾಪಿಸಿರುದೂ, ಬೇರೆ ದ್ರವ್ಯಗಳೊಡನೆ ಸೇರದುದೂ, ಅಸಂಖ್ಯಾತ ಪ್ರದೇಶಗಳುಳ್ಳದೂ ಆಗಿದೆ ಧರ್ಮಕ್ಕೆ ಅಗುರು ಲಘು ಗುಣದಿಂದ ಹಾನಿವೃದ್ಧಿಗಳಾಗುವಂತೆ ಅಧರ್ಮಕ್ಕೂ ಹಾನಿವೃದ್ಧಿಗಳುಂಟು. ಧರ್ಮ ದ್ರವ್ಯವು ಗತಿಗೆ ಸಹಾಯಕವಾದರೆ ಇದು ಸ್ಥಿತಿಗೆ ಸಹಾಯಕವಾಗುವುದು. ಪೃಥ್ವಿಯು ಎರಡನೆಯವರನ್ನು ನಿಲ್ಲಿಸಲು ಪ್ರಯತ್ನಿಸದೆ ತಾವಾಗಿ ನಿಲ್ಲುತ್ತಿರುವ ಪಶ್ವಾದಿಗಳ ನಿಲ್ಲುವಿಕೆಗೆ ಉದಾಸೀನವಾಗಿದ್ದು ಸಹಾಯಮಾಡುವುದು ಹಾಗೆಯೇ ಸ್ಥಿತಿ ಪರಿಣತವಾದ ಜೀವಪುದ್ಗಲಗಳ ಸ್ಥಿತಿಗೆ ಅಧರ್ಮದ್ರವ್ಯವು ಉದಾಸೀನವಾಗಿ ಸಹಾಯಕವಾಗಿದೆ.

ಈ ಧರ್ಮ ಅಧರ್ಮಗಳು ಲೋಕ, ಅಲೋಕ ಎಂಬ ವಿಭಾಗಕ್ಕೆ ಕಾರಣವಾಗಿವೆ. ಜೀವ ಮೊದಲಾದ ದ್ರವ್ಯಗಳಿರುವುದೇ ಲೋಕವು; ಜೀವಾದಿ ವಸ್ತುಗಳಿಲ್ಲದ ಕೇವಲ ಆಕಾಶಕ್ಕೆ ಅಲೋಕವೆನ್ನುವರು ಜೀವಾದಿ ವಸ್ತುಗಳು ಲೋಕದಲ್ಲಿ ಮಾತ್ರ ಗತಿ, ಸ್ಥಿತಿಗಳನ್ನು ಹೊಂದಿ ಇರುವುವಕ್ಕೂ, ಅಲೋಕದಲ್ಲಿ ಇವು ಹೋಗದಿರುವುದಕ್ಕೂ ಧರ್ಮ ಅಧರ್ಮಗಳೇ ವ್ಯವಸ್ಥಾಪಕವಾಗಿರುವುವು. ಧರ್ಮಾಧರ್ಮಗಳಿಲ್ಲದಿದ್ದರೆ ಲೋಕ, ಅಲೋಕ ಎಂಬ ಭೇದವೇ ಇಲ್ಲದಂತಾಗುತ್ತಿದ್ದಿತು. ಧರ್ಮಾಧರ್ಮಗಳು ಗತಿಸ್ಥಿತಿಗಳಿಗೆ ಕೇವಲ ನಿಮಿತ್ತಕಾರಣಗಳಾಗಿವೆ. ನಿಶ್ಚಯನಯಾಪೇಕ್ಷೆಯಿಂದ ಜೀವ ಪುದ್ಗಲಗಳೇ ತಮ್ಮ ಗತಿ ಸ್ಥಿತಿ ಎಂಬ ಪರಿಣಾಮಗಳನ್ನು ಮಾಡಿಕೊಳ್ಳುವುವು. ಎಂದರೆ ಜೀವ ಪುದ್ಗಲಗಳೇ ಗತಿಸ್ಥಿತಿಗಳ ಉಪಾದಾನ ಕಾರಣಗಳು. ಧರ್ಮಾಧರ್ಮಗಳೇ ಗತಿಸ್ಥಿತಿಗಳ ಮುಖ್ಯಕಾರಣಗಳಾಗಿದ್ದರೆ ಧರ್ಮಾಧರ್ಮಗಳು ಲೋಕದಲ್ಲಿ ಎಲ್ಲ ಕಡೆಗೆ ಇರುವುದರಿಂದ ಗತಿಪರಿಣತವಾದ ಜೀವಗಳು ನಿರಂತರ ಗತಿಯಲ್ಲಿಯೂ, ಸ್ಥಿತಿಪರಿಣತವಾದ ಜೀವಗಳು ನಿರಂತರ ಸ್ಥಿತಿಯಲ್ಲಿಯೂ, ಇರಬೇಕಾಗಿದ್ದಿತು. ಹಾಗೆ ಇರದೆ ಗತಿಸ್ಥಿತಿಗಳೆಂಬ ಎರಡೂ ಅವಸ್ಥೆಗಳಲ್ಲಿರುವುದು ಕಾಣ ಬರುವುದರಿಂದ ಧರ್ಮಾಧರ್ಮಗಳು ಗತಿಸ್ಥಿತಿಗಳಿಗೆ ಅಮುಖ್ಯ (ನಿಮಿತ್ತ) ಕಾರಣವಾಗಿವೆಯೆಂದು ತಿಳಿಯ ಬರುವುದು.

**ಆಕಾಶ**— ಜೀವ, ಅಜೀವ, ಧರ್ಮ, ಅಧರ್ಮ, ಕಾಲ, ಆಕಾಶಗಳೆಂಬ ಆರು ದ್ರವ್ಯಗಳಿಂದ ಸಂಪೂರ್ಣವಾಗಿ ತುಂಬಿಕೊಂಡಿರುವ ಲೋಕದಲ್ಲಿ ಯಾವುದು ತನ್ನನ್ನುಳಿದು ಎಲ್ಲ ದ್ರವ್ಯಗಳಿಗೆ ತನ್ನಲ್ಲಿರುವುದಕ್ಕೆ ಅವಕಾಶವನ್ನು ಕೊಡುವುದೋ ಅಂತಹ ಶುದ್ಧ ಕ್ಷೇತ್ರವು ಆಕಾಶವೆನಿಸುವುದು. ಎಂದರೆ ಆ ಶುದ್ಧಕ್ಷೇತ್ರವು

ತನ್ನ ಹೊರತು ಉಳಿದ ಎಲ್ಲ ದ್ರವ್ಯಗಳಿಗೆ ಸ್ಥಳವನ್ನು ಕೊಡುವುದು. ಆಕಾಶದ ಹೊರತು ಉಳಿದ ಐದು ದ್ರವ್ಯಗಳಿಗೆ ಲೋಕವು ಪರಿಮಾಣವೆನಿಸಿದುದರಿಂದ ಅವು ಪರಿಮಿತವಾಗಿವೆ. ಆದರೆ ಆಕಾಶವು ಲೋಕದ ಹೊರತು ಬೇರೆಯೂ (ಅಲೋಕಾಕಾಶ) ಇರುವುದರಿಂದ ಅಪರಿಮಿತವಾಗಿದೆ. ಇದಲ್ಲದೆ ಆಕಾಶವು ಅಮೂರ್ತವೂ ನಿಷ್ಕ್ರಿಯವೂ ಆಗಿದೆ.

ಕಾಲ— ಇದು ಕಾಲವು, ಇದು ಕಾಲವು ಎಂಬ ವ್ಯವಹಾರಕ್ಕೆ ಕಾರಣಭೂತವಾದುದು ಕಾಲವು. ವ್ಯವಹಾರಕಾಲ, ನಿಶ್ಚಯಕಾಲ ಎಂದು ಕಾಲವು ದ್ವಿವಿಧವಾಗಿದೆ. ಸಮಯ, ಆವಲಿ, ಲವ, ಘಟಿಕೆ ಮೊದಲಾದುವು ವ್ಯವಹಾರ ಕಾಲಭೇದಗಳು. ಲೋಕಾಕಾಶದಲ್ಲಿ ಒಂದೊಂದು ಪ್ರದೇಶದಲ್ಲಿ ಕಾಲಾಣುಗಳು ರತ್ನರಾಶಿಯಂತೆ ಇರುವುವು. ಕಾಲದ್ರವ್ಯವು ಲೋಕಾಕಾಶಪ್ರದೇಶವಷ್ಟೇ ಪ್ರದೇಶವುಳ್ಳುದು. ಒಂದು ಪರಮಾಣುವು ಲೋಕಾಕಾಶದಲ್ಲಿ ಅರ್ಧ ಕಾಲಾಣುವನ್ನು ಮಂದಗತಿಯಿಂದ ದಾಟುವ ಹೊತ್ತಿಗೆ ಒಂದು 'ಸಮಯ'ವೆಂದು ಹೆಸರು. ಕ್ರಮದಿಂದ ಪ್ರಾಪ್ತವಾಗುವ ಈ ಸಮಯರೂಪ ಕಾಲವು ವ್ಯವಹಾರಕಾಲವು, ಈ ಸಮಯಗಳಿಗೆ ಆಧಾರಭೂತವಾದ ದ್ರವ್ಯವು ನಿಶ್ಚಯಕಾಲವು. ವ್ಯವಹಾರಕಾಲವು ನಿಶ್ಚಯಕಾಲದ ಪರ್ಯಾಯವಾಗಿದ್ದರೂ ಅದು ಜೀವ, ಪುದ್ಗಲಗಳ ಪರಿಣಾಮದಿಂದ ತಿಳಿಯಲ್ಪಡುವುದರಿಂದ ವ್ಯವಹಾರಕಾಲವು ಜೀವಪುದ್ಗಲಗಳ ಪರಿಣಾಮದಿಂದ ಉಂಟಾದುದೆಂದು ಹೇಳುವರು; ವ್ಯವಹಾರಕಾಲವು ಕ್ಷಣಭಂಗುರವಾಗಿದೆ. ಏಕೆಂದರೆ, ಅದು ಕಾಲದ ಸೂಕ್ಷ್ಮಪರ್ಯಾಯವಾದುದರಿಂದ ಅದರ ಸ್ಥಿತಿಯು ಸೂಕ್ಷ್ಮವಾಗಿಯೇ ಇರುವುದು. ನಿಶ್ಚಯಕಾಲವು ತನ್ನ ಗುಣಪರ್ಯಾಯಗಳಿಗೆ ಆಧಾರಭೂತ ದ್ರವ್ಯವಾದುದರಿಂದ ಅದು ಎಂದೂ ನಾಶಹೊಂದದೆ ನಿತ್ಯವಾಗಿದೆ. ಸಮಯವೆಂಬ ವ್ಯವಹಾರಕಾಲವು ಉತ್ಪನ್ನವಾದೊಡನೆ ನಾಶಹೊಂದಿದರೂ ತನ್ನ ಅವಿಚ್ಛಿನ್ನ ಪರಂಪರೆಯಿಂದ ಬಹುದೀರ್ಘವಾಗಿದೆ. ಈ ಸಮಯರೂಪ ಕಾಲದ ಬೇರೆ ಬೇರೆ ಪರಂಪರೆಗಳಿಗೆ ವ್ಯವಹಾರದಲ್ಲಿ ಆವಲಿ, ಸ್ತೋಕ, ಘಟಿಕೆ ಮೊದಲಾದ ಹೆಸರುಗಳು ಬಂದಿವೆ.

ಅಸಂಖ್ಯಾತ ಸಮಯಗಳಿಂದ ಒಂದು ಆವಲಿಯಾಗುವುದು, ಸಂಖ್ಯಾತ ಸಮಯಾವಲಿಗಳಿಂದ ಒಂದು ಉಚ್ಛ್ವಾಸವು, ಏಳು ಉಚ್ಛ್ವಾಸಗಳಿಂದ ಒಂದು ಸ್ತೋಕವು, ಏಳು ಸ್ತೋಕಗಳಿಂದ ಒಂದು ಲವವು, ಮೂವತ್ತೆಂಟುವರೆ ಲವಗಳಿಂದ ಒಂದು ಗಳಿಗೆಯು, ಎರಡು ಗಳಿಗೆಗಳಿಂದ ಒಂದು ಮುಹೂರ್ತವು, ಮೂವತ್ತು ಮುಹೂರ್ತಗಳಿಂದ ಒಂದು ದಿವಸವು, ಆಗುವುವು ಹೀಗೆಯೇ ಮುಂದೆ ಪಕ್ಷ, ಮಾಸ, ಋತು, ಅಯನ, ಸಂವತ್ಸರ, ಯುಗ (೫ವರ್ಷ), ದಶವರ್ಷ ಎಂಬ ಭೇದಗಳು, ಈ ದಶವರ್ಷಗಳಿಂದ ಮುಂದೆ ಹತ್ತುಮಡಿ ಮಾಡುತ್ತ

ಹೋಗಲು ಶತ, ಸಹಸ್ರ, ಅಯುತ, ಲಕ್ಷ, ಪ್ರಯುತ, ಕೋಟಿ, ಅರ್ಬುದ, ಪದ್ಮ, ಖರ್ವ, ನಿಖರ್ವ, ಮಹಾಪದ್ಮ, ಶಂಖ, ಸಮುದ್ರ, ಮಧ್ಯ, ಅಂತ್ಯ ಪರಮಾಂತ್ಯ, ಪರಮಕೋಟಿ ಎಂಬ ವರ್ಷ ಸಂಖ್ಯೆಗಳು, ಇನ್ನೂ ಹೆಚ್ಚುತ್ತ ಹೋಗಲು ಸಂಖ್ಯಾತ, ಅಸಂಖ್ಯಾತ, ಅನಂತ ಎಂಬ ಭೇದಗಳಾಗುವುವು. ಶ್ರುತಕೇವಲಿಯ ಅವಧಿಜ್ಞಾನಕ್ಕೆ ಅಸಂಖ್ಯಾತವೂ, ಕೇವಲ ಜ್ಞಾನಕ್ಕೆ ಅನಂತವೂ ವಿಷಯವಾಗುವುವು;

೧ ಲಕ್ಷವರ್ಷ × ೮೪ = ಒಂದು ಪೂರ್ವ. ಇದೇ ಮೇರೆಗೆ ೮೪ ಲಕ್ಷದಿಂದ ಗುಣಿಸುತ್ತ ಹೋಗಲು ಪರ್ವಾಂಗ, ಪರ್ವ, ಣಕಾರಾಂಗ, ಣಕಾರ, ಕುಮುದಾಂಗ, ಕುಮುದ, ಪದ್ಮಾಂಗ, ಪದ್ಮ, ನಳಿನಾಂಗ, ನಳಿನ, ಕಮಲಾಂಗ, ಕಮಲ, ತುಟ್ಯಾಂಗ, ತುಟ್ಯ, ಅಟಟಾಂಗ, ಅಟಟ, ಅಮಮಾಂಗ, ಅಮಮ, ಹಾಹಾಂಗ; ಹಾಹಾ, ಹೂಹ್ವಂಗ, ಹೂಹೂ, ಲತಾಂಗ, ಲತೆ, ಮಹಾಲತಾಂತ, ಮಹಾಲತೆ ಎಂಬಿವು ಆಗುವುವು.

ಇಂತು ಮೇಲೆ ಹೇಳಿದ ಕಾಲಕ್ಕೆ ಗಣನೆಯಿರುವುದರಿಂದ ಸಂಖ್ಯಾತವೆನಿಸುವುದು. ಗಣನಾತೀತವಾದುದು ಅಸಂಖ್ಯಾತವು; ಅದು ಪಲ್ಯೋಪಮ, ಸಾಗರೋಪಮ, ಸೂಚ್ಯಂಗುಲ, ಪ್ರತರಾಂಗುಲ, ಘನಾಂಗುಲ, ಜಗಚ್ಛ್ರೇಣಿ, ಲೋಕಪ್ರತರ, ಲೋಕಪೂರಣ ಎಂದು ಎಂಟು ತೆರನಾಗಿದೆ. ಇವು ಪ್ರತ್ಯಕ್ಷಜ್ಞಾನ ಗೋಚರವಾಗಿವೆ.

ಪಲ್ಯೋಪಮಕಾಲ– ಒಂದು ಯೋಜನವಿಸ್ತೀರ್ಣವೂ ಒಂದು ಯೋಜನ ಆಳವೂ ಆದ ವರ್ತುಲಾಕಾರವಾದ ಮೂರು ತಗ್ಗು (ಹಳ್ಳ)ಗಳನ್ನು ತೋಡಿ ಉತ್ತಮಭೋಗಭೂಮಿಯಲ್ಲಿ ಶೀತಾತಪ ರಹಿತವಾದ ಭೂಗೃಹದಲ್ಲಿ ಸಲಹಿದ ಗಂಡುಹೆಣ್ಣು ಕುರಿಗಳ ಏಳನೆಯ ತಲೆಯ ಮರಿಗುರಿಯ ಏಳನೆಯ ದಿನದ ರೋಮಗಳನ್ನು ತುದಿಮೊದಲು ಅರಿಯಬಾರದಂತ (ಅತ್ಯಂತ ಸೂಕ್ಷ್ಮವಾಗಿ) ಕತ್ತರಿಸಿ ಅವನ್ನು ಮೊದಲನೆಯ ಕುಣಿಯಲ್ಲಿ ಹತ್ತಿಯಾಗಿ ತುಂಬಬೇಕು. ಆ ಕೂದಲುಗಳನ್ನು ನೂರು ವರ್ಷಕ್ಕೊಂದೊಂದರಂತೆ ತೆಗೆಯುತ್ತ ಹೋಗಬೇಕು. ಹೀಗೆ ತೆಗೆಯಲು ಎಲ್ಲ ರೋಮಗಳೂ ಎಲ್ಲ ಕುಣಿಗಳೂ ತೀರುವುದಕ್ಕೆ ಬೇಕಾಗುವ ಕಾಲಾವಧಿಗೆ ವ್ಯವಹಾರ ಪಲ್ಯವೆಂದು ಹೆಸರು.

---

ಒಂದು ಆಕಾಶ ಪ್ರದೇಶದಿಂದ ಅದಕ್ಕೆ ಹೊಂದಿದ ಇನ್ನೊಂದು ಆಕಾಶ ಪ್ರದೇಶಕ್ಕೆ ಮಂದ ಗತಿಯಿಂದ ಹೋಗುವುದಕ್ಕೆ ಒಂದು ಪರಮಾಣುವಿಗೆ ಎಷ್ಟು ಕಾಲವು ಹಿಡಿಯುವುದೋ ಅದಕ್ಕೆ ಸಮಯವೆಂಬ ಹೆಸರು. ಅಸಂಖ್ಯಾತ ಸಮಯಗಳು ಕೂಡಿ ಒಂದು ಆವಲಿಯಾಗುವುದು. ಆವಲಿಯೆಂದರೆ ಎವೆ ಬಡಿಯುವಷ್ಟು ಕಾಲವು

ಮುಹೂರ್ತ = ೪೮ ಮಿನಿಟು.

ಪಲ್ಯಂದಿದ ಮುಂದೆ ಉದ್ಧಾರಪಲ್ಯ, ಅದ್ಧಾರಪಲ್ಯ, ಎಂಬಿವೂ ಈ ಪಲ್ಯಕಾಲಗಳ ೧೦ ಕೋಟಾಕೋಟಿಯಿಂದ ಸಾಗರೋಪಮಕಾಲವೂ ಆಗುವುವು. ಇವಕ್ಕೂ ಮುಂದೆ ಸೂಚ್ಯಂಗುಲ ಪ್ರತರಾಂಗುಲ, ಘನಾಂಗುಲ, ಜಗತ್ಶ್ರೇಢಿ, ಮುಂತಾದ ಕಲ್ಪನಾತೀತಕಾಲ ಪರಿಮಾಣಗಳುಂಟು.

ಹತ್ತು ಕೋಟಾಕೋಟಿ ಸಾಗರೋಪಮಕಾಲವೆಂದರೆ ಒಂದು ಉತ್ಸರ್ಪಿಣೀ ಕಾಲವಾಗುವುದು. 'ಅವಸರ್ಪಿಣಿ' ಎಂಬುದೂ ಇಷ್ಟೇ ಪರಿಮಾಣವುಳ್ಳದು. ಈ ಉತ್ಸರ್ಪಿಣಿ ಅವಸರ್ಪಿಣಿ ಎಂಬ ಕಾಲಗಳು ಅನಂತಾನಂತವಾಗಿ ರಾಟಳದ ಗುಂಡಿಗೆಯಂತೆ ಚಕ್ರಾಕಾರವಾಗಿ ಪರಿವರ್ತಿಸುವುವು.

ಅವಸರ್ಪಿಣೀಕಾಲದಲ್ಲಿ ಸುಷಮಸುಷಮ, ಸುಷಮ, ಸುಷಮದುಷ್ಷಮ, ದುಷ್ಷಮ ಸುಷಮ, ದುಷ್ಷಮ, ಅತಿದುಷ್ಷಮ ಎಂದು ಆರು ಭಾಗಗಳುಂಟು. ಉತ್ಸರ್ಪಿಣೀಕಾಲದಲ್ಲಿ ಈ ಹೆಸರಿನ ಭಾಗಗಳೇ ವಿರುದ್ಧಕ್ರಮದಿಂದ (ಅತಿದುಷ್ಷಮವನ್ನು ಮೊದಲು ಮಾಡಿ) ಬರುವುವು.

| | | | | | |
|---|---|---|---|---|---|
| ೧. | ಸುಷಮ ಸುಷಮ | — | ೪ ಸಾಗರಕೋಟಿಕೋಟಿ | | |
| ೨. | ಸುಷಮ | — | ೩ | ,, | ,, |
| ೩. | ಸುಷಮ ದುಷ್ಷಮ | — | ೨ | ,, | ,, |
| ೪. | ದುಷ್ಷಮ ಸುಷಮ | — | ೧ | ,, | ,, ಗೆ ೪೨ಸಾವಿರ ಕಡಿಮೆ |
| ೫. | ದುಷ್ಷಮ | — | ೨೧ ಸಾವಿರ ವರ್ಷ | | |
| ೬. | ಅತಿದುಷ್ಷಮ | — | ೨೧ | ,, | ,, |

ಒಟ್ಟು ೧೦ ಸಾಗರ ಕೋಟಿಕೋಟಿ.

ಅವಸರ್ಪಿಣೀ ಕಾಲದಲ್ಲಿ, ಭರತ, ಐರಾವತಕ್ಷೇತ್ರಗಳೊಳಗಿನ ಪ್ರಾಣಿಗಳ ಆಯುಷ್ಯ, ಶರೀರೋನ್ನತಿ, ಜ್ಞಾನ ಮೊದಲಾದುವು ಹ್ರಾಸವನ್ನು ಹೊಂದುತ್ತ, ಮತ್ತು ಉತ್ಸರ್ಪಿಣೀಕಾಲದಲ್ಲಿ ವೃದ್ಧಿ ಹೊಂದುತ್ತ ಹೋಗುವುವು.

ಈಗ ಅವಸರ್ಪಿಣೀಕಾಲವು ನಡೆದಿದೆ. ಅವಸರ್ಪಿಣಿಯ ೪ನೆಯ ಭಾಗವಾದ ದುಃಷಮ ಸುಷಮಕಾಲದಲ್ಲಿ ೨೪ಜನ ತೀರ್ಥಂಕರರು ಆಗಿ ಹೋದರು. ಈಗ ನಡೆದಿರುವ ದುಷ್ಷಮ ಎಂಬ ೫ನೆಯ ಕಾಲಭಾಗವು ೨೨ ಸಾವಿರ ವರ್ಷ ಪರಿಮಿತವು. ಪ್ರತಿಯೊಂದು ಅವಸರ್ಪಿಣಿಯ ದುಷ್ಷಮಸುಷಮ ಎಂಬ ಭಾಗದಲ್ಲಿ ೨೪ಜನ ತೀರ್ಥಕರರು ಆಗಿ ಹೋಗುವರು.

ವರ್ತನ, ಪರಿಣಾಮ, ಕ್ರಿಯೆ, ಪರತ್ವ, ಅಪರತ್ವ ಇವು ಕಾಲದ್ರವ್ಯದ ಉಪಕಾರಗಳು. ಧರ್ಮಾದಿದ್ರವ್ಯಗಳು ತಮ್ಮ ಪರ್ಯಾಯಗಳು ಪೂರ್ಣವಾಗು

ವುದಕ್ಕಾಗಿ ಮೇಲೆ ಮೇಲೆ ಪರಿವರ್ತಿಸುತ್ತ ಇರುವುವು. ಈ ಪರಿವರ್ತನವು ಬಹಿರಂಗದಲ್ಲಿ ಯಾವ ಕಾರಣದಿಂದ ಉಂಟಾಗುವುದೋ ಅದು ವರ್ತನವೆನಿಸುವುದು. ದ್ರವ್ಯದಲ್ಲಿ ಒಂದು ಧರ್ಮವನ್ನು ನಾಶಮಾಡಿ ಕೂಡಲೆ ಇನ್ನೊಂದು ಧರ್ಮವನ್ನು ಉಂಟುಮಾಡುವ ಪರ್ಯಾಯವನ್ನು, ಹೊಂದುವುದಕ್ಕೆ ಪರಿಣಾಮವೆಂದು ಹೆಸರು. ಉದಾ:- ಆತ್ಮನ 'ಕ್ರುದ್ಧ' ಪರ್ಯಾಯವೆಂದರೆ ಈ ಪರ್ಯಾಯವುಂಟಾದೊಡನೆ 'ಆತ್ಮನ ಶಾಂತ' ಎಂಬ ಪರ್ಯಾಯವು ಹೋಗುವುದು, ಎಂದರೆ ಶಾಂತಿ ಎಂಬ ಧರ್ಮವು ಇಲ್ಲದಂತಾಗುವುದು; ಬಳಿಕ ಕ್ರೋಧವೆಂಬ ಹೊಸ ಧರ್ಮವು ಬರುವುದು ದ್ರವ್ಯದಲ್ಲಿ ಚಲನವಲನಗಳುಂಟಾಗುವುದೂ, ಒಂದು ಕ್ಷೇತ್ರದಿಂದ ಇನ್ನೊಂದು ಕ್ಷೇತ್ರಕ್ಕೆ ಗಮಿಸುವುದೂ ಕ್ರಿಯೆಯೆನಿಸುವುದು. ದೊಡ್ಡವನು ಸಣ್ಣವನು (ವಯಸ್ಸಿನಿಂದ) ಎಂಬ ವ್ಯವಹಾರಕ್ಕೆ ಪರತ್ವ ಅಪರತ್ವಗಳು ಕಾರಣವಾಗಿವೆ ಈ ವರ್ತನ, ಪರಿಣಾಮ ಮೊದಲಾದುವು ಕಾಲದಿಂದ ಉಂಟಾಗುವುದರಿಂದ ಕಾಲದ ಉಪಕಾರಗಳಾಗಿವೆ.

---

# ಆಸ್ರವತತ್ತ್ವ

ಕಾಯವಾಙ್ಮನಃ ಕರ್ಮ ಯೋಗಃ । ಸ ಆಸ್ರವಃ ॥

ಮನೋವಾಕ್ಕಾಯಗಳ ಕ್ರಿಯೆಯು ಯೋಗವೆನಿಸುವುದು. [illegible] ರ್ಯಾಂತರಾಯ ಕರ್ಮದ ಕ್ಷಯೋಪಶಮವಾಗಲು ಔದಾರಿಕ ಮೊದಲಾದ [illegible] ರದ ಕಾಯವರ್ಗಣೆಗಳೊಳಗಿಂದ ಯಾವುದೊಂದು ವರ್ಗಣೆಯನ್ನು ತೆಗೆದುಕೊಳ್ಳುವುದಕ್ಕಾಗಿ ಆತ್ಮಪ್ರದೇಶವು ಚಂಚಲವಾಗುವುದು ಕಾಯಯೋಗವು; ವೀರ್ಯಾಂತರಾಯ ಮತ್ತು ಮತಿಜ್ಞಾನಾವರಣ ಇವುಗಳ ಕ್ಷಯೋಪಶಮವಾಗಲು ಪ್ರಾಪ್ತವಾಗುವ ವಾಗ್ಲಬ್ಧಿಯ ಸಾನ್ನಿಧ್ಯದಿಂದ ವಚನರೂಪ ಪರಿಣಮನವನ್ನು ಹೊಂದುವುದಕ್ಕೆ ಅಭಿಮುಖವಾದ ಆತ್ಮಪ್ರದೇಶಗಳಲ್ಲಿ ಚಲನವಲನರೂಪ ಕ್ರಿಯೆಯುಂಟಾಗುವುದು ವಚನಯೋಗವು; ಅಭ್ಯಂತರವೀರ್ಯಾಂತರಾಯ, ನೋಇಂದ್ರಿಯಾವರಣಕರ್ಮ ಇವುಗಳ ಕ್ಷಯೋಪಶಮದಿಂದ ಪ್ರಾಪ್ತವಾಗುವ ಮನೋಲಬ್ಧಿಯ ಸಾನ್ನಿಧ್ಯದಿಂದಲೂ ಬಾಹ್ಯನಿಮಿತ್ತಗಳಿಂದಲೂ ಮನೋರೂಪ ಪರಿಣಮನ ಹೊಂದುವುದಕ್ಕೆ ಅಭಿಮುಖವಾದ ಆತ್ಮಪ್ರದೇಶಗಳು ಚಂಚಲವಾಗುವುದು ಮನೋಯೋಗವು. ಈ ಯೋಗಗಳೇ ಆಸ್ರವವೆನಿಸುವುವು. ಕೆರೆಗೆ ನೀರು ಬರುವುದಕ್ಕೆ ಹಲವು ಕಾಲುವೆಗಳಿರುವಂತೆ ಆತ್ಮನಲ್ಲಿ ಕರ್ಮಗಳು ಬರುವುದಕ್ಕೆ ಈ ಮನಃಕಾಯ ವಚನಯೋಗಗಳು ದ್ವಾರಗಳು. ಯೋಗಗಳು ಆಸ್ರವ

ಕಾರಣಗಳಾಗಿದ್ದರೂ ಇವನ್ನೇ ಆಸ್ರವಗಳೆಂದು ಹೇಳುವುದು ಔಪಚಾರಿಕಪ್ರಯೋಗವು.

ಶುಭಪರಿಣಾಮದಿಂದ ಹುಟ್ಟುವ ಯೋಗವು ಪುಣ್ಯಪ್ರಕೃತಿಯ ಆಸ್ರವವನ್ನೂ, ಅಶುಭಪರಿಣಾಮದಿಂದ ಹುಟ್ಟುವ ಯೋಗವು ಪಾಪಕರ್ಮದ ಆಸ್ರವವನ್ನೂ ಉಂಟು ಮಾಡುವುದು ಜೀವರಕ್ಷಣ, ಪರೋಪಕಾರ, ಸತ್ಯ, ಪರಮೇಷ್ಠಿಭಕ್ತಿ ಮೊದಲಾದುವು-ಶುಭಯೋಗಗಳು; ಹಿಂಸೆ, ಅಸತ್ಯ, ಚೌರ್ಯ ಮೊದಲಾದುವು ಅಶುಭಯೋಗಗಳು.

ಆಸ್ರವದಲ್ಲಿ ಸಾಂಪರಾಯಿಕಾಸ್ರವ, ಈರ್ಯಾಪಥಾಸ್ರವ ಎಂಬ ಎರಡು ಪ್ರಕಾರಗಳುಂಟು. ಕಷಾಯ ಸಹಿತಜೀವರಲ್ಲಿ ಸಾಂಪರಾಯಿಕಾಸ್ರವವೂ, ಕಷಾಯರಹಿತಜೀವರಲ್ಲಿ ಈರ್ಯಾಪಥಾಸ್ರವವೂ ಉಂಟಾಗುವುವು. ಸಾಂಪರಾಯಿಕಾಸ್ರವವು ಸಂಸಾರಕ್ಕೆ ಕಾರಣವು; ಈರ್ಯಾಪಥಾಸ್ರವವು. ಉಪಶಾಂತಕಷಾಯ, ಕ್ಷೀಣಕಷಾಯ, ಸಯೋಗಕೇವಲಿ, ಅಯೋಗ ಕೇವಲಿ ಈ ಗುಣಸ್ಥಾನಗಳಲ್ಲಿರುವ ಮೋಕ್ಷಮಾರ್ಗದ ಜೀವರಲ್ಲಿ ಉಂಟಾಗುವುದು; ಈರ್ಯಾಪಥಾಸ್ರವವೆಂದರೆ ಸ್ಥಿತಿರಹಿತಕರ್ಮಗಳ ಆಸ್ರವವು.

ಪಂಚೇಂದ್ರಿಯಗಳು, ಚತುಷ್ಕಷಾಯಗಳು, ಪಂಚಾವ್ರತಗಳು, ಪಂಚವಿಂಶತಿಕ್ರಿಯೆಗಳು-ಇವೆಲ್ಲ [illegible]ಂಪರಾಯಿಕಾಸ್ರವದ ಪ್ರಕಾರಗಳು.

[illegible]ಯಗಳು - ಕ್ರೋಧ, ಮಾನ, ಮಾಯಾ ಲೋಭಗಳು. ಪಂಚಾವ್ರತ[illegible] - ಹಿಂಸೆ, ಅಸತ್ಯ, ಚೌರ್ಯ, ಅಬ್ರಹ್ಮ (ಪರದಾರಸಂಗ್ರಹ) ಪರಿಗ್ರಹ (ಅತ್ಯಾಸಕ್ತಿ) ಎಂಬಿವು

ಪಂಚವಿಂಶತಿಕ್ರಿಯೆಗಳು- ೧ ಸಮ್ಯಕ್ತ್ವಕ್ರಿಯೆ (ದೇವಗುರುಶಾಸ್ತ್ರಾದಿ ಪೂಜೆ) ೨ ಮಿಥ್ಯಾತ್ವಕ್ರಿಯೆ (ಅನ್ಯದೇವಗುರುಶಾಸ್ತ್ರಾದಿ ಪೂಜೆ) ೩ ಪ್ರಯೋಗಕ್ರಿಯೆ (ಗಮನಾಗಮನ) ೪ ಸಮಾದಾನ ( ವಿರತನು ಅವಿರತನಾಗುವುದಕ್ಕೆ ಅಭಿಮುಖನಾಗುವುದು ) ೫ ಈರ್ಯಾಪಥ (ಗಮನ) ೬ ಪ್ರಾದೋಷಿಕ (ಕ್ರೋಧಾವೇಶದಲ್ಲಾಗುವ ಪ್ರಮಾದ) ಕಾಯಿಕಿ (ದುಷ್ಕರ್ಮೋದ್ಯೋಗ) ೮ ಅಧಿಕರಣಿಕಿ ( ಶಸ್ತ್ರಧಾರಣ) ೯ ಪರಿತಾಪಿಕಿ (ಪರದುಃಖೋತ್ಪಾದನ) ೧೦ ಪ್ರಾಣಾತಿಪಾತ (ಆಯುಸ್ಸು, ಇಂದ್ರಿಯಶಕ್ತಿ, ಪ್ರಾಣ ಇವುಗಳ ವಿಯೋಗಕ್ರಿಯೆ) ೧೧ ದರ್ಶನ (ರಮಣೀಯ ಸ್ವರೂಪಾವಲೋಕನ) ೧೨ ಸ್ಪರ್ಶನ ೧೩ ಪ್ರಾತ್ಯಯಿಕಿ (ಭೋಗ್ಯವಸ್ತುಸಂಗ್ರಹ) ೧೪ ಸಮಂತಾನುಪಾತ (ಪ್ರಾಣಿಗಳು ವಾಸಿಸುವಲ್ಲಿ ಮಲಮೂತ್ರತ್ಯಾಗ) ೧೫ ಅನಾಭೋಗ(ಪಿಂಛಾದಿಯಿಂದ ನೆಲವನ್ನು ಗುಡಿಸದೆ ಕುಳ್ಳಿರುವುದು ಮುಂ) ೧೬ ಸ್ವಹಸ್ತಕ್ರಿಯೆ(ಪರರು ಮಾಡಬಹುದಾದವನ್ನು ತಾನು ಮಾಡುವುದು) ೧೭ ನಿಸರ್ಗ (ಪಾಪೋ

ತ್ಪಾದಕ ಕ್ರಿಯೆಯನ್ನು ತಾನು ಸಾಧುವೆಂದು ತಿಳಿವುದೂ, ಪರರಿಗೆ ಮಾಡಲಪ್ಪಣೆ ಯೀವುದೂ) ೧೮ ವಿದಾರಣ (ಆಲಸ್ಯದಿಂದ ಶ್ರೇಯಸ್ಕರ ಕ್ರಿಯೆಯನ್ನು ಮಾಡ ದಿರುವುದು ಮತ್ತು ಅನ್ಯರ ಪಾಪಕರ್ಮವನ್ನು ಪ್ರಕಟಿಸು ದು) ೧೯ ಆಜ್ಞಾವ್ಯಾ ಪಾದಿಕಿ (ಶಾಸ್ತ್ರಾನುಮತ ಕ್ರಿಯೆಯನ್ನು ಮಾಡದೆ ಅನ್ಯವಿಧವಾಗಿ ಮಾಡುವುದು) ೨೦ ಅನಾಕಾಂಕ್ಷೆ (ಅರ್ಹಂತರು ವರ್ಣಿಸಿದ ಕ್ರಿಯೆಯಲ್ಲಿ ಅನಾದರ) ೨೧ ಪ್ರಾರಂಭ (ಸ್ವಕೃತ-ಪರಕೃತ ಛೇದನ ಭೇದನಗಳಲ್ಲಿ ಹರ್ಷ) ೨೨ ಪಾರಿಗ್ರಹಿಕೆ (ಪರಿಗ್ರಹರ ಕ್ಷಣಕ್ಕಾಗಿ ಪ್ರವೃತ್ತನಾಗುವುದು) ೨೩ ಮಾಯೆ (ಜ್ಞಾನ ದರ್ಶನಾದಿಗಳಲ್ಲಿ ಕಪ ಟೋಪಾಯ) ೨೪ ಮಿಥ್ಯಾದರ್ಶನ (ಪರರ ಮಿಥ್ಯಾತ್ವಕ್ರಿಯೆಗೆ ಉತ್ತೇಜನ) ೨೫ ಅಪ್ರತ್ಯಾಖ್ಯಾನ (ಸಂಯಮದಲ್ಲಿ ಉದ್ಯುಕ್ತನಾಗದಿರುವುದು. )

ತೀವ್ರಭಾವ (ಕ್ರೋಧಾದಿಗಳ ತೀವ್ರ ಪರಿಣಾಮ) ಮಂದಭಾವ ಕ್ರೋಧಾ ದಿಗಳ ಮಂದತ್ವ) ಜ್ಞಾತಭಾವ (ಜ್ಞಾನಪೂರ್ವಕ ಪ್ರವೃತ್ತಿ) ಅಜ್ಞಾತ ಭಾವ (ಮದ- ಅಜಾಗರೂಕತಾ ಮೂಲಕ ಅಜ್ಞಾನ ಪೂರ್ವಕ ಪ್ರವೃತ್ತಿ), ಅಧಿಕರಣ (ಕಾರ್ಯ ಸಿದ್ಧಿಯ ಆಶ್ರಯಸ್ಥಾನ) ವೀರ್ಯ [ಶಕ್ತಿ ವಿಶೇಷ] ಇವುಗಳ ವೈಶೇ ಷ್ಯದಿಂದ ಆಸ್ರವಗಳಲ್ಲಿ ನ್ಯೂನಾಧಿಕ್ಯರೂಪ ವೈಶೇಷ್ಯವುಂಟಾಗುವುದು

ಆಸ್ರವಕ್ಕೆ ಜೀವಾಜೀವಗಳು ಅಧಿಕರಣಗಳು. ಜೀವಾಧಿಕರಣದಲ್ಲಿ ಸಂ ರಂಭ, ಸಮಾರಂಭ, ಆರಂಭಗಳೆಂಬಿವು ಮನೋವಚನಕಾಯ ಯೋಗಗಳಿಂದಲೂ ಕೃತಕಾರಿತಾನುಮತಭೇದದಿಂದಲೂ, ಕ್ರೋಧಮಾನ ಮಾಯಾಲೋಭಗಳೆಂಬ ಕಷಾಯ ವಿಶೇಷಗಳಿಂದಲೂ ೧೦೮ ಪ್ರಕಾರಗಳಾಗುವುವು ಹಿಂಸಾದಿ ಕ್ರಿಯೆಗ ಳಲ್ಲಿ ಉದ್ಯುಕ್ತನಾಗುವುದು ಸಂರಂಭವು; ಹಿಂಸಾಸಾಧನಗಳನ್ನು ಅಭ್ಯಾಸಿಸುವುದು ಇಲ್ಲವೆ ಶೇಖರಿಸುವುದು ಸಮಾರಂಭವು, ಹಿಂಸಾದಿ ಕ್ರಿಯೆಗಳಲ್ಲಿ ಪ್ರವೃತ್ತನಾಗು ವುದು ಆರಂಭವು; ತಾನು ಮಾಡಿದುದು ಕೃತವು; ಪರರಿಂದ ಮಾಡಿಸಿದುದು ಕಾರಿ ತವು; ಪರಕೃತವನ್ನನುಮೋದಿಸುವುದು ಅನುಮತವು; ಈ (೧೦೮) ಪ್ರಕಾರಗಳು ಅನಂತಾನುಬಂಧಿ, ಅಪ್ರತ್ಯಾಖ್ಯಾನಾವರಣ, ಪ್ರತ್ಯಾಖ್ಯಾನಾವರಣ, ಸಂಜ್ವಲನಗ ಳೆಂಬ ಕಷಾಯಭೇದಗಳಿಂದ ೪೩೨ ಪ್ರಕಾರಗಳಾಗುವುವು.

ಅಜೀವಾಧಿಕರಣಾಸ್ರವ ಭೇದಗಳು ೧೧; [೧] ನಿರ್ವರ್ತನಾಧಿಕರಣ, ಇದರ ಲ್ಲಿ ದೇಹ ದುಃಪ್ರಯುಕ್ತ ನಿರ್ವರ್ತನಾಧಿಕರಣ (ಶರೀರದಿಂದ ಕುಕೃತಿಮಾಡು ವುದು] ಉಪಕರಣ ನಿರ್ವರ್ತನಾಧಿಕರಣ [ಶಸ್ತ್ರಾದಿ ಹಿಂಸೋಪಕರಣಗಳನ್ನು ಮಾಡುವುದು] ಎಂಬ ಎರಡು ಪ್ರಕಾರಗಳು. (೨) ನಿಕ್ಷೇಪಾಧಿಕರಣ ನಿಕ್ಷೇಪ= ಎತ್ತುವುದು. ಇದರಲ್ಲಿ ಸಹಸಾನಿಕ್ಷೇಪ, (ಭೀತಿ ಆತುರತೆ ಮುಂ. ಗಳಿಂದ ಪುಸ್ತಕ ಕಮಂಡುಲು ಮೊದಲಾದುವನ್ನು ಒಮ್ಮೆಲಿ ಚೆಲ್ಲುವುದು) ಅನಾಭೋಗ ನಿಕ್ಷೇಪ (ಆತುರತೆಯಿಲ್ಲದೆಯೂ ಚೆಲ್ಲುವುದು) ದುಃಪ್ರಮೃಷ್ಟ ನಿಕ್ಷೇಪ (ದುಷ್ಟತನ

ದಿಂದ ಇಲ್ಲದೆ ಎಚ್ಚರಗೇಡಿತನದಿಂದ ಉಪಕರಣಗಳನ್ನು ಇಡುವುದು) ಅಪ್ರತ್ಯವೇಕ್ಷಿತ ನಿಕ್ಷೇಪ (ಸ್ವಲ್ಪವೂ ನೋಡದೆ ಉಪಕರಣಗಳನ್ನಿಡುವುದು) ಎಂಬ ನಾಲ್ಕು ಪ್ರಕಾರಗಳು; ೩ ಸಂಯೋಗಾಧಿಕರಣ– ಇದರಲ್ಲಿ ಉಪಕರಣ ಸಂಯೋಗ (ಪುಸ್ತಕಾದಿ ಉಪಕರಣಗಳನ್ನು ಬಿಸಿಲಲ್ಲಿ ಕಾಯ್ದ ಪಿಂಛದಿಂದ ಒರೆಸುವುದು ಮುಂ.) ಭಕ್ತಪಾನ ಸಂಯೋಗ (ಅನ್ನಪಾನಗಳಲ್ಲಿ ಬೇರೆ ವಿಧದ ಅನ್ನಪಾನಗಳ ಬೆರಕೆ ಮಾಡುವುದು) ಎಂಬ ಎರಡು ಪ್ರಕಾರಗಳು. ೪ ನಿಸರ್ಗಾಧಿಕರಣ- ಇದರಲ್ಲಿ ಮನೋನಿಸರ್ಗ (ದುಷ್ಕೃತ್ಯಗಳಲ್ಲಿ ಮನಸ್ಸನ್ನು ತೊಡಗಿಸುವುದು), ವಾಗ್ನಿಸರ್ಗ (ಅಭದ್ರವಚನ), ಕಾಯನಿಸರ್ಗ (ಅಯೋಗ್ಯವಾಗಿ ಶರೀರ ಚಲನವಲನ) ಎಂಬ ಮೂರು ಪ್ರಕಾರಗಳು. ಈ ಮೇರೆಗೆ ಅಜೀವಾಸ್ರವಾಧಿಕರಣಗಳು ಒಟ್ಟಿಗೆ ೧೧. ಇವು ಸಾಮಾನ್ಯ- ಆಸ್ರವ ಭೇದಗಳು.

ವಿಶೇಷ (ಜ್ಞಾನಾವರಣಾದಿ ಕರ್ಮಗಳ) ಆಸ್ರವಗಳು: —

ಜ್ಞಾನಾವರಣ ಕರ್ಮಾಸ್ರವಕಾರಣಗಳು– ೧ ಪ್ರದೋಷ (ಪರರ ಜ್ಞಾನವನ್ನು ಹೊಗಳದೆ ಮೌನವನ್ನು ಧರಿಸುವುದು) ೨ ನಿಹ್ನವ (ನಾನರಿಯೆನೆಂದು ತನ್ನ ಜ್ಞಾನವನ್ನು ಮರೆ ಮಾಡಿಕೊಳ್ಳುವುದು) ೩ ಮಾತ್ಸರ್ಯ (ಶಿಷ್ಯನು ತನ್ನನ್ನು ಸರಿಗಟ್ಟುವನೆಂದು ಕಲಿಸದಿರುವುದು) ೪ ಅಂತರಾಯಭಾವ- (ಜ್ಞಾನಪ್ರಸಾರಕ್ಕೆ ಅಡ್ಡಿಗಳನ್ನು ತರುವುದು.) ೫ ಆಸಾದನ (ಪರರ ಜ್ಞಾನವನ್ನು ವರ್ಜಿಸುವುದು) ೬ ಉಪಘಾತ (ಪ್ರಶಂಸನೀಯ ಜ್ಞಾನಕ್ಕೆ ದೋಷಾರೋಪ.)

ಅಸದ್ವೇದನೀಯ ಕರ್ಮಾಸ್ರವಕಾರಣಗಳು— ದುಃಖ, ಶೋಕ, ತಾಪ, ಆಕ್ರಂದನ, ವಧ, ಪರಿದೇವನ (ವಿಲಾಪ)ಗಳನ್ನು ತಾನು ಮಾಡುವುದು, ಪರರಿಂದ ಮಾಡಿಸುವುದು ಮತ್ತು ಉಭಯ ವಿಧ; ಸದ್ವೇದನೀಯ ಕರ್ಮಾಸ್ರವಕಾರಣಗಳು- ೧ ಭೂತ ವ್ರತಿ ದಯೆ (ಭೂತ= ಜೀವ; ವ್ರತಿ=ಅಹಿಂಸಾದಿವ್ರತವುಳ್ಳ ಮುನಿ; ಇವರಲ್ಲಿ ದಯೆ;) ೨ ದಾನ (ಆಹಾರೌಷಧಧನದಾನ) ೩ ಸರಾಗಸಂಯಮ ಮುಂ. ದುಷ್ಟ ಕರ್ಮಗಳನ್ನು ಅಡಗಿಸುವ ವಿಷಯದಲ್ಲಿರುವ ಪ್ರೀತಿಯುಳ್ಳವನು ಸರಾಗನು; ಸರಾಗನ ಸಂಯಮವು ಸರಾಗಸಂಯಮವು; ಕ್ಷಾಂತಿ (ಕ್ರೋಧಾದಿತ್ಯಾಗ), ಶೌಚ (ಲೋಭತ್ಯಾಗ)

ಮೋಹನೀಯ ಕರ್ಮದಲ್ಲಿ ದರ್ಶನಮೋಹನೀಯ, ಚಾರಿತ್ರಮೋಹನೀಯ ಎಂಬ ಎರಡು ಪ್ರಕಾರಗಳು.

ದರ್ಶನಮೋಹನೀಯ ಕರ್ಮಾಸ್ರವಕಾರಣಗಳು– ಕೇವಲಿ, ಶಾಸ್ತ್ರ, ಮುನಿಸಂಘ, ಅಹಿಂಸಾಧರ್ಮ, ದೇವ ಇವರ ಮೇಲೆ ದೋಷಾರೋಪ ಮಾಡುವುದು. ಉದಾ:- ಕೇವಲಿಗೆ ಹಸಿವು ನೀರಡಿಕೆಗಳುಂಟೆಂದಾಗಲಿ, ಅವನಿಗೆ ಕಂಬಲ ವಸ್ತ್ರ

ಪಾತ್ರಾದಿಗಳಿರುವ್ರವೆಂದಾಗಲಿ ಹೇಳುವ್ರದು. ಚಾರಿತ್ರ ಮೋಹನೀಯ ಕರ್ಮಾಸ್ರವಗಳು- ದ್ರವ್ಯ, ಕ್ಷೇತ್ರ, ಕಾಲ, ಭಾವಗಳನ್ನನುಸರಿಸಿ ಉಂಟಾಗುವ ಕಷಾಯಗಳ ಉದಯದಿಂದ ತೀವ್ರಪರಿಣಾಮವಾಗುವುದು ಚಾರಿತ್ರಮೋಹನೀಯ ಕರ್ಮದ ಆಸ್ರವದ ಕಾರಣವು. ಆತ್ಮಜ್ಞಾನಿಯಾದ ತಪಸ್ವಿಯನ್ನು ನಿಂದಿಸುವುದು, ಧರ್ಮಹಾನಿಮಾಡುವುದು ಮೊದಲಾದುವು ತೀವ್ರ ಪರಿಣಾಮದ ಕಾರ್ಯಗಳು.

ನರಕಾಯುಃ ಕರ್ಮಾಸ್ರವಕಾರಣಗಳು- ಬಹುಲಾರಂಭಗಳೂ ಬಹುಪರಿಗ್ರಹಗಳೂ ನರಕಾಯುಷ್ಯದ ಕಾರಣಗಳು.

ತಿರ್ಯಗಾಯುಃ ಕರ್ಮಾಸ್ರವಕಾರಣಗಳು- ಚಾರಿತ್ರಮೋಹದ ಉದಯದಿಂದ ಉತ್ಪನ್ನವಾಗುವ ಕುಟಿಲ ಸ್ವಭಾವವು ತಿರ್ಯಗ್ಯೋನಿಯ ಆಸ್ರವದ ಕಾರಣವು

ಮನುಷ್ಯಾಯುಃ ಕರ್ಮಾಸ್ರವದ ಕಾರಣಗಳು- ಅಲ್ಪಾರಂಭ, ಅಲ್ಪಪರಿಗ್ರಹ, ಸ್ವಾಭಾವಿಕ ಮಾರ್ದವ.

ಚತುರ್ಗತ್ಯಾಸ್ರವಕಾರಣ- ದಿಗ್ವ್ರತ, ದೇಶವ್ರತ ಮೊದಲಾದ ಏಳು ಶೀಲಗಳು, ಅಹಿಂಸಾದಿ ಪಂಚವ್ರತಗಳು ಇವ್ರಗಳನ್ನು ಧರಿಸದಿರುವುದು. ಇವು ಸಾಮಾನ್ಯವಾಗಿ ಮನುಷ್ಯಾದಿ ಚತುರ್ಗತಿಗಳ ಆಸ್ರವಕ್ಕೆ ಕಾರಣಗಳು. ದೇವಾಯುಃಕರ್ಮಾಸ್ರವಕಾರಣ- ಸರಾಗ ಸಂಯಮ (ಕರ್ಮನಾಶದಲ್ಲಿಯೂ ವ್ರತಾದಿ ಶುಭಾಚರಣದಲ್ಲಿಯೂ ಪ್ರೀತಿ), ಸಂಯಮಾಸಂಯಮ (ಸಂಯಮ- ತ್ರಸಜೀವ ಹಿಂಸಾತ್ಯಾಗ; ಅಸಂಯಮ- ಸ್ಥಾವರ ಜೀವ ಹಿಂಸೆಯನ್ನು ಬಿಡಲಾರದಿರುವುದು; ಇವೆರಡೂ ಪರಿಣಾಮಗಳು ಕೂಡಿ ಸಂಯಮಾಸಂಯಮ. ) ಅಕಾಮನಿರ್ಜರೆ (ಪರಾಧೀನತೆಯಿಂದ ಹಸಿವು ಮೊದಲಾದುವನ್ನು ಸಹಿಸುವುದು ಮುಂ.) ಬಾಲತಪಸ್ಸು ( ಆತ್ಮಜ್ಞಾನವಿಲ್ಲದ ತಪಸ್ಸು.), ಧರ್ಮಾಯತನ ಸೇವೆ, ಧರ್ಮಶ್ರವಣ, ಸಮ್ಯಕ್ತ್ವ ಮುಂ. ನಾಮಕರ್ಮಾಸ್ರವಗಳು ಮನೋವಾಕ್ಕಾಯ ಕುಟಿಲತೆ, ಶಾಸ್ತ್ರವಿರುದ್ಧವರ್ತನ ಇವುಗಳಿಂದ ಅಶುಭನಾಮ ಕರ್ಮಾಸ್ರವಗಳೂ, ಮನೋವಾಕ್ಕಾಯ ಸರಲತೆ, ಶಾಸ್ತ್ರೋಕ್ತಾಚರಣಗಳಿಂದ ಶುಭನಾಮಕರ್ಮಾಸ್ರವಗಳೂ, ಆಗುವುವು. ತೀರ್ಥಕರ ನಾಮಾಸ್ರವಕಾರಣ- ದರ್ಶನ ವಿಶುದ್ಧಿ (ನಿರ್ಮಲ ಸಮ್ಯಕ್ತ್ವ), ವಿನಯ ಸಂಪನ್ನತೆ (ದರ್ಶನಾದಿಗಳಲ್ಲಿ ವಿನಯ) ಶೀಲವ್ರತಾನತೀಚಾರ (ಶೀಲಗಳನ್ನೂ ವ್ರತಗಳನ್ನೂ ಚೆನ್ನಾಗಿ ಪಾಲಿಸುವುದು) ಅಭೀಕ್ಷ್ಣಜ್ಞಾನೋಪಯೋಗ (ನಿರಂತರ ಜ್ಞಾನಾಭ್ಯಾಸ), ಸಂವೇಗ (ಸಂಸಾರ ದುಃಖಗಳಿಗಾಗಿ ಅಂಜಿಕೆ), ಯಥಾಶಕ್ತಿತ್ಯಾಗ(ದಾನ), ಯಥಾಶಕ್ತಿ ತಪಸ್ಸು, ಸಾಧುಸ

ಮಾಧಿ (ಸಾಧುಪಾಲನ), ವೈಯಾವೃತ್ಯಕರಣ (ರೋಗಿ, ಸಾಧು ಇವರ ಸೇವೆ), ಅರ್ಹದ್ಭಕ್ತಿ, ಆಚಾರ್ಯಭಕ್ತಿ, ಉಪಾಧ್ಯಾಯ ಭಕ್ತಿ, ಶಾಸ್ತ್ರಾನುರಾಗ, ಆವಶ್ಯಕಾಪರಿಹಾಣಿ (ಸಾಮಯಿಕಸ್ತವ ಮುಂತಾದ ಆವಶ್ಯಕಕ್ರಿಯೆಗಳಲ್ಲಿ ಹಾನಿಯನ್ನು ತಂದುಕೊಳ್ಳದಿರುವುದು), ಮಾರ್ಗಪ್ರಭಾವನೆ (ಸ್ಯಾದ್ವಾದ ವಿದ್ಯಾಧ್ಯಯನದಿಂದ ಪರಮತಗಳ ಅಜ್ಞಾನವನ್ನು ಹೋಗಲಾಡಿಸಿ ಜೈನ ಧರ್ಮದ ಮಹಿಮೆಯನ್ನು ಪ್ರಕಟಿಸುವುದು) ಪ್ರವಚನವಾತ್ಸಲ್ಯ (ಸಹ ಧರ್ಮಿಗಳಲ್ಲಿ ಆದರ) ಈ ಹದಿನಾರು ಭಾವನೆಗಳು.

ಗೋತ್ರಾಸ್ರವಕಾರಣ- ಆತ್ಮಸ್ತುತಿ ಪರನಿಂದೆ ಮುಂ. ನೀಚಗೋತ್ರಾಸವಕ್ಕೂ; ಆತ್ಮಸ್ತುತ್ಯಭಾವ, ಪರಪ್ರಶಂಸೆ ಮುಂ. ಉಚ್ಚಗೋತ್ರಾಸ್ರವಕ್ಕೂ ಕಾರಣಗಳು.

ಅಂತರಾಯ ಕರ್ಮಾಸ್ರವಕಾರಣ- ಪರರು ಮಾಡುತ್ತಿರುವ ದಾನ, ಭೋಗ, ಅವರಿಗಾಗುವ ಲಾಭ, ಅವರ ವೀರ್ಯ (ಬಲ) ಇವುಗಳಿಗೆ ವಿಘ್ನವನ್ನುಂಟು ಮಾಡುವುದು.

---

# ಆಸ್ರವತತ್ತ್ವ— ವ್ರತಗಳು.

ಜೀವನ ಉಪಯೋಗವು ಅಶುಭ, ಶುಭ, ಶುದ್ಧ ಎಂದು ಮೂರು ಬಗೆಯಾಗಿದೆ. ಶುದ್ಧೋಪಯೋಗವುಂಟಾಗುವವರೆಗೆ ಶುಭೋಪಯೋಗವು ಗ್ರಾಹ್ಯವಾಗಿದೆ. ಇಲ್ಲಿ ಶುಭೋಪಯೋಗಕ್ಕೆ ಸಹಾಯಕವಾದ ವ್ರತಗಳ ಪ್ರಕಾರಗಳು ಹೇಳಿವೆ.

ಹಿಂಸೆ, ಅನೃತ, ಚೌರ್ಯ, ಅಬ್ರಹ್ಮ (ಪರಸ್ತ್ರೀಸೇವನ), ಪರಿಗ್ರಹ (ವಸ್ತುವಾಹನಾದಿ) ಇವುಗಳಿಂದ ಬುದ್ಧಿಪೂರ್ವಕವಾಗಿ ವಿರಕ್ತನಾಗುವುದು ವ್ರತವೆನಿಸುವುದು. ಮಹಾವ್ರತವೆಂದೂ, ಅಣುವ್ರತವೆಂದೂ ವ್ರತವು ಎರಡು ಬಗೆಯಾಗಿದೆ. ಉದಾ:– ತ್ರಸ, ಸ್ಥಾವರಗಳೆಂಬ ಎರಡು ಬಗೆಯ ಜೀವಗಳ ಹಿಂಸೆಯನ್ನೂ ಪೂರ್ಣವಾಗಿ ಬಿಡುವುದು ಮಹಾವ್ರತವು; ಸ್ಥಾವರಜೀವಹಿಂಸೆಯು ಅನಿವಾರ್ಯವೆಂದು ತ್ರಸಜೀವ ಹಿಂಸೆಯನ್ನಷ್ಟೇ ಪೂರ್ಣವಾಗಿ ಬಿಡುವುದು ಅಣುವ್ರತವು. ಸ್ತ್ರೀಮಾತ್ರಪರಿಗ್ರಹತ್ಯಾಗವು ಮಹಾವ್ರತವು; ಪರಸ್ತ್ರೀಮಾತ್ರ ಪರಿಗ್ರಹತ್ಯಾಗವು ಅಣುವ್ರತವು; ಮಹಾವ್ರತವು ಮುನಿಗಳಿಗೆ ಸಾಧ್ಯವು; ಅಣುವ್ರತವು ಗೃಹಸ್ಥರಿಗೆ ಸಾಧ್ಯವು.

ಹಿಂಸಾ ವಿರತಿ, ಅನೃತವಿರತಿ, ಚೌರ್ಯವಿರತಿ, ಅಬ್ರಹ್ಮವಿರತಿ, ಪರಿಗ್ರಹವಿರತಿಗಳೆಂಬೀ ಐದು ವ್ರತಗಳ ಸ್ಥಿರತೆಗಾಗಿ ಐದೈದು ಭಾವನೆ(ಚಿಂತನೆ)ಗಳು ಹೇಳಿವೆ. ಹಿಂಸಾವಿರತಿವ್ರತಕ್ಕೆ ವಚನಗುಪ್ತಿ (ವಚನ ಪ್ರವೃತ್ತಿಯನ್ನು ತಡೆಯುವುದು), ಮನೋಗುಪ್ತಿ (ಮನಃಪ್ರವೃತ್ತಿಯನ್ನು ತಡೆವುದು), ಈರ್ಯಾಸಮಿತಿ (ಮೂರುವರೆ ಮೊಳ ದಾರಿಯನ್ನು ನಿಟ್ಟಿಸುತ್ತ ಹೆಜ್ಜೆಗಳನ್ನಿಕ್ಕುವುದು), ಆದಾನ ನಿಕ್ಷೇಪಣ ಸಮಿತಿ (ಸ್ಥಲವನ್ನು ಚೆನ್ನಾಗಿ ನಿರೀಕ್ಷಿಸಿ ವಸ್ತುಗಳನ್ನಿಡುವುದು, ಎತ್ತುವುದು), ಆಲೋಕಿತಪಾನ ಭೋಜನ (ಅನ್ನ, ಪಾನಗಳನ್ನು ಚೆನ್ನಾಗಿ ನಿರೀಕ್ಷಿಸಿ ಸ್ವೀಕರಿಸುವುದು) ಎಂಬ ಐದು ಭಾವನೆಗಳು. ಅನೃತವಿರತಿ ವ್ರತಕ್ಕೆ ಕ್ರೋಧ-ಲೋಭ-ಭೀತಿ- ಹಾಸ್ಯ ತ್ಯಾಗ, ಅನುವೀಚಿಭಾಷಣ (ಪಾಪರಹಿತನಾಗಿ ಶಾಸ್ತ್ರಾನುಸಾರವಾಗಿ ಮಾತಾಡುವದು) ಎಂಬ ಐದು ಭಾವನೆಗಳು. ಚೌರ್ಯವಿರತಿ ವ್ರತಕ್ಕೆ ಶೂನ್ಯಗೃಹದಲ್ಲಿರುವುದು, ಪರರು ಬಿಟ್ಟ ಮನೆಯಲ್ಲಿರುವುದು, ಅನ್ಯರನ್ನು ಪ್ರತಿಬಂಧಿಸದಿರುವುದು, ಶಾಸ್ತ್ರವಿಹಿತ ಭಿಕ್ಷಾಗ್ರಹಣ, ಸಧರ್ಮಿಗಳೊಡನೆ ವಿತಂಡವಾದ ಮಾಡದಿರುವುದು ಎಂಬಿವು ಐದು ಭಾವನೆಗಳು. ಅಬ್ರಹ್ಮವಿರತಿವ್ರತಕ್ಕೆ ಅಂಗನಾನುರಾಗಜನಕಕಥಾಶ್ರವಣತ್ಯಾಗ, ತನ್ಮನೋಹರಾಂಗನಿರೀಕ್ಷಣತ್ಯಾಗ, ಪೂರ್ವರತಾನುಸ್ಮರಣತ್ಯಾಗ, ಉದ್ದೀಪಕ- ಪುಷ್ಟಿಜನಕ- ಆಹಾರ ಸೇವನ ತ್ಯಾಗ, ಶೋಭಾಜನಕ ವಸ್ತ್ರಾಲಂಕಾರತ್ಯಾಗ ಎಂಬಿವು ಐದು ಭಾವನೆಗಳು. ಪಂಚೇಂದ್ರಿಯುಗಳಿಗೆ ಇಷ್ಟವಾದ ವಿಷಯಗಳಲ್ಲಿ ರಾಗವನ್ನೂ, ಅನಿಷ್ಟವಾದ ವಿಷಯಗಳಲ್ಲಿ ದ್ವೇಷವನ್ನೂ ಬಿಡುವುದೆಂಬೀ ಐದು ಪರಿಗ್ರಹವಿರತಿ ವ್ರತದ ಭಾವನೆಗಳು.

ಸರ್ವ ಪ್ರಾಣಿಗಳಲ್ಲಿ ಮೈತ್ರೀಭಾವನೆಯೂ, ಗುಣಾಧಿಕರಲ್ಲಿ ಪ್ರಮೋದ ಭಾವನೆಯೂ, ದುಃಖಿತರಲ್ಲಿ ಕಾರುಣ್ಯಭಾವನೆಯೂ, ಮಿಥ್ಯಾ ದೃಷ್ಟಿಗಳಲ್ಲಿ ಔದಾಸೀನ್ಯಭಾವನೆಯೂ, ಇರಬೇಕು. ಸಂವೇಗ ವೈರಾಗ್ಯಗಳುಂಟಾಗುವುದಕ್ಕೆ ಜಗತ್ತಿನ ಸ್ವಭಾವವನ್ನೂ, ಶರೀರಸ್ವಭಾವವನ್ನೂ ಚಿಂತಿಸುತ್ತಿರಬೇಕು.

ಹಿಂಸೆ, ಅನೃತ ಮೊದಲಾದುವು ಅವ್ರತಗಳು. ಅವ್ರತಗಳಿಂದ ಈ ಲೋಕದಲ್ಲಿ ರಾಜದಂಡವೂ, ನರಕದಲ್ಲಿ ಛೇದನಭೇದನಾದಿ ದುಃಖವೂ ಉಂಟಾಗುವುವೆಂದೂ, ಅವು ದುಃಖರೂಪವಾಗಿ ಇರುವುವೆಂದೂ ಭಾವಿಸುತ್ತಿರಬೇಕು.

ವ್ರತಗಳನ್ನಾಚರಿಸುವವರು ಮಾಯೆ, ಮಿಥ್ಯಾತ್ವ, ನಿದಾನ ಎಂಬ ಮೂರು ಶಲ್ಯಗಳಿಲ್ಲದವರಾಗಿರಬೇಕು. ಮನಸ್ಸಿನಲ್ಲೊಂದು, ಕ್ರಿಯೆಯಲ್ಲೊಂದು ಈ ತರದ ಸ್ಥಿತಿಯು ಮಾಯಾಶಲ್ಯವು; ತತ್ತ್ವಾರ್ಥದಲ್ಲಿ ಶ್ರದ್ಧೆಯಿಲ್ಲದಿರುವುದು ಮಿಥ್ಯಾತ್ವಶಲ್ಯವು; ಭವಿಷ್ಯತ್ಕಾಲದಲ್ಲಿ ಇಂತಹ ವಿಷಯೋಪಭೋಗಗಳು ದೊರೆಯು

ಬೇಕೆಂದು ಬಯಸುವುದು ನಿದಾನಶಲ್ಯವು; ಶಲ್ಯಗಳಿರುವವರೆಗೆ ಅಹಿಂಸಾದಿಗಳ ನ್ನಾಚರಿಸಿದರೂ ಅವು ವ್ರತಗಳೆನಿಸಲಾರವು

ವ್ರತಧಾರಣ ಮಾಡುವವರಲ್ಲಿ ಅಗಾರಿ (ಗೃಹಸ್ಥ), ಅನಗಾರ (ಗೃಹತ್ಯಾಗಿ-ಮುನಿ) ಎಂಬ ಎರಡು ವರ್ಗಗಳುಂಟು. ಅಗಾರಿಗೆ ಶ್ರಾವಕನೆಂದೂ ಹೆಸರುಂಟು.

ಅಣುವ್ರತ- ಅಗಾರಿಯು ಹಿಂಸಾದಿ ಪಂಚವಿಧ ಪಾಪಗಳನ್ನು ಏಕದೇಶ ವಾಗಿ ಬಿಡುವುದು ಅಣುವ್ರತವು; ಉದಾ: ದ್ವೀಂದ್ರಿಯ ಮೊದಲಾದ ತ್ರಸ ಜೀವ ಗಳ ಹಿಂಸೆಯನ್ನು ಮಾಡದಿರುವುದು ಅಹಿಂಸಾಣುವ್ರತವು. ಇವು ಐದು.

ಗುಣವ್ರತಗಳೂ ಶಿಕ್ಷಾ ವ್ರತಗಳೂ- ದಿಗ್ವಿರತಿ, ದೇಶವಿರತಿ, ಅನರ್ಥ ದಂಡ ವಿರತಿ ಈ ಮೂರು ಗುಣವ್ರತಗಳು. ಸಾಮಯಿಕ, ಪ್ರೋಷಧೋಪವಾಸ, ಉಪ ಭೋಗ ಪರಿಭೋಗ ಪರಿಮಾಣ, ಅತಿಥಿ ಸಂವಿಭಾಗ ಈ ನಾಲ್ಕು ಶಿಕ್ಷಾವ್ರತಗಳು. ಈ ಏಳಕ್ಕೂ ಕೂಡಿ ಶೀಲವ್ರತಗಳೆಂದೆನ್ನುವರು. ಈ ಏಳು ಶೀಲವ್ರತಗಳು, ಐದು ಅಣು ವ್ರತಗಳು ಕೂಡಿ ೧೨ ವ್ರತಗಳನ್ನು ಧರಿಸುವವನು ವ್ರತಿಶ್ರಾವಕ (ವ್ರತಪ್ರತಿಮಾಧಾರಿ) ಎನಿಸಿಕೊಳ್ಳುವನು.

ದಿಗ್ವ್ರತ- ಲೋಭ. ಆರಂಭ ಮೊದಲಾದುವನ್ನು ಬಿಡುವುದಕ್ಕಾಗಿ ನಾಲ್ಕೂ ದಿಕ್ಕುಗಳಲ್ಲಿರುವ ನದಿ, ಪರ್ವತ ಮೊದಲಾದುವುಗಳ ಮೇರೆಯನ್ನು ಗೊತ್ತು ಮಾಡಿ ಅವನ್ನು ದಾಟಿ ಆಮರಣವೂ ಹೋಗುವುದಿಲ್ಲವೆಂದು ನಿಶ್ಚಯ ಮಾಡುವುದು.

ದೇಶವ್ರತ- ದಿಗ್ವ್ರತದಲ್ಲಿ ಗೊತ್ತು ಮಾಡಿದ ಮೇರೆಗಳಲ್ಲಿಯೂ ಈಚೆಗೆ ಸಮೀಪದ ನದೀ, ಪರ್ವತಗಳ ಆಚೆಗೆ ಆಮರಣವೂ ಹೋಗುವುದಿಲ್ಲವೆಂದು ನಿಶ್ಚ ಯಿಸುವುದು ದೇಶವ್ರತವು.

ಅನರ್ಥದಂಡ ವಿರತಿವ್ರತ- ಪಾಪೋಪದೇಶ, ಹಿಂಸಾದಾನ, ಅಪಧ್ಯಾನ, ದುಃಶ್ರುತಿ, ಪ್ರಮಾದಚರ್ಯೆ ಎಂಬ ಐದು ತರದ ಅನರ್ಥದಂಡಗಳನ್ನು ಬಿಡು ವುದು ದೇಶವ್ರತವು.

ಪಾಪೋಪದೇಶ- ಪ್ರಾಣಿಗಳಿಗೆ ದುಃಖವುಂಟಾಗುವ ಹಿಂಸೆ, ಕ್ಲೇಶ, ಮಾಟ ಮುಂ. ಉಪದೇಶಿಸುವುದು ಹಿಂಸಾದಾನ- ಕೊಡಲಿ, ಕತ್ತಿ, ವಿಷ ಮುಂ. ಹಿಂಸಾಸಾಧನಗಳನ್ನು ಕೊಡುವುದು. ಅಪಧ್ಯಾನ- ಯಾವುದೊಂದು ಪ್ರಾಣಿ ಯನ್ನು ಸೆರೆಯಲ್ಲಿಡಬೇಕೆಂದು, ಕೊಲ್ಲಬೇಕೆಂದು ಅವಯವಹೀನ ಮಾಡಬೇ ಕೆಂದು ಧ್ಯಾನಿಸುವುದು, ಇಲ್ಲವೆ ಕಾಮುಕನಾಗಿ ಪರಸ್ತ್ರೀಯನ್ನು ಧ್ಯಾನಿಸುವುದು. ದುಃಶ್ರುತಿ- ಆರಂಭ, ಸಂಗ, ಮಿಥ್ಯಾತ್ವ, ರಾಗ, ದ್ವೇಷಗಳಿಂದ ಮನಸ್ಸನ್ನು ಕಲುಷಮಾಡುವ ಶಾಸ್ತ್ರಗಳನ್ನು ಓದುವುದು, ಅಂತಹ ಮಾತುಗಳನ್ನು ಕೇಳ

ವುದು. ಪ್ರಮಾದ ಚರ್ಯೆ- ಸುಮ್ಮನೆ ಭೂಮಿಯನ್ನಗೆಯುವುದು, ನೀರನ್ನೆರಚುವುದು. ಬೆಂಕೆಯನ್ನು ಹತ್ತಿಸುವುದು, ವನಸ್ಪತಿಗಳನ್ನು ಕಡಿಯುವುದು ಮುಂ.

ಸಾಮಯಿಕವ್ರತ- ಕಾಲಮರ್ಯಾದೆಯನ್ನು ಮಾಡಿಕೊಂಡು ಪ್ರಾತರ್ಮಧ್ಯಾಹ್ನ ಸಾಯಾಹ್ನಗಳಲ್ಲಿ ಪಾಪಕ್ರಿಯಾವಿರಕ್ತನಾಗಿ, ರಾಗ ದ್ವೇಷಗಳನ್ನು ಬಿಟ್ಟು ಎಲ್ಲ ಪ್ರಾಣಿಗಳಲ್ಲಿ ಸಾಮ್ಯಭಾವವನ್ನು ಧರಿಸಿ ಶುದ್ಧಾತ್ಮಸ್ವರೂಪವನ್ನು ಧ್ಯಾನಿಸುವುದು.

ಪ್ರೋಷಧೋಪವಾಸ- ಅಷ್ಟಮಿ, ಚತುರ್ದಶಿ ಈದಿನಗಳಲ್ಲಿ ಎಲ್ಲ ಆರಂಭಗಳನ್ನು ಬಿಟ್ಟು, ಇಂದ್ರಿಯ ವಿಷಯಗಳನ್ನೂ, ನಾಲ್ಕು ತರದ ಆಹಾರಗಳನ್ನೂ ಬಿಟ್ಟು ಹದಿನಾರು ಪ್ರಹರಗಳನ್ನು (ಹಿಂದಿನ ದಿವಸದ ೨ನೆಯ ಪ್ರಹರದಿಂದ ಪಾರಣೆಯ ದಿನವದ ೨ ಪ್ರಹರಗಳ ವರೆಗೆ) ಕಳೆಯುವುದು.

ಭೋಗೋಪಭೋಗ ಪರಿಮಾಣವ್ರತ- ಒಂದು ಬಾರಿ ಮಾತ್ರ ಉಪಭೋಗಿಸಲು ಬರುವಂತಹ ಆಹಾರ ಪದಾರ್ಥ, ಪುಷ್ಪ ತಾಂಬೂಲ ಮುಂ ಭೋಗಗಳು. ಹಲವು ಬಾರಿ ಉಪಭೋಗಿಸಲು ಬರುವಂತಹ ಅಲಂಕಾರ, ವಸ್ತ್ರ, ಶಯನ ವಾಹನ ಮುಂ. ಉಪಭೋಗಗಳು. ಭೋಗೋಪಭೋಗ ಪದಾರ್ಥಗಳಲ್ಲಿ ಕೆಲವನ್ನಿಟ್ಟುಕೊಂಡು ಕೆಲವನ್ನು ಬಿಡುವುದು.

ಅತಿಥಿಸಂವಿಭಾಗವ್ರತ- ಮುಮುಕ್ಷುವಾದ ಸಂಯಮಿ, ಅಂತರಂಗ ಬಹಿರಂಗ ಶುದ್ಧನಾದ ವ್ರತಿ ಇವರಿಗೆ ಶುದ್ಧ ಮನಸ್ಸಿನಿಂದ ಆಹಾರವನ್ನು ಕೊಡುವುದು.

ಗುಣವ್ರತಗಳನ್ನೂ ಶಿಕ್ಷಾವ್ರತಗಳನ್ನೂ ಗೃಹಸ್ಥಶ್ರಾವಕನು ಧರಿಸಬೇಕು. ಸಲ್ಲೇಖನಾವ್ರತ- ಮರಣವೊದಗಿದಾಗ ಮಾಡಬೇಕಾದ ವ್ರತವು. ಮರಣವು ಸಮೀಪಿಸಲು ಶರೀರವನ್ನೂ ಕಷಾಯಗಳನ್ನೂ ಕ್ರಮದಿಂದ ಕೃಶ ಮಾಡುತ್ತ ಧರ್ಮಧ್ಯಾನದಲ್ಲಿ ಏಕಾಗ್ರ ಮನಸ್ಕನಾಗಿ ಪ್ರಾಣತ್ಯಾಗ ಮಾಡುವುದು ಸಲ್ಲೇಖನಾವ್ರತವು. ಇದು ಪರಮೋಪಕಾರಕವೂ, ಶುಭಗತಿಪ್ರದವೂ ಆದುದರಿಂದ ಶ್ರಾವಕನು ಈ ವ್ರತವನ್ನಾಚರಿಸಬೇಕು.

ವ್ರತಗಳ ಸ್ಥಿರತೆಗಾಗಿ ಐದೈದು ಭಾವನೆಗಳನ್ನು ಹೇಳಿರುವಂತೆ ಐದೈದು ಅತೀಚಾರ (ದೋಷ)ಗಳೂ ಹೇಳಿವೆ. ಅತೀಚಾರಗಳು ಒದಗದಂತೆ ವ್ರತಗಳನ್ನಾಚರಿಸಬೇಕು.

ದಾನ- ತನ್ನ ಮತ್ತು ಪರರ ಉಪಕಾರಕ್ಕಾಗಿ ತನ್ನದನ್ನು (ಆಹಾರ ವೊದಲಾದುವನ್ನು) ಪರರಿಗೆ ಕೊಡುವುದು; ವಿಧಿ, ದ್ರವ್ಯ, ದಾತೃ, ಪಾತ್ರ ಇವುಗಳ

ವಿಶೇಷದಿಂದ ದಾನದಲ್ಲಿ ಉತ್ತಮ, ಮಧ್ಯಮ, ಜಘನ್ಯ ಎಂಬ ಭೇದಗಳುಂಟಾಗುವುವು.

---

# ೪. ಬಂಧ ತತ್ತ್ವ

ಸಕಷಾಯತ್ವಾಜ್ಜೀವಃ ಕರ್ಮಣೋಯೋಗ್ಯಾನ್ ಪುದ್ಗಲಾನಾದತ್ತೇಸಬಂಧಃ ।

ಈ ಲೋಕವೆಲ್ಲ ಪುದ್ಗಲಪರಮಾಣುಗಳಿಂದ ತುಂಬಿದೆ; ಅವುಗಳಲ್ಲಿ ಕರ್ಮವರ್ಗದ ಪರಮಾಣುಗಳೂ ಅಲ್ಲಲ್ಲಿ ಇರುವುವು. ಆತ್ಮನು ಮನೋವಾಕ್ಕಾಯಯೋಗಗಳಿಂದ ಚಂಚಲನಾಗಿ ಕಷಾಯಯುಕ್ತನಾಗಲು ಆತನ ಸುತ್ತಲು ಇರುವ ಕರ್ಮಪರಮಾಣುಗಳು ಕರ್ಮಸ್ವರೂಪವನ್ನು ತಾಳಿ ಆತನನ್ನಂಟಿಕೊಳ್ಳುವುವು. ಇದೇ (ಕರ್ಮ) ಬಂಧವೆನಿಸುವುದು.

ಮಿಥ್ಯಾದರ್ಶನ, ಅವಿರತಿ, ಪ್ರಮಾದ, ಕಷಾಯ, ಯೋಗಗಳು ಬಂಧಹೇತುಗಳು. ಅತತ್ತ್ವಗಳ ಮೇಲಿನ ಶ್ರದ್ಧೆಯು ಮಿಥ್ಯಾದರ್ಶನವು; ಗೃಹಿತ ಮಿಥ್ಯಾದರ್ಶನ, ಅಗೃಹೀತ ಮಿಥ್ಯಾ ದರ್ಶನ ಎಂದು ಇದು ಎರಡು ಬಗೆಯಾಗಿದೆ. ಪರೋಪದೇಶದಿಂದ ಇಲ್ಲವೆ ಕುಶಾಸ್ತ್ರಶ್ರವಣದಿಂದುಂಟಾಗುವುದು ಗೃಹೀತಮಿಥ್ಯಾದರ್ಶನವು; ಪೂರ್ವಾರ್ಜಿತ ಕರ್ಮದಿಂದುಂಟಾಗುವುದು ಅಗೃಹೀತಮಿಥ್ಯಾದರ್ಶನವು. ಷಟ್ಕಾಯ ಜೀವಗಳ ಹಿಂಸೆಯನ್ನು ಬಿಡದಿರುವುದೂ, ಪಂಚೇಂದ್ರಿಯಗಳನ್ನು ಸ್ವಾಧೀನದಲ್ಲಿಟ್ಟುಕೊಳ್ಳದಿರುವದೂ ಅವಿರತಿಯು. ಭಾವಶುದ್ಧಿ ಮೊದಲಾದ ಎಂಟು ಶುದ್ಧಿಗಳು, ದಶಧರ್ಮಗಳು ಇವುಗಳಲ್ಲಿ ಉತ್ಸಾಹರಾಹಿತ್ಯವು ಪ್ರಮಾದವು; ಕ್ರೋಧಮಾನ ಮಾಯಾ ಲೋಭಗಳೂ, ಹಾಸ್ಯ, ರತಿ ಅರತಿ, ಶೋಕ,ಭಯ ಜುಗುಪ್ಸೆಗಳೆಂಬಿವೂ ಕಷಾಯಗಳು. ಮನೋವಾಕ್ಕಾಯಯೋಗಗಳೂ, ಆಹಾರಕಯೋಗ, ಆಹಾರಕಮಿಶ್ರಯೋಗಗೂ ಯೋಗಗಳು.

ಇವೆಲ್ಲವುಗಳಿಂದ ಶುಭಾಶುಭ ಕರ್ಮಬಂಧವಾಗುವುದು. ಜೀವನಿಗೆ ಕರ್ಮಬಂಧವಾಗುವಾಗ ಆತನ ಕಷಾಯಗಳು ಮಂದವಾಗಿದ್ದರೆ ಕರ್ಮಗಳ ಸ್ಥಿತಿಬಂಧವೂ, ಅನುಭಾಗಬಂಧವೂ ಆಗುವುವು; ತೀವ್ರವಾಗಿದ್ದರೆ ತೀವ್ರಬಂಧವಾಗುವುದು

ಕರ್ಮವು ಪುದ್ಗಲರೂಪವಾದುದು; ಜೀವದ್ರವ್ಯಕ್ಕೆ ವಿರುದ್ಧವಾದುದು; ಜೀವನ ರಾಗದ್ವೇಷಾದಿ ವಿಭಾವಗಳಿಂದ ಆತನಲ್ಲಿ ಕರ್ಮದ ಆಸ್ರವವಾಗುವುದು; ರಾಗ ದ್ವೇಷಾದಿ ವಿಭಾವಗಳು ದ್ರವ್ಯಕರ್ಮಾಸ್ರವಕ್ಕೆ ನಿಮಿತ್ತಕಾರಣಗಳು,

ಉಪಾದಾನ ಕಾರಣಗಳಲ್ಲ; ಏಕೆಂದರೆ ಪುದ್ಗಲಗಳೇ ಪುದ್ಗಲಗಳ ಉಪಾದಾನಕಾರಣಗಳಾಗುವುವಲ್ಲದೆ ಪುದ್ಗಲಗಳಲ್ಲದ ಜೀವವಿಭಾವಗಳು ಕರ್ಮ ಪುದ್ಗಲಗಳ ಉಪಾದಾನಕಾರಣಗಳಾಗಲಾರವು. ಘಾತಿ ಮೊದಲಾದುವು ದ್ರವ್ಯಕರ್ಮಗಳು; ರಾಗದ್ವೇಷಾದಿ ಜೀವ ವಿಭಾವಗಳು ಭಾವ ಕರ್ಮಗಳು ಎನಿಸುವುವು.

ಕರ್ಮಾಸ್ರವದಿಂದ ಜೀವನಿಗೆ ಉಂಟಾಗುವ ಬಂಧವು ಪ್ರಕೃತಿಬಂಧ, ಸ್ಥಿತಿಬಂಧ, ಅನುಭಾಗ ಬಂಧ, ಪ್ರದೇಶಬಂಧ ಎಂದು ನಾಲ್ಕು ಬಗೆಯಾಗಿವೆ.

ಪ್ರಕೃತಿಯೆಂದರೆ ಸ್ವಭಾವವು; ಮುಂದೆ ಹೇಳುವ ಜ್ಞಾನಾವರಣೀಯ, ದರ್ಶನಾವರಣೀಯ, ವೇದನೀಯ, ಮೋಹನೀಯ, ಆಯು, ನಾಮ, ಗೋತ್ರ, ಅಂತರಾಯ ಎಂಬ ಎಂಟು ಬಗೆಯ ಕರ್ಮಗಳಿಗೂ ಒಂದೊಂದು ಸ್ವಭಾವವುಂಟು. ಜ್ಞಾನಾವರಣೀಯ ಕರ್ಮವು ಆತ್ಮನ ಜ್ಞಾನವನ್ನು ಆಚ್ಛಾದಿಸುವುದು; ದರ್ಶನಾವರಣೀಯ ಕರ್ಮವು ಆತ್ಮನ ದರ್ಶನವನ್ನು ಆಚ್ಛಾದಿಸುವುದು. ವೇದನೀಯ ಕರ್ಮವು ಆತ್ಮನಲ್ಲಿ ಸುಖದುಃಖಗಳನ್ನುಂಟು ಮಾಡುವುದು; ಮೋಹನೀಯ ಕರ್ಮವು ಆತ್ಮನಲ್ಲಿ ಭ್ರಮವನ್ನುಂಟು ಮಾಡುವುದು; ಆಯು ಕರ್ಮವು ಆತನನ್ನು ಯಾವುದೊಂದು ಶರೀರದಲ್ಲಿ ಕೆಲವು ಕಾಲ ಇರುವಂತೆ ಮಾಡುವುದು; ನಾಮ ಕರ್ಮವು ಆತ್ಮನಿಗಾಗಿ ಅಂಗೋಪಾಂಗಯುಕ್ತ ಶರೀರವನ್ನುಂಟು ಮಾಡುವುದು; ಗೋತ್ರಕರ್ಮವು ಆತ್ಮನನ್ನು ಉಚ್ಚನೀಚ ಗೋತ್ರಗಳಲ್ಲಿ ಹುಟ್ಟಿಸುವುದು; ಅಂತರಾಯ ಕರ್ಮವು ಆತ್ಮನ ಶಕ್ತಿ ದಾನ ಲಾಭ ಭೋಗ ಉಪಭೋಗ ಇವುಗಳಿಗೆ ವಿಘ್ನವನ್ನುಂಟುಮಾಡುವುದು ಕರ್ಮಗಳಲ್ಲಿ ಈ ಸ್ವಭಾವಗಳುಂಟಾಗುವುದು ಪ್ರಕೃತಿಬಂಧವೆನಿಸುವುದು. ಈ ಕರ್ಮ ಪ್ರಕೃತಿಯು ತನ್ನ ಸ್ವರೂಪವನ್ನು ಬಿಡದೆ ಆತ್ಮನಿಗೆ ಬಂಧಕವಾಗಿ ಇರುವ ಅವಸ್ಥೆಯು ಸ್ಥಿತಿಬಂಧವು; ಒಂದೊಂದು ಕರ್ಮದಲ್ಲಿ ತೀವ್ರ, ಮಧ್ಯಮ, ಮಂದ ಫಲವನ್ನು ಕೊಡುವ ಒಂದೊಂದು ಶಕ್ತಿಯುಂಟು; ಇದು ಅನುಭಾಗ ಬಂಧವು; ಕರ್ಮಗಳು ಆತ್ಮ ಪ್ರದೇಶದೊಡನೆ ಏಕಕ್ಷೇತ್ರಾವಗಾಹ ಸಂಬಂಧವುಳ್ಳುವಾಗುವುದು ಪ್ರದೇಶ ಬಂಧವು.

**ಕರ್ಮ ಪ್ರಕಾರಗಳು**– ಕರ್ಮಗಳು ಘಾತಿ, ಅಘಾತಿ, ಎಂದು ಎರಡು ಬಗೆಯಾಗಿವೆ. ಜೀವನ ಅನಂತ ಜ್ಞಾನಾದಿ ಸ್ವಾಭಾವಿಕ ಗುಣಗಳನ್ನು ನಾಶಗೊಳಿಸುವ ಕರ್ಮಗಳು ಘಾತಿ ಕರ್ಮಗಳು; ಇವು ಜ್ಞಾನಾವರಣೀಯ, ದರ್ಶನಾವರಣೀಯ, ಮೋಹನೀಯ, ಅಂತರಾಯ ಎಂದು ನಾಲ್ಕು ಬಗೆಯಾಗಿವೆ; ವೇದನೀಯ, ಆಯು, ನಾಮ, ಗೋತ್ರ ಎಂದು ಅಘಾತಿ ಕರ್ಮಗಳು ನಾಲ್ಕು ಬಗೆಯಾಗಿವೆ.- ಈ ಎರಡು ತರದ ಕರ್ಮಗಳಲ್ಲಿ ಒಟ್ಟಿಗೆ ೧೪೮ ಒಳಭೇದಗಳಾಗುವುವು.

ಇಲ್ಲಿ ಬಂಧಹೇತುಗಳಾದ ಕರ್ಮಗಳ ವಿಷಯವಾಗಿ ವೈದಿಕ, ಬೌದ್ಧ, ಜೈನ, ಧರ್ಮಗಳ ತುಲನಾತ್ಮಕ ವಿಚಾರವನ್ನು ಸಂಕ್ಷೇಪವಾಗಿ ಹೇಳುವೆವು.

ಕರ್ಮವು ನಿಯತವಾಗಿ ಒಂದೊಂದು ಫಲವನ್ನು ಕೊಡುವುದೆಂಬುದನ್ನು ಇತರ ಮತಗಳಂತೆ ಜೈನಮತವೂ ಒಪ್ಪುವುದು. ಭಾರತೀಯದರ್ಶನಗಳು ಹಲವು ವಿಷಯಗಳಲ್ಲಿ ಪರಸ್ಪರ ಭಿನ್ನವಾಗಿದ್ದರೂ ಕರ್ಮವು ಅಮೋಘವೆಂಬುದರಲ್ಲಿ ಐಕಮತ್ಯವುಳ್ಳವಾಗಿವೆ. ಪೂರ್ವಮೀಮಾಂಸೆಯು ಪರಬ್ರಹ್ಮ ವಿಚಾರವನ್ನು ಮಾಡದಿರುವುದರಿಂದ ಉತ್ತರಮೀಮಾಂಸೆಯಿಂದ ಭಿನ್ನವಾಗಿದೆ. ಸಾಂಖ್ಯ, ಯೋಗ ದರ್ಶನಗಳು ಆತ್ಮನಾನಾತ್ವವನ್ನು ಹೇಳುವುದರಿಂದ ಉತ್ತರ ಮೀಮಾಂಸೆಯಿಂದ (ವೇದಾಂತದಿಂದ) ಭಿನ್ನವಾಗಿವೆ. ಆತ್ಮನಲ್ಲಿ ಗುಣಾದಿಗಳನ್ನು ಆರೋಪಿಸಿ ನ್ಯಾಯ ವೈಶೇಷಿಕ ದರ್ಶನಗಳು ಸಾಂಖ್ಯಯೋಗ ದರ್ಶನಗಳಿಂದ ಭಿನ್ನವಾಗಿವೆ. ಆತ್ಮನ ಗುಣಗಳು ಸ್ವಭಾವಜಾತಗಳು, ಬೇರೆ ಬೇರೆ ಗುಣಪರ್ಯಾಯಗಳಿಂದ ಆತ್ಮನೇ ಪ್ರಕಟನಾಗುವನು ಎಂದು ಹೇಳಿ ಜೈನದರ್ಶನವು ನ್ಯಾಯ ವೈಶೇಷಿಕ ದರ್ಶನಗಳಿಂದ ಭಿನ್ನವಾಗಿರುವುದು; ಬೌದ್ಧ ದರ್ಶನವು ನಿತ್ಯ ಸತ್ಯ ಪದಾರ್ಥರೂಪವಾದ ಆತ್ಮನ ಅಸ್ತಿತ್ವವನ್ನೇ ಒಪ್ಪುವುದಿಲ್ಲ. ಆದರೆ ಈ ಎಲ್ಲ ದರ್ಶನಗಳು ಕರ್ಮಕ್ಕೆ ಅನುರೂಪವಾದ ಫಲವು ತಪ್ಪದು; "ಬಿತ್ತಿದುದನ್ನು ಬೆಳೆದುಕೊಳ್ಳು" ಎಂದು ಏಕಕಂಠನಾಗಿ ಹೇಳುವುವು ಕರ್ಮಕ್ಕೂ ಅದರ ಫಲಕ್ಕೂ ಅಚ್ಛೇದ್ಯವಾದ ಸಂಬಂಧವುಂಟೆಂದೂ, ಪ್ರಾಚೀನಕರ್ಮವೇ ಈ ಜನ್ಮದ ಅವಸ್ಥೆಗೆ ಕಾರಣವೆಂದೂ ಎಲ್ಲ ದರ್ಶನಗಳು ಹೇಳುವುವು.

ಕರ್ಮದ ಸ್ವರೂಪವೇನೆಂಬ ವಿಷಯವನ್ನು ಪೂರ್ವ ಮೀಮಾಂಸೆ, ಉತ್ತರ ಮೀಮಾಂಸೆ, ಸಾಂಖ್ಯ, ಯೋಗ ಈ ದರ್ಶನಗಳು ಆಲೋಚಿಸಿರುವುದಿಲ್ಲ. ನ್ಯಾಯ ದರ್ಶನವು ಈ ವಿಚಾರವನ್ನು ಕೆಲಮಟ್ಟಿಗೆ ಮಾಡಿರುವುದು. ಬೌದ್ಧ, ಜೈನದ ರ್ಶನಗಳು ಈ ವಿಷಯವನ್ನು ಚೆನ್ನಾಗಿ ಆಲೋಚಿಸಿರುವವು.

ಕರ್ಮಫಲವು ಕರ್ಮದೊಡನೆ ಹೇಗೆ ಸಂಯುಕ್ತವಾಗುವುದೆಂಬ ವಿಚಾರವನ್ನು ನ್ಯಾಯದರ್ಶನಕಾರನಾದ ಗೌತಮನು ಮಾಡಿರುವನು. ಕರ್ಮವು ಪುರುಷ ಕೃತವೆಂಬುದನ್ನೂ, ಕರ್ಮಕ್ಕೊಂದು ಫಲವುಂಟೆಂಬುದನ್ನೂ ಆತನು ಬಲ್ಲನು. ಮತ್ತು ಹಲವುವೇಳೆ ಪುರುಷ ಕೃತಕರ್ಮವು ನಿಷ್ಫಲವಾಗುವುದನ್ನು ಆತನು ಕಂಡಿದ್ದನು. ಆದುದರಿಂದ ಪುರುಷ ಕೃತ ಕರ್ಮವು ಹೇಗೆ ತಾನೇ ಫಲೋತ್ಪಾದನ ಸಮರ್ಥವಾಗುವುದೆಂಬುದನ್ನು ಕುರಿತು ಆತನಲ್ಲಿ ಸಂಶಯವುಂಟಾಯಿತು. ಮತ್ತು ಕರ್ಮಕ್ಕೆ ಹಲವು ವೇಳೆ ಫಲಸಂಬಂಧವು ಇಲ್ಲದಿರುವುದನ್ನು ಆತನು ಮನಗಂಡಿದ್ದನು. ಈ ಮಾತುಗಳ ಸಮಾಧಾನಕ್ಕಾಗಿ ಆತನು ಕರ್ಮ ಮತ್ತು ಕರ್ಮಫಲ ಇವುಗಳ ನಡುವೆ ಈಶ್ವರ ತತ್ತ್ವವನ್ನು ಸ್ವೀಕರಿಸಿದನು.

" ಈಶ್ವರಃ ಕಾರಣಂ ಪುರುಷ ಕರ್ಮಾಫಲ್ಯದರ್ಶನಾತ್ ।
ನ ಪುರುಷಕರ್ಮಾಭಾವೇ ಫಲನಿಷ್ಪತ್ತೇಃ ।
ತತ್ಕಾರಿ ತತ್ವಾದಹೇತುಃ ॥ "

ನ್ಯಾಯಸೂತ್ರ ೪, ೧, ೧೯-೨೧.

" ಕರ್ಮ ಫಲೋತ್ಪಾದನಕ್ಕೆ ಈಶ್ವರನು ಕಾರಣವು. ಪುರುಷ ಕೃತಕರ್ಮವು ಹಲವು ಬಾರಿ ನಿಷ್ಫಲವಾದುದು ತೋರುವುದು ಪುರುಷ ಕೃತಕರ್ಮವಿಲ್ಲದೆ ಕರ್ಮ ಫಲೋತ್ಪತ್ತಿಯಾಗಲಾರದು. ಕರ್ಮವೇ ಫಲೋತ್ಪತ್ತಿಗೆ ಕಾರಣವಲ್ಲ; ಫಲೋತ್ಪತ್ತಿಯು ಈಶ್ವರಸಾಪೇಕ್ಷವು; ಆದುದರಿಂದ ಕರ್ಮವೊಂದೇ ಫಲದ ಕಾರಣವೆಂಬುದು ಸರಿಯಲ್ಲ. "

ಮೇಲಿನ ಅವತರಣದ ಅಭಿಪ್ರಾಯವೇನೆಂದರೆ— ಕರ್ಮಫಲವು ಕರ್ಮವೊಂದನ್ನೇ ಅವಲಂಬಿಸಿದ್ದರೆ ಪ್ರತಿ ಒಂದು ಕರ್ಮವು ಫಲ ಕೊಡುವುದಾಗಿಯೇ ಕಂಡುಬರುತ್ತಿತ್ತು. ಕರ್ಮಫಲವು ಕರ್ಮಾಧೀನವಾದುದಾದರೂ ಕರ್ಮಫಲದ ಉದಯವು ಕರ್ಮಾಧೀನವಲ್ಲ; ಪುರುಷಕೃತ ಕರ್ಮವು ಹಲವೆಡೆ ನಿಷ್ಫಲವಾದುದು ಕಂಡುಬರುವುದು. ಆದುದರಿಂದ ಕರ್ಮಫಲೋತ್ಪಾದನ ಕಾರ್ಯದಲ್ಲಿ ಕರ್ಮಫಲನಿಯಂತೃವಾದ ಒಬ್ಬ ಈಶ್ವರನಿರುವನೆಂದು ಸಿದ್ಧವಾಗುವುದು. ನೈಯಾಯಿಕರು ಇಲ್ಲಿ ಬೀಜವೃಕ್ಷನ್ಯಾಯವನ್ನಂಗೀಕರಿಸುವರು. ವೃಕ್ಷವು ಬೀಜಾಧೀನವಾದುದು ನಿಜ; ಇದೇ ಮೇರೆಗೆ ಕರ್ಮಫಲವೂ ಕರ್ಮಾಧೀನವು; ಆದರೆ ವೃಕ್ಷೋತ್ಪತ್ತಿಯು ಬೀಜವೊಂದನ್ನೇ ಅವಲಂಬಿಸದೆ ಜಲ, ವಾಯು, ಪ್ರಕಾಶಾದಿಗಳನ್ನವಲಂಬಿಸುವಂತೆ ಕರ್ಮ ಫಲವೂ ಈಶ್ವರಸಾಪೇಕ್ಷವಾಗಿರುವುದು. ಎಂದರೆ, ಈಶ್ವರನು ಕರ್ಮಭಿನ್ನನಾಗಿದ್ದು ಕರ್ಮಕ್ಕೂ ಫಲಕ್ಕೂ ಸಂಬಂಧವನ್ನುಂಟುಮಾಡುವನು.

ಆದರೆ ನೈಯಾಯಿಕರ ಈ ಮತವನ್ನು ಬೇರೆ ದಾರ್ಶನಿಕರು ಒಡಂಬಡುವುದಿಲ್ಲ; ಈ ಕರ್ಮಫಲವಾದವೇ ನೈಯಾಯಿಕರಿಗೆ ಈಶ್ವರಾಸ್ತಿತ್ವಸಾಧಕವಾದ ಯುಕ್ತಿಯು. ಕರ್ಮಕ್ಕೂ ಫಲಕ್ಕೂ ಸಂಬಂಧವನ್ನುಂಟುಮಾಡುವುದಕ್ಕಾಗಿಯೇ ಈಶ್ವರನು ಬೇಕಾಗಿದ್ದರೆ ಈಶ್ವರನನ್ನು ಒಡಂಬಡದೆ ಫಲವನ್ನು ಸಂಪೂರ್ಣವಾಗಿ ಕರ್ಮಾಧೀನವೆಂದು ಒಪ್ಪುವುದು- ಎಂದರೆ ಕರ್ಮವೇ ಫಲೋತ್ಪಾದನ ಮಾಡುವುದೆಂದು ಹೇಳುವುದು ಅಸಂಗತವಾಗಲಾರದು; ಬೌದ್ಧರು ಇದೇ ಮತವನ್ನೊಪ್ಪುವರು.

ಬೌದ್ಧರ ಕರ್ಮಕ್ಕೂ ನೈಯಾಯಿಕರ ಕರ್ಮಕ್ಕೂ ಸ್ವಲ್ಪ ಭೇದವುಂಟು. ಬೌದ್ಧರ ಕರ್ಮವನ್ನು ತಿಳಿವುದಾದರೆ ಅವರ ಸಂಸಾರ ಸ್ವರೂಪವನ್ನು ತಿಳಿವುದು

ಆವಶ್ಯಕವು. ಬೌದ್ಧರು ಸಂಸಾರವು ಅನಾದಿ, ಅನಂತ, ನಿಃಸ್ವಭಾವಧಾರಾ ಪ್ರವಾಹವೆಂದು ಹೇಳುವರು. ಬುದ್ಧನು ಹೇಳುವುದೇನೆಂದರೆ– " ಅಜ್ಞಾನದಿಂದ ಸಂಸ್ಕಾರವೂ ಸಂಸ್ಕಾರದಿಂದ ವಿಜ್ಞಾನವೂ, ವಿಜ್ಞಾನದಿಂದ ನಾಮವೂ, ಭೌತಿಕ ದೇಹವೂ, ಅದರಿಂದ ಷಟ್‌ಕ್ಷೇತ್ರವೂ, ಅದರಿಂದ ಇಂದ್ರಿಯಗಳೂ ಇಂದ್ರಿಯ ವಿಷಯಗಳೂ, ಇಂದ್ರಿಯ- ಇಂದ್ರಿಯ ವಿಷಯಗಳಿಂದ ವೇದನೆಯೂ, ವೇದನೆಯಿಂದ ತೃಷ್ಣೆಯೂ. ತೃಷ್ಣೆಯಿಂದ ಉಪಾದಾನವೂ, ಉಪಾದಾನದಿಂದ ಭವವೂ, ಭವದಿಂದ ಜನ್ಮವೂ, ಜನ್ಮದಿಂದ ಮರಣಾದಿಗಳೂ ಉಂಟಾಗುವುವು. ದುಃಖ ರಾಜ್ಯವು ಈ ಮೇರೆಗೆ ನಡೆಯುತ್ತಿದೆ " ಹೀಗೆ ಬೌದ್ಧ ಮತದಲ್ಲಿ ಸಂಸಾರವು ನಿರಂತರ ಅನವಚ್ಛಿನ್ನವಾದ ವಿಜ್ಞಾನ ಪ್ರವಾಹವು.

ಸಂಸಾರವು ಕರ್ಮಮೂಲಕವು. ಎಂಬೀ ಬೌದ್ಧರ ವಚನದಿಂದ ಅವರ ಕರ್ಮವೆಂಬುದೇನೆಂಬುದು ಚೆನ್ನಾಗಿ ತಿಳಿಯುವುದು. ಅವರ ಮತದಲ್ಲಿ ಕರ್ಮವೆಂದರೆ ಪುರುಷಕೃತ ವ್ಯಾಪಾರವಷ್ಟೇ ಅಲ್ಲ; ಕರ್ಮವೆಂದರೆ ಒಂದು ನಿಯಮವು; ಜಗದ್ವ್ಯಾಪಿಯಾದ ಒಂದು ' ಕಾಯದೆ '. ಇದಕ್ಕೇ ಕಾರ್ಯಕಾರಣಭಾವವೆಂಬ ಇನ್ನೊಂದು ಹೆಸರು. ಈ ಕಾಯದೆಗೆ ಜಗತ್ತಿನೊಳಗಿನ ಸಮಸ್ತ ಭಾವಗಳೂ ಪದಾರ್ಥಗಳೂ, ವ್ಯಾಪಾರಗಳೂ ಅಧೀನವಾಗಿರುವುವು; ಸಂಸಾರವು ಇದರ ಮೇಲೆಯೇ ನಿಂತಿದೆ; ಇದರಿಂದಲೇ ನಡೆದಿದೆ.

ಫಲೋತ್ಪತ್ತಿ ವಿಷಯದಲ್ಲಿ ಬೌದ್ಧರ ಮತವೇನೆಂದರೆ, ಕರ್ಮವು ಸ್ವತಂತ್ರವು; ಈಶ್ವರ ಮೊದಲಾದ ಯಾವ ತತ್ತ್ವದ ಮುಖವನ್ನೂ ಅದು ನೋಡುತ್ತಿರಬೇಕಾಗಿಲ್ಲ; ಕರ್ಮವು ತಾನೇ ತನ್ನ ಫಲವನ್ನುಂಟು ಮಾಡುವುದು; ಒಬ್ಬನು ಚೌರ್ಯ ಕರ್ಮ(ಕಳ್ಳತನ)ವನ್ನು ಮಾಡಿದನೆಂದು ತಿಳಿಯುವ; ಅದರ ಫಲದಿಂದ ಆತನು ಕಳ್ಳನಾದನು; ನೈಯಾಯಿಕ ಮತದಲ್ಲಿ ಈಶ್ವರನು ಚೌರ್ಯ ಕರ್ಮಕ್ಕೆ ಚೋರತ್ವರೂಪ ಫಲವನ್ನು ಸಂಬಂಧಿಸುವನು; ಬೌದ್ಧಮತದಲ್ಲಿ ಚೌರ್ಯ ಕರ್ಮವೇ ಸ್ವತಂತ್ರವಾಗಿ ಚೋರತ್ವರೂಪಫಲವನ್ನುಂಟುಮಾಡುವುದು. ಬೌದ್ಧ ದರ್ಶನವು, ಚೌರ್ಯಕರ್ಮವು ಒಂದು ವಿಜ್ಞಾನವೆಂದು ಹೇಳುವುದು. ಈ ವಿಜ್ಞಾನವು ಉತ್ಪನ್ನವಾದ ಪರಕ್ಷಣದಲ್ಲಿಯೇ ಅನವಚ್ಛಿನ್ನವಾದ ವಿಜ್ಞಾನ ಪ್ರವಾಹದಲ್ಲಿ ಸೇರಿ ಹೋಯಿತು. ಉಳಿದುದೇನೆಂದರೆ ಚೌರ್ಯಕರ್ಮದ ಸಂಸ್ಕಾರವು. ಈ ಸಂಸ್ಕಾರವೇ ಮತ್ತೆ ಪರಕ್ಷಣದ ವಿಜ್ಞಾನವನ್ನು ಹುಟ್ಟಿಸುವುದು; ಚೋರತ್ವ ಭಾವವೇ ಪರಕ್ಷಣದ ವಿಜ್ಞಾನವು. ಆದುದರಿಂದ ಪೂರ್ವಕ್ಷಣದ ವಿಜ್ಞಾನವಾದ ಚೌರ್ಯಕರ್ಮವು ಪರಕ್ಷಣದ ವಿಜ್ಞಾನವಾದ ಚೋರತ್ವವನ್ನುಂಟು ಮಾಡಿದಂತಾಯಿತು.

ಕರ್ಮದ ಪ್ರಕೃತಿ ಮತ್ತು ವ್ಯಾಪಾರ ಈ ವಿಷಯಗಳಲ್ಲಿ ಬೌದ್ಧದರ್ಶನಕ್ಕೂ

ಜೈನದರ್ಶನಕ್ಕೂ ಸಾಮಾನ್ಯವಾಗಿ ಮತಭೇದವಿಲ್ಲ. ಜೈನಮತದಲ್ಲಿಯೂ ಕರ್ಮವು ಪುರುಷವ್ಯಾಪಾರಮಾತ್ರವಲ್ಲ; ಕರ್ಮವು ಜಗತ್ತಿನ ವ್ಯಾಪಾರವು, ಇದರ ಮೇಲೆ ಸಂಸಾರವು ನಿಂತಿದೆ. ಫಲವಿಷಯವಾಗಿ ಜೈನರು ಹೇಳುವುದೇನೆಂದರೆ, ಕರ್ಮವು ಸಂಪೂರ್ಣಸ್ವತಂತ್ರವು; ಈಶ್ವರಾಪೇಕ್ಷೆಯು ಅದಕ್ಕಿಲ್ಲ. ಈ ವಿಷಯದಲ್ಲಿ ಜೈನ ದಾರ್ಶನಿಕರ ಅಭಿಪ್ರಾಯವೇನೆಂದರೆ, ಪುರುಷಕೃತಕರ್ಮದ ನಿಷ್ಫಲತೆಯು ಒಮ್ಮೊಮ್ಮೆ ಆಗುವುದನ್ನು ನೋಡಿ ಈಶ್ವರತತ್ತ್ವವನ್ನು ಸ್ವೀಕರಿಸಬೇಕಾದುದು ಅವಶ್ಯವಲ್ಲ; ಕರ್ಮದ ಫಲವು ಅವಶ್ಯವಾಗಿ ಆಗತಕ್ಕದೇ; ಫಲವು ವಿಲಂಬದಿಂದ ಆಗಬಹುದು, ಆದರೆ ಕರ್ಮಕ್ಕೆ ಫಲವಾಗುವುದಿಲ್ಲವೆಂಬ ಮಾತು ಎಂದೂ ಆಗಲಾರದು. ಹಲವೆಡೆಯಲ್ಲಿ ಪಾಪಿಗಳು ಸುಖಿಗಳಾಗಿರುವುದನ್ನೂ, ಪುಣ್ಯವಂತರು ದುಃಖಿಗಳಾಗಿರುವುದನ್ನೂ ನೋಡಬಹುದು. ಇಷ್ಟರಿಂದ ಕರ್ಮದ ನಿಷ್ಫಲತ್ವವು ಸಿದ್ಧವಾಗುವುದಿಲ್ಲ. ಒಬ್ಬ ಜೈನಾಚಾರ್ಯರು ಹೇಳುವುದೇನೆಂದರೆ-

" ಯಾ ಹಿಂಸಾವತೋಽಪಿ ಸಮೃದ್ಧಿಃ, ಅರ್ಹತ್ಪೂಜಾವತೋಽಪಿ ದಾರಿದ್ರ್ಯಾಪ್ತಿಃ ಸಾ ಕ್ರಮೇಣ ಪ್ರಾಗುಪಾತ್ತಸ್ಯ ಪಾಪಾನುಬಂಧಿನಃ ಪುಣ್ಯಸ್ಯ, ಪುಣ್ಯಾನುಬಂಧಿನಃ ಪಾಪಸ್ಯಚ ಫಲಂ। ತತ್ಕ್ರಿಯೋಪಾತ್ತಂ ತು ಕರ್ಮ ಜನ್ಮಾಂತರೇ ಫಲಿಷ್ಯತೀತಿ ನಾತ್ರ ನಿಯತಕಾರ್ಯಕಾರಣಭಾವವ್ಯಭಿಚಾರಃ !"

" ಹಿಂಸಕ ಮನುಷ್ಯನಲ್ಲಿರುವ ಸಂಪತ್ತಿಯೂ, ಅರ್ಹತ್ಪೂಜಾನಿರತಮನುಷ್ಯನ ದಾರಿದ್ರ್ಯವೂ ಕ್ರಮದಿಂದ, ಪ್ರಾಕ್ತನ ಪಾಪಾನುಬಂಧಿ ಪುಣ್ಯ ಕರ್ಮದ, ಮತ್ತು ಪುಣ್ಯಾನು ಬಂಧಿ ಪಾಪಕರ್ಮದ ಫಲವು; ಇನ್ನು ಹಿಂಸಾಕರ್ಮವೂ, ಅರ್ಹತ್ಪೂಜಾ ಕರ್ಮವೂ ವಿಫಲವೆನಿಸಲಾರವು; ಜನ್ಮಾಂತರದಲ್ಲಿ ಈ ಕರ್ಮಗಳ ಫಲಗಳು ಒದಗುವುವು. ಆದುದರಿಂದ ಕರ್ಮಫಲ ಮತ್ತು ಕರ್ಮ ಇವುಗಳಲ್ಲಿರುವ ಕಾರ್ಯಕಾರಣಭಾವಕ್ಕೆ ಎಲ್ಲಿಯೂ ಬಾಧೆಯಿಲ್ಲ. "

ಜೈನ ಮತದಲ್ಲಿ ಕರ್ಮಫಲವು ತಪ್ಪದೆ ಆಗುವುದಾದುದರಿಂದಲೂ, ಕರ್ಮವು ತಾನೇ ಫಲೋತ್ಪಾದಕವಾದುದರಿಂದಲೂ ಜೈನದರ್ಶನದಲ್ಲಿ ಕರ್ಮ ಫಲನಿಯಂತೃವಾದ ಈಶ್ವರನಿಗೆ ಸ್ಥಾನವಿಲ್ಲವೆಂದು ಬೇರೆ ಹೇಳಬೇಕಾದುದಿಲ್ಲ.

ಕರ್ಮದ ಸ್ವರೂಪ ಮತ್ತು ವ್ಯಾಪಾರ ಈ ವಿಷಯಗಳಲ್ಲಿ ಬೌದ್ಧ ಮತಕ್ಕೂ ಜೈನ ಮತಕ್ಕೂ ಹೋಲಿಕೆಯುಂಟೆಂದು ಹೇಳಿದುದು ಪಾರಮಾರ್ಥಿಕವಲ್ಲ; ಈ ವಿಷಯಗಳಲ್ಲಿ ಎರಡೂ ಮತಗಳಲ್ಲಿ ಭೇದವುಂಟು. ಬೌದ್ಧಮತದಲ್ಲಿ ಕರ್ಮವು ನಿಃಸ್ವಭಾವವಾದ ನಿಯಮವು; ಜೈನಮತದಲ್ಲಿ ಕರ್ಮವು ಸಂಸಾರಿಜೀವನ ಬಂಧಕ್ಕೆ ಕಾರಣವು; ಮತ್ತು ಈ ಕರ್ಮವು ಜೀವ ದ್ರವ್ಯದಿಂದ ಭಿನ್ನವಾದ ಒಂದು ತರದ ದ್ರವ್ಯವು;

ಈ ಕರ್ಮದ್ರವ್ಯದ ಆಸ್ರವ(ಆಗಮನ)ದಿಂದ ಸ್ವಭಾವಪರಿಶುದ್ಧನಾದ ಜೀವನು ಅನಾದಿಕಾಲೀನ ಅಶುದ್ಧತೆಯಿಂದ ಬದ್ಧನಾಗುವನು. ಜೈನಮತದಲ್ಲಿ ಕರ್ಮವು ಪುರುಷಕೃತ ವ್ಯಾಪಾರಮಾತ್ರವಲ್ಲ; ಬೌದ್ಧರು ಹೇಳುವಂತೆ ಇದು ನಿಃಸ್ವಭಾವ ವಾದ ನಿಯಮಮಾತ್ರವಲ್ಲ; ಕರ್ಮವು ಒಂದು ಜಡಪದಾರ್ಥವು; ಆತ್ಮನಂತೆ ಸ್ವತಂತ್ರವಾದ, ಮತ್ತು ಜೀವವಿರೋಧಿಯಾದ ಒಂದು ದ್ರವ್ಯವು. ಇಂಗ್ಲಿಶ್ ಭಾಷೆಯಲ್ಲಿರುವ Matter ಎಂಬುದಕ್ಕೂ ಜೈನ ದರ್ಶನದ ಕರ್ಮಕ್ಕೂ ಬಹ್ವಂಶದಿಂದ ಹೋಲಿಕೆಯುಂಟು. ಇದು ಜೀವನಿಂದ ಭಿನ್ನವಾದುದು; ಜೀವನಿಗೆ ಇದು ಅಂಟಿಕೊಳ್ಳಲು ಆತನ ಬಂಧಕ್ಕೆ ಕಾರಣವಾಗುವುದು. ಜೀವನನ್ನು ಅಗಲಲು ಆತನು ಮುಕ್ತನಾಗುವನು. ಕುಂದಕುಂದಾಚಾರ್ಯನು ಹೇಳುವುದೇನೆಂದರೆ:-

"ಜೀವಾ ಪುಗ್ಗಲಕಾಯಾ ಅಣ್ಣೋಣ್ಣಾಗಾಢ ಗಹಣ ಪಡಿಬದ್ಧಾ ।
ಕಾಲೇ ವಿಜುಜ್ಜಮಾಣಾ ಸುಹದುಕ್ಖಂ ದಿಂತಿ ಭುಂಜಂತಿ ॥"

ಪಂಚಾಸ್ತಿಕಾಯ ಸಮಯಸಾರ.

"ಜೀವರೂ ಕರ್ಮಪುದ್ಗಲಸಮೂಹಗಳೂ ಪರಸ್ಪರ ಗಾಢವಾಗಿ ಸಂಶ್ಲಿಷ್ಟವಾಗುವುವು. ಯೋಗ್ಯಸಮಯವು ಬರಲು ಅವು ವಿಯುಕ್ತವಾಗುವುವು. ಜೀವರೂ ಕರ್ಮಗಳೂ ಸಂಶ್ಲಿಷ್ಟವಾಗಿರುವವರೆಗೆ ಕರ್ಮಗಳು ಸುಖದುಃಖಗಳನ್ನು ಕೊಡುವುವು; ಜೀವರು ಅವುಗಳನ್ನು ಭೋಗಿಸುವರು."

ಪುದ್ಗಲಸಭಾವವೂ (Material) ಅಜೀವದ್ರವ್ಯವೂ ಆದ ಕರ್ಮವು ಚೈತನ್ಯರೂಪ ಜೀವನೊಡನೆ ಹೇಗೆ ಸಂಶ್ಲಿಷ್ಟವಾಗುವುದೆಂದರೆ- ಈ ವಿಶ್ವವು ಸೂಕ್ಷ್ಮಾತಿಸೂಕ್ಷ್ಮ "ಕರ್ಮವರ್ಗಣಾ" ಎಂಬ ಕರ್ಮದ್ರವ್ಯ, ಮತ್ತು ಚೇತನಸ್ವಭಾವವಾದ ಜೀವಪದಾರ್ಥ ಇವುಗಳಿಂದ ತುಂಬಿದೆ. ಜೀವ, ಮತ್ತು ಕರ್ಮದ್ರವ್ಯ ಇವು ಪರಸ್ಪರ ಸಮೀಪಸ್ಥವಾಗಿಯೇ ಇರುವುವು. ಜೀವನು ಶುದ್ಧ- ಮುಕ್ತ- ಬುದ್ಧ ಸ್ವಭಾವನಾಗಿದ್ದರೂ ರಾಗದ್ವೇಷಗಳಿಂದ ಆಕುಲನಾಗುವನು; ಆಕಾಲದಲ್ಲಿ ಆತನ ಸಮೀಪದಲ್ಲಿರುವ ಕರ್ಮವರ್ಗಣೆಯಲ್ಲಿಯೂ ರಾಗದ್ವೇಷಾಕುಲ ಜೀವನಲ್ಲಿ ಆಸ್ರವಿತವಾಗುವ ಸ್ಥಿತಿಯುಂಟಾಗುವುದು. ಈ ಆಸ್ರವದಿಂದ ಜೀವನು ಬದ್ಧನಾಗುವನು. ಜೀವನನ್ನು ಶುದ್ಧಜಲಕ್ಕೂ ಕರ್ಮವನ್ನು ಮಣ್ಣಿಗೂ ಸಂಸಾರಿ (ಬದ್ಧ) ಜೀವನನ್ನು ರಾಡಿ ನೀರಿಗೂ ಹೋಲಿಸಬಹುದು. ರಾಡಿನೀರಿನಿಂದ ಮಣ್ಣಿನ ಭಾಗವು ಹೊರಟು ಹೋದರೆ ಶುದ್ಧವಾದ ನೀರು ಉಳಿಯುವಂತೆ ಕರ್ಮಮಲವು ಹೊರಟು ಹೋದ ಬಳಿಕ ಬದ್ಧ ಜೀವನು ತನ್ನ ಸ್ವಾಭಾವಿಕ ಶುದ್ಧ ಮುಕ್ತ ಬುದ್ಧಾವಸ್ಥೆಯಲ್ಲಿರುವನು.

ಕರ್ಮಾಸ್ರವದಿಂದ ಜೀವನಿಗೆ ಬಂಧವುಂಟಾಗುವುದು; ಆದುದರಿಂದ ಬಂಧವು ಕರ್ಮಾನುರೂಪವು; ಬಂಧದ ಪ್ರಕೃತಿಯು ಹಿಂದೆ ಹೇಳಿದ ಅಷ್ಟವಿಧಕರ್ಮ ಪ್ರಕೃತಿಗೆ ಅನುರೂಪವಾದುದು; ಬಂಧದ ಸ್ಥಿತಿಯು ಕರ್ಮದ ಸ್ಥಿತಿಯನ್ನವಲಂಬಿಸಿರುವುದು; ಯಾವ ಕರ್ಮದ ಸ್ಥಿತಿಕಾಲವು ಎಷ್ಟೆಂಬುದೂ ಗೊತ್ತಾದುದಿರುವುದು; ಕರ್ಮದ ಅನುಭಾಗ (ಅನುಭವ)ವು, ಕರ್ಮದ ತೀವ್ರ ಮಂದ ಮೊದಲಾದ ಫಲದಾನ ಶಕ್ತಿಯನ್ನವಲಂಬಿಸಿರುವುದು. ಜೀವನಲ್ಲಿ ಎಷ್ಟು ಕರ್ಮವರ್ಗಣೆಯು ಆಸ್ರುತವಾಯಿತೆಂಬುದನ್ನವಲಂಬಿಸಿ 'ಪ್ರದೇಶ' ಬಂಧವು ನಿರ್ಣೀತವಾಗುವುದು. ಇವೇ ಪ್ರಕೃತಿಬಂಧ, ಸ್ಥಿತಿಬಂಧ, ಅನುಭಾಗಬಂಧ, ಪ್ರದೇಶಬಂಧ ಎಂಬ ಬಂಧದ ಪ್ರಕಾರಗಳು.

ಕರ್ಮವಿಷಯವಾಗಿ ಇನ್ನೊಂದು ಮಾತು ಗಮನಿಸತಕ್ಕುದಾಗಿದೆ. ಜೀವನು ಸಾಕ್ಷಾತ್ತಾಗಿ ಕರ್ಮವಿಕಾರಕ್ಕೆ ಕಾರಣವಲ್ಲ; ಕರ್ಮವೂ ಜೀವವಿಕಾರಕ್ಕೆ ಕಾರಣವಲ್ಲ;

" ಕುವ್ವಂ ಸಗಂ ಸಹಾವಂ ಅತ್ತಾ ಕತ್ತಾ ಸಗಸ್ಸ ಭಾವಸ್ಸ ।
ಣ ಹಿ ಪೋಗ್ಗಲ ಕಮ್ಮಾಣಂ ಇದಿ ಜಿಣವಯಣಂ ಮುಣೇಯವ್ವಂ । "
" ಕಮ್ಮಂ ಪಿ ಸಗಂ ಕುವ್ವದಿ ಸೇಣ ಸಹಾವೇಣ ಸಮ್ಮಮಪ್ಪಾಣಂ ॥ "
ಕುಂದ ಕುಂದಾಚಾರ್ಯ.

" ಆತ್ಮನು ತನ್ನ ಸ್ವಭಾವಸಂಬಂಧವಾಗಿಯೇ ಕರ್ಮಗಳನ್ನು ಮಾಡಿ ತನ್ನ ಭಾವಗಳ ಕರ್ತನಾಗುವನು; ಆತ್ಮನು ನಿಶ್ಚಯವಾಗಿ, ಪುದ್ಗಲಕರ್ಮ ಸಮೂಹ ಸಂಬಂಧವಾಗಿ ಕರ್ತನಲ್ಲ ಇದೇ ಜಿನವಚನವು " ಕರ್ಮವೂ ತನ್ನ ಸ್ವಭಾವದಿಂದ ತನ್ನ ಭಾವಗಳ ಕರ್ತೃವು "

ಈ ವಿಷಯದಲ್ಲಿ ನೇಮಿಚಂದ್ರ ವಚನ:—

" ಪುಗ್ಗಲ ಕಮ್ಮಾದೀ ಣಂ ಕತ್ತಾ ವವಹಾರದೋ ದು ನಿಚ್ಛಯದೋ ।
ಚೇದಣ ಕಮ್ಮಾಣಾದಾ ಸುದ್ಧಣಯಾ ಸುದ್ಧ ಭಾವಾ ಣಂ ॥ "
ದ್ರ. ದ್ರವ್ಯ ಸಂಗ್ರಹ.

" ವ್ಯವಹಾರ ದೃಷ್ಟಿಯಿಂದ ಆತ್ಮನು ಪುದ್ಗಲ ಕರ್ಮ ಸಮೂಹದ ಕರ್ತೃವು; ಅಶುದ್ಧನಿಶ್ಚಯನಯಾನುಸಾರವಾಗಿ ಆತ್ಮನು ರಾಗದ್ವೇಷಾದಿ ಚೇತನ ಕರ್ಮ ಸಮೂಹದ ಕರ್ತೃವು; ಶುದ್ಧ ನಿಶ್ಚಯನಯಾನುಸಾರವಾಗಿ ಈತನು ತನ್ನ ಶುದ್ಧ ಭಾವ ಸಮೂಹಗಳ ಕರ್ತೃವು. "

ಅನಂತಜ್ಞಾನ, ಅನಂತಾನಂದ ಮೊದಲಾದುವು ಆತ್ಮನ ಸ್ವಭಾವ ಗುಣಗಳು. ಶುದ್ಧನಯಾನುಸಾರವಾಗಿ ಜೀವರೆಲ್ಲ ಈ ಎಲ್ಲ ಗುಣಗಳ ಕರ್ತೃಗಳು- ಎಂ

ವರೆ ಅಧಿಕಾರಿಗಳು. ಆದುದರಿಂದ ಶುದ್ಧನಿಶ್ಚಯನಯಾನುಸಾರವಾಗಿ ಜೀವನಿಗೆ ಕರ್ಮಪುದ್ಗಲಗಳ ಸಂಬಂಧವೇನೂ ಇಲ್ಲ. ಆದರೆ ಅಶುದ್ಧಾವಸ್ಥೆಯಲ್ಲಿ ಜೀವನಲ್ಲಿ ರಾಗ ದ್ವೇಷಾದಿಗಳು ತಲೆದೋರುವುವು.

ಭಾವಣಿಮಿತ್ತೋ ಬಂಧೋ ಭಾವೋ ರದಿರಾಗ ದ್ವೇಷಮೋಹ ಜೂದೋ "
ಪಂಚಾಸ್ತಿಕಾಯ ಸಮಯಸಾರ.

" ಬಂಧವು ಭಾವ ನಿಮಿತ್ತಕವು; ಮತ್ತು ರತಿರಾಗದ್ವೇಷಮೋಹಯುಕ್ತವಾದ ಭಾವವೇ ಬಂಧಕಾರಣವು "

ರಾಗದ್ವೇಷಾದಿ ಭಾವಗಳಿಂದ ಮಿಥ್ಯಾದರ್ಶನ, ಅವಿರತಿ, ಪ್ರಮಾದ, ಕಷಾಯ, ಯೋಗಗಳು ತಲೆದೋರುವುವು. ಅಶುದ್ಧನಿಶ್ಚಯಾನಯಾನುಸಾರವಾಗಿ ಜೀವನು ಭಾವ, ಮತ್ತು ಮಿಥ್ಯಾದರ್ಶನ ಮೊದಲಾದ ಪಂಚವಿಧ ಭಾವಕರ್ಮ ಇವುಗಳ ಕರ್ತೃವು; ಆದುದರಿಂದ ಅಶುದ್ಧ ನಿಶ್ಚಯನಯಾನುಸಾರವಾಗಿಯೂ ಜೀವನು ಕರ್ಮಪುದ್ಗಲಗಳ ಕರ್ತೃವಲ್ಲ.

ಶುದ್ಧನಿಶ್ಚಯನಯ, ಅಶುದ್ಧನಿಶ್ಚಯನಯ ಈ ಎರಡರ ದೃಷ್ಟಿಯಿಂದಲೂ ಜೀವನು ಕರ್ಮಪುದ್ಗಲಗಳ ಕರ್ತೃವಲ್ಲವಾದರೂ ವ್ಯವಹಾರನಯಾನುಸಾರವಾಗಿ ಜೀವನು ದ್ರವ್ಯಬಂಧದ (ದ್ರವ್ಯಕರ್ಮದ) ಕರ್ತೃವು. ಮಿಥ್ಯಾತ್ವಾದಿಭಾವಕರ್ಮದ ಉದಯವಾಗಲು ಜೀವನಲ್ಲಿ ದ್ರವ್ಯಕರ್ಮದ ಆಸ್ರವವಾಗುವಂತಹ ಅವಸ್ಥೆಯುಂಟಾಗುವುದು; ಇದರಿಂದ ಜೀವನಿಗೆ ಬಂಧವುಂಟಾಗುವುದು. ಬಂಧದಿಂದ ಜೀವನು ಪುದ್ಗಲ ಕರ್ಮಗಳ ಫಲವಾದ ಸುಖದುಃಖಗಳನ್ನು ಭೋಗಿಸುವನು.

ಮೇಲಿನ ವಿವರಣೆಯಿಂದ ತಿಳಿವುದೇನೆಂದರೆ- ಜೀವನು ಪುದ್ಗಲ ಕರ್ಮಗಳ ಕರ್ತೃವಲ್ಲ; ಆತನು ಚೈತನ್ಯಸ್ವರೂಪನು; ಆದುದರಿಂದ ಆತನು ಕರ್ಮಗಳ ಉಪಾದಾನಕಾರಣವಲ್ಲ; ಭಾವ ಕರ್ಮಗಳಿಂದ ಜೀವನಲ್ಲಿ ಪುದ್ಗಲಕರ್ಮವರ್ಗಣೆಯ ಆಸ್ರವವಾಗುವುದು ಆದುದರಿಂದ ಜೀವನು ಸಾಕ್ಷಾತ್ತಾಗಿ ಕರ್ಮಾಸ್ರವದ ನಿಮಿತ್ತಕಾರಣವೂ ಅಲ್ಲ; ಜೀವನು ತನ್ನ ಭಾವಸಮೂಹದ ಕರ್ತೃವು. ಇದೇ ನಿಶ್ಚಯನಯದ ಸಿದ್ಧಾಂತವು ಆದರೂ ಭಾವಗಳ ಮತ್ತು ಭಾವ ಕರ್ಮಗಳ ಉದಯವಾದಾಗ ಕರ್ಮಪುದ್ಗಲಗಳು ತಾವಾಗಿ ಬಂದು ಜೀವನಲ್ಲಿ ಸೇರುವ ಸ್ಥಿತಿಯು ಅವುಗಳಲ್ಲಿ ಉಂಟಾಗುವುದರಿಂದಲೂ, ಕರ್ಮವರ್ಗಣೆಯು ಜೀವನಲ್ಲಿ ಪ್ರವೇಶಿಸುವುದಕ್ಕೆ ಅನುಕೂಲವಾದ ಸ್ಥಿತಿಯು ಆದರಲ್ಲುಂಟಾಗುವುದಕ್ಕೆ ಜೀವನ ಸಾಕ್ಷಾತ್ತಾಗಿ ಉಪಾದಾನಕಾರಣವೂ ನಿಮಿತ್ತಕಾರಣವೂ ಆಗದೆ ಹೋದರೂ ಪರೋಕ್ಷವಾಗಿ ಆತನು ಕರ್ತೃವಾಗುವುದರಿಂದಲೂ ಜೀವನು ವ್ಯವಹಾರದೃಷ್ಟಿಯಿಂದ ಪುದ್ಗಲಕರ್ಮಗಳ ಕರ್ತೃವೆಂದು ಹೇಳಲ್ಪಡುವನು.

# ೫. ಸಂವರತತ್ತ್ವ

**ಆಸ್ರವ ನಿರೋಧಃ ಸಂವರಃ** ೯. ೧. ತತ್ತ್ವಾರ್ಥ ಸೂತ್ರ.

ಆಸ್ರವವನ್ನು ನಿರೋಧಿಸುವುದೇ ಸಂವರವು. ಕರ್ಮಗಳ ಆಗಮನಕ್ಕೆ ಕಾರಣವಾದ ಮನೋವಾಕ್ಕಾಯಯೋಗ, ಮಿಥ್ಯಾತ್ವ, ಕಷಾಯ ಇವು. ಉಂಟಾಗದಂತೆ ಪ್ರತಿಬಂಧಿಸುವುದರಿಂದ ಜೀವನಿಗೆ ಸುಖದುಃಖಗಳನ್ನು ಕೊಡುವ ಕರ್ಮಗಳು ಅಂಟಿಕೊಳ್ಳುವುದಿಲ್ಲ; ಇದೇ ಸಂವರವು; ಸಂವರವು ಮೋಕ್ಷಮಾರ್ಗವು.

ಸಂವರವು ಭಾವಸಂವರ, ದ್ರವ್ಯಸಂವರ ಎಂದು ಎರಡು ವಿಧವಾಗಿದೆ. ಜೀವನು ನಿರ್ವಿಕಾರ ಚೈತನ್ಯಸ್ವರೂಪನಾದುದರಿಂದ ತನ್ನಿಂದ ಭಿನ್ನವಾದ ಪುದ್ಗಲ ದ್ರವ್ಯಗಳಲ್ಲಿ ರಾಗ, ದ್ವೇಷ, ಮೋಹಗಳನ್ನು ಧರಿಸದಿದ್ದರೆ ಆ ಜೀವನಿಗೆ ಶುಭಾಶುಭಕರ್ಮಗಳ ಆಸ್ರವವುಂಟಾಗುವುದಿಲ್ಲ; ಎಂದರೆ ಆಸ್ರವನಿರೋಧವುಂಟಾಗುವುದು. ಹೀಗೆ ರಾಗ ದ್ವೇಷ, ಮೋಹಗಳನ್ನು ನಿರೋಧಿಸುವುದು. ಭಾವಸಂವರವೆನಿಸುವುದು ಈ ಭಾವಸಂವರವು, ಯೋಗದ್ವಾರದಿಂದ ಜೀವ ಪ್ರದೇಶದಲ್ಲಿ ಪ್ರವೇಶಿಸುವ ಕರ್ಮಪುದ್ಗಲಗಳ ಶುಭಾಶುಭ ಪರಿಣಾಮಗಳನ್ನು ನಿರೋಧಿಸುವುದು. ಇವಕ್ಕೆ ದ್ರವ್ಯಸಂವರವೆನ್ನುವರು. ಭಾವಸಂವರವುಂಟಾಗಲು ಕರ್ಮಪುದ್ಗಲಗಳಿಗೆ ಶುಭಾಶುಭ ಕರ್ಮರೂಪ ಪರಿಣಾಮವನ್ನು ಹೊಂದುವುದಕ್ಕೆ ಸಾಧನವೇ ಇಲ್ಲದಂತಾಗುವುದು. ಈ ಮೇರೆಗೆಕರ್ಮಪುದ್ಗಲಗಳ ಶುಭಾಶುಭರೂಪ ಕರ್ಮಪರಿಣಾಮವನ್ನು ನಿರೋಧಿಸುವುದಕ್ಕೆ ಭಾವಸಂವರವು ಕಾರಣವಾಗಿರುವುದರಿಂದ ದ್ರವ್ಯಸಂವರಕ್ಕೆ ಭಾವಸಂವರವು ಕಾರಣವೆಂಬುದು ಸ್ಪಷ್ಟವಿದೆ. ಸಂವರಕ್ಕೆ ಮೂರು ಗುಪ್ತಿಗಳು, ಅಯ್ದು ಸಮಿತಿಗಳು, ಹತ್ತು ಧರ್ಮಗಳು, ಹನ್ನೆರಡು ಅನುಪ್ರೇಕ್ಷೆಗಳು, ಇಪ್ಪತ್ತೆರಡು ಪರೀಷಹಗಳ ಜಯ, ಅಯ್ದು ಪ್ರಕಾರದ ಚಾರಿತ್ರ ಎಂಬೀ ಆರು ಕಾರಣಗಳುಂಟು ಇದಲ್ಲದೆ ಹನ್ನೆರಡು ಪ್ರಕಾರದ ತಪಸ್ಸೂ ಸಂವರಕ್ಕೆ ಕಾರಣವಾಗಿದೆ.

**ಗುಪ್ತಿ**- ಗುಪ್ತಿಯೆಂದರೆ ರಕ್ಷಣವು. ಸಂಸಾರ ಪರಿಭ್ರಮಣದಿಂದ ಆತ್ಮನನ್ನು ಸಂರಕ್ಷಿಸುವುದು. ಮನಸ್ಸು, ವಚನ, ಕಾಯ ಇವುಗಳ ಯಥೇಚ್ಛಪ್ರವೃತ್ತಿಯನ್ನು ವಿಷಯಸುಖಾಭಿಲಾಷೆಯಿಲ್ಲದೆ ಪ್ರತಿಬಂಧಿಸುವುದು ಗುಪ್ತಿಯೆನಿಸುವುದು. ಮನಃಪ್ರವೃತ್ತಿಯನ್ನು ತಡೆಯುವುದು ಮನೋಗುಪ್ತಿಯು; ವಚನಪ್ರವೃತ್ತಿಯನ್ನು ತಡೆಯುವುದು ವಚನಗುಪ್ತಿಯು; ಕಾಯ(ಶರೀರ)ಪ್ರವೃತ್ತಿಯನ್ನು ತಡೆಯುವುದು ಕಾಯಗುಪ್ತಿಯು. ಈ ಮೇರೆಗೆ ಗುಪ್ತಿಯು ಮೂರು ಬಗೆಯಾಗಿದೆ.

**ಸಮಿತಿ**- ತನ್ನ ಶರೀರದಿಂದ ಬೇರೆ ಜೀವಗಳಿಗೆ ಪೀಡೆಯಾಗಬಾರದೆಂಬ ಇಚ್ಛೆಯಿಟ್ಟು ಎಚ್ಚರಿಕೆಯಿಂದ ಕ್ರಿಯೆಗಳನ್ನು ಮಾಡುವುದು ಸಮಿತಿಯು. ಇದು ಈರ್ಯಾಸಮಿತಿ, ಭಾಷಾಸಮಿತಿ, ಏಷಣಾಸಮಿತಿ, ಆದಾನ ನಿಕ್ಷೇಪಸಮಿತಿ, ವ್ಯುತ್ಸರ್ಗಸಮಿತಿ ಎಂದು ಅಯ್ದು ಬಗೆಯಾಗಿದೆ. ಸೂರ್ಯೋದಯವಾದ ಬಳಿಕ ನೇತ್ರೇಂದ್ರಿಯದಲ್ಲಿ ವಿಷಯಗ್ರಹಣಶಕ್ತಿ ಬಂದ ತರುವಾಯ ಪೃಥ್ವೀಕಾಯ ಮೊದಲಾದ ಜೀವಗಳ ಹಿಂಸೆಯು ಘಟಿಸದಂತೆ ತನ್ನ ಮುಂದಿನ ಒಂದು ಮಾರು ದಾರಿಯನ್ನು ಚೆನ್ನಾಗಿ ನೋಡುತ್ತ ಮೆಲ್ಲನೆ ನಡೆಯುವುದು ಈರ್ಯಾಸಮಿತಿಯು; ತನಗೂ ಪರರಿಗೂ ಹಿತಕರವೂ, ಮಿತವೂ, ನಿರ್ದೋಷವೂ ಆದ ಪ್ರಿಯವಚನವನ್ನಾಡುವುದು ಭಾಷಾಸಮಿತಿಯು; ದಾತೃಗಳು ವಿಧಿಪೂರ್ವಕವಾಗಿ ಕೊಡುವ ಆಹಾರವನ್ನು ಹರ್ಷ ವಿಷಾದಗಳಿಲ್ಲದೆ, ರುಚಿ ಅರುಚಿಯೆನ್ನದೆ ಶಾಂತತನದಿಂದ ಸ್ವೀಕರಿಸುವುದು ಏಷಣಾಸಮಿತಿಯು; ತನ್ನ ಶರೀರ ಮತ್ತು ಪುಸ್ತಕ, ಕಮಂಡುಲು ಮುಂತಾದ ಉಪಕರಣ ಇವುಗಳನ್ನು ಜೀವಹಿಂಸೆಯಾಗದಂತೆ ಕಣ್ಣಿಟ್ಟು ನೋಡಿ ಯಾವುದೊಂದು ಸ್ಥಳದಲ್ಲಿಡುವುದು ಮತ್ತು ಪಿಂಛದಿಂದ ಸ್ವಚ್ಛಮಾಡಿ ತೆಗೆದುಕೊಳ್ಳುವುದು ಆದಾನನಿಕ್ಷೇಪಸಮಿತಿಯು; ತ್ರಸಸ್ಥಾವರಜೀವಗಳಿಗೆ ಪೀಡೆಯಾಗದಂತಹ ಜಂತು ರಹಿತವಾದ ಗಟ್ಟಿ ನೆಲದ ಮೇಲೆ ಮಲಮೂತ್ರ ವಿಸರ್ಜನ ಮಾಡುವುದೂ, + ಪ್ರಾಸುಕ ಜಲದಿಂದ ಶೌಚಕ್ರಿಯೆ ಮಾಡಿಕೊಳ್ಳುವುದೂ ವ್ಯುತ್ಸರ್ಗ ಸಮಿತಿಯು. ಸಮಿತಿಶಬ್ದದ ಹಿಂದೆ ಸಮ್ಯಕ್ ಶಬ್ದವನ್ನು ಪ್ರಯೋಗಿಸುವರು. ಉದಾ:– ಸಮ್ಯಕ್ ಈರ್ಯಾ ಸಮಿತಿ ಮುಂ.

**ಧರ್ಮ**– ನಿಶ್ಚಯನಯಾನುಸಾರವಾಗಿ– 'ಭವಸಾಗರದಲ್ಲಿ ಬೀಳುವ ಆತ್ಮನನ್ನು ಧರಿಸುವುದು' ಧರ್ಮವು; ಎಂದರೆ ನಿಜ ಶುದ್ಧಾತ್ಮಸ್ವರೂಪಭಾವನೆಯೇ ಧರ್ಮವು; ಇದಕ್ಕೆ ಸಾಧಕವಾದುದು ಸ್ವರ್ಗಾದಿ- ಇಷ್ಟ ಸಾಧಕವಾದುದು ವ್ಯವಹಾರ ನಯದಿಂದ ಧರ್ಮವೆನಿಸುವುದು. ಇದು ಕ್ಷಮೆ, ಮಾರ್ದವ, ಆರ್ಜವ, ಶೌಚ, ಸತ್ಯ, ಸಂಯಮ, ತಪ, ತ್ಯಾಗ, ಆಕಿಂಚನ್ಯ, ಬ್ರಹ್ಮಚರ್ಯ ಎಂದು ಹತ್ತು ಬಗೆಯಾಗಿದೆ. ಈ ಶಬ್ದಗಳ ಹಿಂದೆ ಉತ್ತಮ ಶಬ್ದವನ್ನಿಟ್ಟು ಉತ್ತಮ ಕ್ಷಮೆ ಮೊದಲಾಗಿ ಪ್ರಯೋಗಿಸುವರು. ಸಾಧುಗಳು ಆಹಾರ ಮೊದಲಾದುವುಗಳಿಗಾಗಿ ಹೋಗುವಾಗ ದುಷ್ಟರು ಮಾಡಬಹುದಾದ ಹಾಸ್ಯ ದುರ್ವಚನಾದಿಗಳಿಂದ ಕ್ರೋಧ ಪರಿಣಾಮವನ್ನು ಮಾಡಿಕೊಳ್ಳದಿರುವುದು ಉತ್ತಮ ಕ್ಷಮೆ; ಕುಲ, ಜಾತಿ, ರೂಪ, ಜ್ಞಾನ ಮೊದಲಾದುವುಗಳಿಂದ ಗರ್ವ ಪಡದಿರುವುದೂ, ಅನ್ಯರ ತಿರಸ್ಕಾರದಿಂದ ತಾನು ನೊಂದುಕೊಳ್ಳದಿರುವುದೂ ಉತ್ತಮ ಮಾರ್ದವವು; ಮನೋವಚನ

+ ಮುಹೂರ್ತಂ ಗಾಲಿತಂ ತೋಯಂ ಪ್ರಾಸುಕಂ ಪ್ರಹರದ್ವಯಂ | ಉಷ್ಣೋದಕ ಮಹೋರಾತ್ರಂ ತತ ಸಮ್ಮೂರ್ಛಿತಂ ಭವೇತ್ ||

ಕಾಯಗಳ ಕುಟಿಲತೆಯನ್ನು ಕಳೆದುಕೊಂಡು ಸರಳತನದಿಂದ ನಡೆವುದು ಉತ್ತಮ ಆರ್ಜವವು; ಪರರ ಧನ, ಮೊದಲಾದುವನ್ನು ಅಪಹರಿಸುವ ಇಚ್ಛೆಯನ್ನು ಮಾಡದಿರುವುದು ಉತ್ತಮ ಶೌಚವು; ಸಮಸ್ತಪ್ರಾಣಿಗಳೊಡನೆ ಹಿತ ಮಿತಪ್ರಿಯವಾದ ಸತ್ಯವನ್ನಾಡುವುದು ಉತ್ತಮ ಸತ್ಯವು; ಪಂಚೇಂದ್ರಿಯಗಳನ್ನೂ ಮನಸ್ಸನ್ನೂ ಸ್ವಾಧೀನದಲ್ಲಿರಿಸಿಕೊಳ್ಳುವುದು ಉತ್ತಮ ಸಂಯಮವು; ತ್ರಸಜೀವಗಳ ಪೀಡೆಯನ್ನು ಮಾಡದಿರುವುದೂ, ಇಂದ್ರಿಯಗಳ ಇಷ್ಟಾನಿಷ್ಟ ವಿಷಯಗಳಲ್ಲಿ ರಾಗದ್ವೇಷಗಳನ್ನು ಮಾಡದಿರುವುದೂ ಉತ್ತಮ ಸಂಯಮವು; ಕರ್ಮಕ್ಷಯ ನಿಮಿತ್ತವಾಗಿ ಉಪವಾಸ ಮೊದಲಾದ ದ್ವಾದಶವಿಧ ತಪಸ್ಸನ್ನಾಚರಿಸುವುದು ಉತ್ತಮತಪವು; ಜ್ಞಾನಾದಿದಾನವು ಉತ್ತಮ ತ್ಯಾಗವು; ಧನಧಾನ್ಯಶರೀರಾದಿ ಬಾಹ್ಯಪರಿಗ್ರಹವನ್ನೂ ರಾಗದ್ವೇಷಾದಿ ಅಂತರಂಗ ಪರಿಗ್ರಹವನ್ನೂ ಸಂಪೂರ್ಣವಾಗಿ ಬಿಡುವುದು ಉತ್ತಮಾಕಿಂಚನ್ಯವು; ಮನೋವಾಕ್ಕಾಯಗಳಿಂದ ಸ್ತ್ರೀವಿಷಯಾಸಕ್ತಿಯನ್ನು ಬಿಡುವುದು ಉತ್ತಮಬ್ರಹ್ಮಚರ್ಯವು. ಇವು ದಶಧರ್ಮಗಳೆನಿಸುವುವು.

**ಅನುಪ್ರೇಕ್ಷೆ**– ಪುನಃ ಪುನಃ ಚಿಂತನೆ ಮಾಡುವುದು– ಶರೀರಾದಿ ಪರದ್ರವ್ಯಗಳು, ಧರ್ಮಾದಿಗಳು ಇವುಗಳನ್ನು ಮೇಲೆ ಮೇಲೆ ಚಿಂತಿಸುವುದು– ಅನುಪ್ರೇಕ್ಷೆಯು. ಇದು ಹನ್ನೆರಡು ಬಗೆಯಾಗಿದೆ.

೧ ಅನಿತ್ಯಾನುಪ್ರೇಕ್ಷೆ– ಶರೀರೇಂದ್ರಿಯವಿಷಯಗಳೂ, ಭೋಗೋಪಭೋಗ ವಸ್ತುಗಳೂ ನೀರಿನ ಗುಳ್ಳೆಯಂತೆ ಅಸ್ಥಿರವಾದವುಗಳೆಂದು ಚಿಂತಿಸುವುದು ಅಶರಣಾನುಪ್ರೇಕ್ಷೆ– ಅಡವಿಯಲ್ಲಿ ಹುಲಿಯ ಕೈಗೆ ಸಿಲುಕಿದ ಜಿಂಕೆಗೆ ಹೇಗೆ ರಕ್ಷಕರಿಲ್ಲವೋ ಹಾಗೆ ಸಂಸಾರದಲ್ಲಿ ಜೀವನಿಗೆ ಮಂತ್ರೌಷಧ ಬಂಧು ಮಿತ್ರ ಮೊದಲಾದವರಾರೂ ರಕ್ಷಕರಲ್ಲವೆಂದೂ, ಧರ್ಮವೊಂದೇ ರಕ್ಷಕವೆಂದೂ ಚಿಂತಿಸುವುದು ೩ ಸಂಸಾರಾನುಪ್ರೇಕ್ಷೆ– ದ್ರವ್ಯಕ್ಷೇತ್ರ,ಕಾಲಭವಭಾವರೂಪ ಸಂಸಾರದಲ್ಲಿ ಜೀವನು ಕರ್ಮಾಧೀನನಾಗಿ ರಂಗಭೂಮಿಯಲ್ಲಿ ನಟನು ಬೇರೆ ಬೇರೆ ರೂಪಗಳನ್ನು ಧರಿಸಿ ನಟಿಸುವಂತೆ ಬೇರೆ ಬೇರೆ ಜನ್ಮಗಳಲ್ಲಿ ಪಿತೃ, ಭ್ರಾತೃ ಪುತ್ರ, ಪ್ರಭು, ಸೇವಕ ಮುಂತಾದ ರೂಪಗಳಿಂದ ನಟಿಸುತ್ತಿರುವನೆಂದು ಚಿಂತಿಸುವುದು. ೪ ಏಕತ್ವಾನುಪ್ರೇಕ್ಷೆ– ಜನ್ಮ ಜರಾ ಮರಣಾದಿ ಮಹಾದುಃಖವನ್ನನುಭವಿಸುವವನೂ ಜನ್ಮಾಂತರವನ್ನೈದುವವನೂ ತಾನೊಬ್ಬನಲ್ಲದೆ ಈ ದುಃಖಕ್ಕೆ ಇನ್ನೊಬ್ಬರು ಪಾಲುಗಾರರಲ್ಲವೆಂದೂ, ಧರ್ಮವೊಂದೇ ಸಹಾಯಕವೆಂದೂ ಚಿಂತಿಸುವುದು. ೫ ಅನ್ಯತ್ವಾನುಪ್ರೇಕ್ಷೆ– ಶರೀರ, ಪುತ್ರದಾರಾದಿ ಪರಿಗ್ರಹ ಇವುಗಳಿಂದ ಆತ್ಮನು ಭಿನ್ನನೆಂದು ಭಾವಿಸುವುದು. ೬ ಅಶುಚಿತ್ವಾನುಪ್ರೇಕ್ಷೆ– ಶರೀರವು ಅತ್ಯಂತ ಅಪವಿತ್ರವಾದುದೆಂದು ಭಾವಿಸುವುದು. ೭ ಆಸ್ರವಾನುಪ್ರೇಕ್ಷೆ– ಮಿಥ್ಯಾತ್ವ, ಅವಿರತಿ, ಕಷಾಯಗಳಿಂದ ಕರ್ಮಾಸ್ರವವುಂಟಾಗುವುದೆಂದೂ ಆ ಆಸ್ರವವೇ ಸಂಸಾ

ರಕಾರಣವೆಂದೂ, ಆತ್ಮಗುಣಘಾತುಕವೆಂದೂ ಭಾವಿಸುವುದು. ೮ ಸಂವರಾನುಪ್ರೇಕ್ಷೆ- ಆತ್ಮನಲ್ಲಿ ಕರ್ಮಪುದ್ಗಲಗಳು ಬಂದು ಸೇರುವ ಮಾರ್ಗಗಳಾದ ಕಷಾಯಾದಿಗಳನ್ನು ತಡೆದರೆ ಶ್ರೇಯಸ್ಸಾಗುವುದೆಂದು ಭಾವಿಸುವುದು. ೯ ನಿರ್ಜರಾನುಪ್ರೇಕ್ಷೆ- ಕರ್ಮನಿರ್ಜರೆಯು ಏತರಿಂದಾದೀತೆಂದು ಭಾವಿಸುವುದು. ೧೦ ಲೋಕಾನುಪ್ರೇಕ್ಷೆ- ಲೋಕವೆಂಬುದು ಎಷ್ಟು ದೊಡ್ಡದು, ಅದರಲ್ಲಿರುವ ಜೀವಗಳು ಯಾವಯಾವುವು? ಇದು ಸಾದಿಯೋ ಅನಾದಿಯೋ ಮೊದಲಾದುವನ್ನು ಭಾವಿಸುವುದು. ೧೧ ಬೋಧಿದುರ್ಲಭಾನುಪ್ರೇಕ್ಷೆ- ಬೋಧಿಯು (ಸಮ್ಯಗ್ದರ್ಶನ ಜ್ಞಾನ ಚಾರಿತ್ರ್ಯಗಳು) ದುರ್ಲಭವೆಂದು ಭಾವಿಸುವುದು. ೧೨ ಧರ್ಮಾನುಪ್ರೇಕ್ಷೆ- ಧರ್ಮಪ್ರಾಪ್ತಿಯಿಂದ ಅಭ್ಯುದಯ ನಿಶ್ರೇಯಸಗಳು ದೊರೆವುವೆಂದು ಭಾಸುವುದು.

**ಪರೀಷಹ ಜಯ**- ಶರೀರಕ್ಕೂ ಮನಸ್ಸಿಗೂ ದುಃಖವನ್ನೀಯುವ ಹಸಿವೆ, ನೀರಡಿಕೆ ಮೊದಲಾದುವು ಪರೀಷಹಗಳು ಇವು ಇಪ್ಪತ್ತೆರಡು ೧ ಕ್ಷುತ್ಪರೀಷಹ, ೨ ತೃಷ್ಣಾಪರೀ. ೩ ಶೀತಪರೀ. ೪ ಉಷ್ಣಪರೀ. ೫ ದಂಶ ಮಶಕ (ಸೊಳ್ಳೆ ನೊಣ ಮೊದಲಾದವುಗಳ ಕಡಿತ) ೬ ನಾಗ್ನ್ಯ- ಬತ್ತಲೆಯಿರುವೆನೆಂಬ ನಾಚಿಕೆ ೭ ಅರತಿ- ಸ್ವಾಧ್ಯಾಯ ಧ್ಯಾನ ಭಾವನಾದಿಗಳಲ್ಲಿ ಅಪ್ರೀತಿ ೮ ಸ್ತ್ರೀ- ಚೆಲುವೆಯರ ಹಾವ ಭಾವಗಳಿಗೆ ಮನಸೋಲುವುದು ೯ ಚರ್ಯೆ ಮಾರ್ಗಶ್ರಮದಿಂದಾಗುವ ಆಯಾಸ ೧೦ ನಿಷದ್ಯೆ- ಧ್ಯಾನಕ್ಕಾಗಿ ಕಲ್ಪಿಸಿದ ಆಸನದಲ್ಲಿ ಒದಗುವ ತೊಂದರೆ ೧೧ ಶಯ್ಯೆ- ಶಯನ ೧೨ ಆಕ್ರೋಶ- ಅನಿಷ್ಟವಚನ ೧೩ ವಧ- ತಾಡನ, ಪೀಡನ ೧೪ ಯಾಚನೆ- ಅಂಗಸಂಜ್ಞೆ, ದೀನಮುದ್ರೆ ಮುಂತಾದ ಉಪಾಯದಿಂದ ಯಾಚಿಸುವುದು. ೧೫ ಅಲಾಭ- ಆಹಾರಾದಿಗಳು ದೊರೆಯದಿರುವುದು ೧೬ ರೋಗ- ರೋಗಜನ್ಯವ್ಯಥೆ ೧೭ ತೃಣಸ್ಪರ್ಶ- ದಾರಿಯಲ್ಲಿ ಮುಳ್ಳು ಕಲ್ಲುಗಳು ಚುಚ್ಚಲು ಆಗುವ ವ್ಯಥೆ ೧೮ ಮಲ- ಶರೀರದ ಹೊಲಸು ೧೯ ಸತ್ಕಾರ ಪುರಸ್ಕಾರ- ಜನರಿಂದ ದೊರೆವ ಸತ್ಕಾರ, ಅಗ್ರಪೂಜೆ ಮುಂ. ೨೦ ಪ್ರಜ್ಞೆ- ಪಾಂಡಿತ್ಯಗರ್ವ ೨೧ ಅಜ್ಞಾನ- ತನ್ನ ಅಜ್ಞಾನಕ್ಕಾಗಿಯೂ, ಜ್ಞಾನಪ್ರಾಪ್ತಿಯ ಅಭಿಲಾಷೆಯಿದ್ದರೂ ಜ್ಞಾನವುಂಟಾಗದಿರುವುದಕ್ಕಾಗಿಯೂ ವ್ಯಥೆ ಬಡುವುದು ೨೨ ಅದರ್ಶನ- ದೀಕ್ಷೆ ಹೊಂದಿ ಬಹುಕಾಲವಾದರೂ ಋದ್ಧಿಯು ಇಲ್ಲವೆ ಅವಧಿಜ್ಞಾನವು ಉಂಟಾಗಲಿಲ್ಲವೆಂಬ ಚಿಂತೆ ಈ ೨೨ ವಿಷಯಗಳಿಂದುಂಟಾಗುವ ಬಾಧೆಗಳನ್ನು ಸಹಿಸುವುದು ಪರೀಷಹಜಯವು. ಇದು ರತ್ನತ್ರಯ ಮಾರ್ಗದಲ್ಲಿ ಕದಲದಿರುವುದಕ್ಕೂ, ಕರ್ಮನಿರ್ಜರೆಗೂ ಆವಶ್ಯಕವು.

**ಚಾರಿತ್ರ**- ನಿಶ್ಚಯರತ್ನ ತ್ರಯರೂಪವಾದ ಶುದ್ಧಾತ್ಮಭಾವನೆಯಲ್ಲಿ ತೊಡಗಿರುವುದು ನಿಶ್ಚಯ ಚಾರಿತ್ರವು; ಅಹಿಂಸಾದಿ ಮಹಾವ್ರತಧಾರಣ, ಸಮಿತಿಪಾಲನ, ಇಂದ್ರಿಯಜಯ ಕಷಾಯ ನಿಗ್ರಹ ಈ ರೂಪವಾಗಿರುವುದು ವ್ಯವಹಾರಚಾ

ರಿತ್ರವು. ಇದು ಸಾಮಾಯಿಕ, ಛೇದೋಪಸ್ಥಾಪನೆ, ಪರಿಹಾರವಿಶುದ್ಧಿ, ಸೂಕ್ಷ್ಮ ಸಾಂಪರಾಯ, ಯಥಾಖ್ಯಾತ ಚಾರಿತ್ರ ಎಂದು ಐದು ಬಗೆಯಾಗಿದೆ.

ಸಾಮಾಯಿಕ- ವ್ರತಧಾರಣ, ಸಮಿತಿಪಾಲನ, ಕಷಾಯನಿಗ್ರಹ, ಅಶುಭ ಪ್ರವೃತ್ತಿ ತ್ಯಾಗ, ಇಂದ್ರಿಯಜಯ ಮುಂ.

ಛೇದೋಪಸ್ಥಾಪನೆ- ಮನುಷ್ಯನು ಪ್ರಮಾದವಶನಾಗಲು ಸಾವದ್ಯ (ಸದೋಷ) ಕ್ರಿಯೆಗಳುಂಟಾಗುವುವು. ಇದರಿಂದ ನಿರವದ್ಯ (ನಿರ್ದೋಷ) ಕ್ರಿಯೆಗಳಿಗೆ ಬಾಧೆ ಬರುವುದು. ಆದುದರಿಂದ ಪ್ರಾಯಶ್ಚಿತ್ತವನ್ನು ಮಾಡಿಕೊಂಡು ಸಾವದ್ಯಕ್ರಿಯೆಗಳಿಂದುಂಟಾದ ದೋಷಗಳನ್ನು ನಾಶಗೂಳಿಸಿ ಮತ್ತೆ ವ್ರತಮೊದಲಾದ ಸಂಯಮಮಾರ್ಗದಲ್ಲಿ ಆತ್ಮನನ್ನು ತೊಡಗಿಸುವುದು.

ಪರಿಹಾರವಿಶುದ್ಧಿ- ಪಂಚಸಮಿತಿಗಳನ್ನೂ, ಗುಪ್ತಿತ್ರಯವನ್ನೂ ಧರಿಸಿ, ಯಾವಾಗಲೂ ದೋಷಗಳನ್ನು ದೂರೀಕರಿಸುವುದು. ಸಂಜ್ವಲನ ಸೂಕ್ಷ್ಮಲೋಭ ಕಷಾಯೋದಯವುಳ್ಳ ಸಂಯಮಿಯ ಚಾರಿತ್ರವಿದು.

ಯಥಾಖ್ಯಾತ- ೧೧-೧೨ನೆಯ ಗುಣಸ್ಥಾನಗಳಲ್ಲಿರುವ ಸಂಯಮಿಗಳಲ್ಲಿಯೂ ೧೩-೧೪ನೆಯ ಗುಣಸ್ಥಾನಗಳಲ್ಲಿರುವ ಸಯೋಗಿಕೇವಲಿ, ಅಯೋಗಿಕೇವಲಿಗಳಲ್ಲಿಯೂ ಉಂಟಾಗುವ ಯಥಾಸ್ಥಿತ- ಆತ್ಮೋಪಲಬ್ಧಿರೂಪವಾದುದು.

ಸಂವರಕ್ಕೆ ಕಾರಣವಾದ ದ್ವಾದಶವಿಧತಪಸ್ಸು ನಿರ್ಜರೆಗೂ ಕಾರಣವಾಗಿದೆ. ಆದುದರಿಂದ ತಪಸ್ಸಿನ ವಿವರಣೆಯು ನಿರ್ಜರಾತತ್ತ್ವ ನಿರೂಪಣೆಯಲ್ಲಿ ಹೇಳಲ್ಪಡುವುದು. ಈ ವರೆಗೆ ಹೇಳಿದ ತ್ರಿಗುಪ್ತಿಗಳು, ಪಂಚ ಸಮಿತಿಗಳು ಮೊದಲಾದುವುಗಳಿಂದ ಕರ್ಮಾಸ್ರವಗಳ ತಡೆಯಾಗುವುದರಿಂದ ಸಂವರವುಂಟಾಗುವುದು.

---

# ೬. ನಿರ್ಜರಾ ತತ್ತ್ವ



ಉಪಾತ್ತ ಕರ್ಮಣಃ ಪಾತೋ ನಿರ್ಜರಾ । ತತ್ತ್ವಾರ್ಥ ಸಾರ. ೬–೨

ಶುಭ, ಅಶುಭ ಪರಿಣಾಮಗಳನ್ನು ನಿರೋಧಿಸುವುದು ಸಂವರವೆಂದು ಹಿಂದೆ ಹೇಳಿದೆ. ಸಂವರ ಮತ್ತು ಶುದ್ಧೋಪಯೋಗ (ಸಮ್ಯಗ್ದರ್ಶನ, ಮತ್ತು ಸಮ್ಯಗ್ ಜ್ಞಾನ) ಇವುಗಳಿಂದ ಕೂಡಿದ ಜೀವನು ಹಲವು ತರದ ತಪಸ್ಸನ್ನಾಚರಿಸಿ ಪೂರ್ವದಲ್ಲಿ ಸಂಚಿತವಾದ ಹಲವು ಭಾವ ಕರ್ಮಗಳನ್ನೂ, ದ್ರವ್ಯಕರ್ಮಗಳನ್ನೂ ನಾಶಗೊಳಿಸುವನು. ಈ ಉಪಾತ್ತಕರ್ಮ ನಾಶಕ್ಕೆ ನಿರ್ಜರೆಯೆಂದೆನ್ನುವರು.

ಅಂತರಂಗ ಬಹಿರಂಗವೆಂಬ ದ್ವಿವಿಧ ತಪೋಬಲದಿಂದ ಕರ್ಮಗಳ ಶಕ್ತಿಯನ್ನು ನಾಶಗೊಳಿಸಲು ಸಮರ್ಥವಾದ ಶುದ್ಧೋಪಯೋಗವು ಭಾವನಿರ್ಜರೆಯೆಂದೂ, ಶುದ್ಧೋಪಯೋಗದ ಸಾಮರ್ಥ್ಯ ಮೂಲಕ ತನ್ನ ಫಲವನ್ನು ಕೊಡಲ ಸಮರ್ಥವಾದ, ಪೂರ್ವಸಂಚಿತಕರ್ಮಪುದ್ಗಲಗಳ ಏಕದೇಶಕ್ಷಯವು ದ್ರವ್ಯನಿರ್ಜರೆಯೆಂದೂ ಹೇಳಲ್ಪಡುವುದು. ಅವಿಪಾಕನಿರ್ಜರೆ ಸವಿಪಾಕನಿರ್ಜರೆಯೆಂದು ನಿರ್ಜರೆಯು ದ್ವಿವಿಧವಾಗಿದೆ. ಕಠೋರತಪಶ್ಚರಣಾದಿಗಳಿಂದ ಕರ್ಮಗಳು ಫಲದಾನೋನ್ಮುಖವಾಗುವ ಮೊದಲೇ ಜೀವನಿಂದ ತೊಲಗಿ ಹೋಗಬಹುದು. ಇದೇ ಅವಿಪಾಕ ನಿರ್ಜರೆಯು. ತಪಶ್ಚರಣಾದಿಗಳಿಂದ ಕರ್ಮಗಳನ್ನು ತೊಲಗಿಸದಿದ್ದರೆ ಕರ್ಮಗಳು ತಮ್ಮ ಫಲಗಳನ್ನು ಕೊಡುತ್ತ ಜೀವನೊಡನೆ ಕೂಡಿಕೊಂಡು ಇರುವುವು. ಮತ್ತು ಅವುಗಳ ನಿರ್ದಿಷ್ಟಕಾಲವು ಮುಗಿದ ಬಳಿಕ ಜೀವನನ್ನು ತೊಲಗಿ ಹೋಗುವುವು. ಇದು ಸವಿಪಾಕ ನಿರ್ಜರೆಯು. ಜೀವನೊಡನೆ ಕರ್ಮಗಳ ಸ್ಥಿತಿಯು (ಉಳಿಯುವ ಕಾಲ ಪರಿಮಾಣವು) ಗೊತ್ತು ಮಾಡಲ್ಪಟ್ಟಿದೆ. ಈ ಸ್ಥಿತಿಯು ಪರಾಸ್ಥಿತಿ ( Maximum duration ), ಅಪರಾಸ್ಥಿತಿ ಎಂದು ದ್ವಿವಿಧವಾಗಿದೆ. ಜ್ಞಾನಾವರಣೀಯ, ದರ್ಶನಾವರಣೀಯ ವೇದನೀಯ ಅಂತರಾಯ ಕರ್ಮಗಳ ಪರಾಸ್ಥಿತಿಯು ತ್ರಿಂಶತ್ ಕೋಟಿ × ಕೋಟಿ ಸಾಗರಕಾಲವು. ಇದೇ ಮೇರೆಗೆ ಉಳಿದ ಕರ್ಮಗಳ ಪರಾಸ್ಥಿತಿಕಾಲವೂ ಹೇಳಲ್ಪಟ್ಟಿದೆ. ವೇದನೀಯ ಕರ್ಮದ ಅಪರಾಸ್ಥಿತಿಯು ದ್ವಾದಶಮುಹೂರ್ತಗಳು ನಾಮ, ಗೋತ್ರ ಕರ್ಮಗಳಿಗೆ ಅಷ್ಟಮುಹೂರ್ತಗಳು; ಉಳಿದ ಕರ್ಮಗಳಿಗೆ ಒಂದು ಅಂತರ್ಮುಹೂರ್ತವು. (ಮುಹೂರ್ತ= ೪೮ ಮಿನಿಟು. ೧ ಆವಲಿ + ೧ ಸಮಯ = ೧ ಜಘನ್ಯ ಅಂತರ್ಮುಹೂರ್ತ; ಒಂದು ಸಮಯದಿಂದ ಕಡಿಮೆಯಾದ ೧ ಮುಹೂರ್ತ = ೧ ಉತ್ಕೃಷ್ಟ ಅಂತರ್ಮುಹೂರ್ತ. )

ಸವಿಪಾಕ ನಿರ್ಜರೆಯು ಎಲ್ಲರಿಗೂ ಉಂಟು. ಅವಿಪಾಕ ನಿರ್ಜರೆಯು ತಪಸ್ವಿಗಳಿಗೆ ಮಾತ್ರ ಉಂಟು.

ಕರ್ಮನಿರ್ಜರೆಗೆ ಕಾರಣೀಭೂತವಾದ ತಪಸ್ಸು ಬಾಹ್ಯ, ಅಭ್ಯಂತರ ಎಂದು ಎರಡು ವಿಧವಾಗಿದೆ ಪ್ರತಿ ಒಂದೂ ಆರಾರು ಬಗೆಯಾಗಿದೆ ಹೀಗೆ ತಪಸ್ಸು ಹನ್ನೆರಡು ವಿಧವಾಗಿದೆ.

ಅನಶನ, ಅವಮೋದರ್ಯ, ವೃತ್ತಿಪರಿಸಂಖ್ಯಾನ, ರಸಪರಿತ್ಯಾಗ, ವಿವಿಕ್ತಶಯ್ಯಾಸನ, ಕಾಯಕ್ಲೇಶ ಎಂದು ಬಾಹ್ಯ ತಪಸ್ಸಿನಲ್ಲಿ ಆರು ಪ್ರಕಾರಗಳು. ಲೌಕಿಕ ಖ್ಯಾತಿ ಲಾಭಗಳ ಇಚ್ಛೆಯಿಲ್ಲದೆ ಸಂಯಮಸಿದ್ಧ್ಯರ್ಥವಾಗಿ ಭೋಜನ ತ್ಯಾಗಮಾಡುವುದು ಅನಶನವು. ಸಂಯಮಶುದ್ಧಿಗಾಗಿಯೂ, ಧ್ಯಾನದ ನಿಶ್ಚಲತೆಗಾಗಿಯೂ ಅಲ್ಪಭೋಜನಮಾಡುವುದು ಅವಮೋದರ್ಯವು. ಆಹಾರಕ್ಕಾಗಿ ವನದಿಂದ ಗ್ರಾಮಕ್ಕೆ ಬರುವ ಮುನಿಗಳು ಕೆಲವು ಮನೆಗಳಿಗೇ ಭಿಕ್ಷೆಗೆ ಹೋಗುವೆವು, ಮಾರ್ಗದಲ್ಲಿ ಇಲ್ಲವೆ ಬಯಲಲ್ಲಿ ಭಿಕ್ಷೆಯು ದೊರೆತರೆ ಮಾತ್ರ ಸ್ವೀಕರಿಸುವೆವು, ಮೊದಲಾದ ನಿಯಮವನ್ನು ಮಾಡಿಕೊಳ್ಳುವರು. ಹಾಗೆ ಆಹಾರವು ದೊರೆಯದಿದ್ದರೆ ಉಪವಾಸ ಮಾಡುವರು. ಈ ತಪಸ್ಸಿಗೆ ವೃತ್ತಿಪರಿಸಂಖ್ಯಾನವೆನ್ನುವರು. ಇಂದ್ರಿಯ ನಿಗ್ರಹಕ್ಕಾಗಿ, ಸಂಯಮರಕ್ಷಣೆಗಾಗಿ, ಇಚ್ಛಾತ್ಯಾಗಕ್ಕಾಗಿ ತುಪ್ಪ, ಹಾಲು, ಎಣ್ಣೆ, ಬೆಲ್ಲ, ಸಕ್ಕರೆ, ಉಪ್ಪು ಮೊದಲಾದ ರಸ ಪದಾರ್ಥಗಳನ್ನು ಬಿಡುವುದು ರಸಪರಿತ್ಯಾಗವೆನಿಸುವುದು. ಜೀವರಕ್ಷಣೆಗಾಗಿ ಶುದ್ಧಸ್ಥಲದಲ್ಲಿ- ಇಲ್ಲವೆ ಪರ್ವತ ಗುಹಾದಿ ಏಕಾಂತ ಸ್ಥಲದಲ್ಲಿ ಬ್ರಹ್ಮಚರ್ಯ ಸ್ವಾಧ್ಯಾಯ ಧ್ಯಾನಾದಿಗಳಿಗೆ ವಿಘ್ನವು ಬಾರದಂತಹ ನಿರುಪದ್ರವಸ್ಥಲದಲ್ಲಿ ಶಯನ, ಆಸನಗಳನ್ನು ಮಾಡುವುದು ವಿವಿಕ್ತಶಯ್ಯಾಸನವೆನಿಸುವುದು. ಶರೀರದ ಮೇಲಿನ ಮಮತ್ವವನ್ನು ತೊರೆದು ಧರ್ಮಕ್ಕೆ ವಿರೋಧವು ಬಾರದಂತೆ ಶರೀರವನ್ನು ಸೊರಗಿಸುವುದು ಕಾಯಕ್ಲೇಶವೆನಿಸುವುದು.

ಪ್ರಾಯಶ್ಚಿತ್ತ, ವಿನಯ, ವೈಯಾವೃತ್ಯ, ಸ್ವಾಧ್ಯಾಯ, ವ್ಯುತ್ಸರ್ಗ, ಧ್ಯಾನ ಎಂದು ಅಭ್ಯಂತರ ತಪದಲ್ಲಿ ಆರು ಪ್ರಕಾರಗಳುಂಟು. ಪ್ರಮಾದದಿಂದುಂಟಾದ ದೋಷಗಳ ನಿವಾರಣೆಗೆ ಶುದ್ಧಿಮಾಡಿಕೊಳ್ಳುವುದು ಪ್ರಾಯಶ್ಚಿತ್ತವು. ಪೂಜ್ಯರಲ್ಲಿ ಆದರವನ್ನು ತೋರಿಸುವುದು ವಿನಯವು; ಮುನಿಗಳ ಶುಶ್ರೂಷೆ ಮಾಡುವುದು ವೈಯಾವೃತ್ಯವು ಜ್ಞಾನ, ಅಧ್ಯಯನಗಳಲ್ಲಿ ಆಲಸ್ಯವನ್ನು ತೊರೆದು ಅವುಗಳನ್ನು ಸಂಪಾದಿಸುವುದು ಸ್ವಾಧ್ಯಾಯವು. ಬಾಹ್ಯಾಂತರ ಪರಿಗ್ರಹಗಳನ್ನು ತೊರೆವುದು ವ್ಯುತ್ಸರ್ಗವು. ಚಿತ್ತವಿಕ್ಷೇಪವಾಗಗೊಡದಿರುವುದು ಧ್ಯಾನವು.

ಧ್ಯಾನವು ನಿರ್ಜರೆಗೆ ಮುಖ್ಯವಾದುದೆಂದು ('ಮುಣಿ ಊಣ ಝಾದಿಣಿಯದಂ । ಣಾಣಂ ಸೋ ಸಂ ಧುಣೋದಿ ಕಮ್ಮರಯಂ') ಶ್ರೀ ಕುಂದ ಕುಂದಾ

ಚಾರ್ಯರು ಪಂಚಸ್ತಿಕಾಯ ಸಮಯಸಾರದಲ್ಲಿ ಹೇಳಿದ್ದಾರೆ. (ಅರ್ಥ- ಆತ್ಮನು ಜ್ಞಾನಸ್ವರೂಪನೆಂದು ನಿಶ್ಚಲಮನಸ್ಸಿನಿಂದ ಧ್ಯಾನ ಮಾಡುವವನು ರಾಗದ್ವೇಷಾದಿ ರಹಿತನಾಗಿ ಪೂರ್ವಸಂಚಿತವಾದ ಕರ್ಮಗಳೆಂಬ ಧೂಳಿಯನ್ನು ಹಾರಿಸಿಬಿಡುತ್ತಾನೆ. )

ಪ್ರಾಯಶ್ಚಿತ್ತವು ಆಲೋಚನೆ, ಪ್ರತಿಕ್ರಮಣ, ತದುಭಯ, ವಿವೇಕ, ವ್ಯುತ್ಸರ್ಗ, ತಪ, ಛೇದ, ಪರಿಹಾರ, ಉಪಸ್ಥಾಪನೆ, ಎಂದು ಒಂಭತ್ತುವಿಧವಾಗಿದೆ. ಯೋಗ್ಯ ಗುರುವಿನ ಬಳಿಗೆ ಹೋಗಿ ತನ್ನ ಅಪರಾಧವನ್ನು ಹೇಳುವುದು ಆಲೋಚನೆಯು. ನಾನು ಮಾಡಿದ ದೋಷವು ಮಿಥ್ಯಾ ಆಗಲಿ. ಎಂದೆನ್ನುವುದು ಪ್ರತಿಕ್ರಮಣವು; ಕೆಲವು ದೋಷಗಳನ್ನು ಆಲೋಚನೆಯಿಂದಲೂ, ಕೆಲವನ್ನು ಆಲೋಚನಾಪ್ರತಿಕ್ರಮಣಗಳೆರಡರಿಂದಲೂ ಕಳೆದುಕೊಳ್ಳುವುದು ತದುಭಯವು. ಆಹಾರ, ಪಾನ, ಉಪಕರಣಗಳನ್ನು ಕೆಲವು ವೇಳೆ ಬಿಡಿಸುವುದು ವಿವೇಕವು. ಕಾಲನಿಯಮದಿಂದ ಕಾಯೋತ್ಸರ್ಗಾದಿಗಳನ್ನು ಮಾಡುವುದು ವ್ಯುತ್ಸರ್ಗವು. ಅನಶನಾದಿ ತಪ, ಪಂಚೋಪವಾಸಾದಿಗಳನ್ನು ಮಾಡುವುದು ತಪವು. ದಿವಸ, ತಿಂಗಳು ವರ್ಷ ಈ ಅವಧಿಯಿಂದ ದೀಕ್ಷಾಚ್ಛೇದ ಮಾಡುವುದು ಛೇದವು. ಕೆಲವು ಕಾಲಾವಧಿಯಿಂದ ಸಂಘದಿಂದ ಬೇರೆ ಮಾಡುವುದು ಪರಿಹಾರವು. ಪುನರ್ದೀಕ್ಷೆಯನ್ನು ಕೊಡುವುದು ಉಪಸ್ಥಾಪನೆಯು.

ವಿನಯವು ಜ್ಞಾನವಿನಯ, ದರ್ಶನವಿನಯ, ಚಾರಿತ್ರವಿನಯ, ಉಪಚಾರವಿನಯ ಎಂಬ ನಾಲ್ಕು ಬಗೆಯಾಗಿದೆ. ಸಂಮಾನಪೂರ್ವಕವಾಗಿ ಜೈನ ಸಿದ್ಧಾಂತದ ಗ್ರಹಣ, ಸ್ಮರಣ ಅಭ್ಯಾಸಗಳನ್ನು ಮಾಡುವುದು ಜ್ಞಾನವಿನಯವು; ಸಮ್ಯಗ್ದರ್ಶನದ ಧಾರಣಮಾಡುವುದು ದರ್ಶನ ವಿನಯವು; ಮುನೀಶ್ವರರ ವಿಷಯವಾಗಿ ಅತ್ಯಂತ ಭಕ್ತಿಯನ್ನು ಧರಿಸುವುದು, ಭಕ್ತಿಯಿಂದ ನಮಸ್ಕಾರಾದಿಗಳನ್ನು ಮಾಡುವುದು ಚಾರಿತ್ರವಿನಯವು; ಆಚಾರ್ಯಾದಿ ಪೂಜ್ಯರನ್ನು ಕಂಡಾಗ ಅಭ್ಯುತ್ಥಾನ, ವಂದನ, ಅನುಗಮನ, ಸ್ತವ ಮೊದಲಾದುವನ್ನು ಮಾಡುವುದು ಉಪಚಾರವಿನಯವು.

ಹತ್ತು ತರದ ಸಾಧುಗಳ ಸೇವೆಯನ್ನು ಮಾಡುವುದು ಹತ್ತು ತರದ ವೈಯಾವೃತ್ಯವೆನಿಸುವುದು. ಆಚಾರ್ಯ, ಉಪಾಧ್ಯಾಯ, ತಪಸ್ವಿ, ಶೈಕ್ಷ ಗ್ಲಾನ, ಗಣ, ಕುಲ, ಸಂಘ, ಮನೋಜ್ಞ ಎಂದು ಸಾಧುಗಳಲ್ಲಿ ಹತ್ತು ಪ್ರಕಾರಗಳು.

ವ್ರತಗಳನ್ನು ಧರಿಸುವವರೂ ಪ್ರಾಯಶ್ಚಿತ್ತ ಕೊಡುವವರೂ, ಸಂಪೂರ್ಣ ಶಾಸ್ತ್ರಜ್ಞಾನವುಳ್ಳವರೂ, ಪಂಚಾಚಾರಗಳನ್ನು ಪಾಲಿಸುವವರೂ ಆಚಾರ್ಯರು. ವ್ರತಶೀಲಭಾವನಾಯುಕ್ತರಾಗಿ ಮುನಿಗಣಕ್ಕೆ ಶಾಸ್ತ್ರಾಭ್ಯಾಸ ಮಾಡಿಸುವವರು ಉಪಾಧ್ಯಾಯರು. ಉಪವಾಸಾದಿ ಮಹಾತಪಸ್ಸನ್ನು ಮಾಡುವವರು

ತಪಸ್ವಿಗಳು. ಶ್ರುತಜ್ಞಾನದ ಅಭ್ಯಾಸದಲ್ಲಿ ಆಸಕ್ತರೂ ವ್ರತಭಾವನೆಯಲ್ಲಿ ನಿಪುಣರೂ ಶೈಕ್ಷರೆನಿಸುವರು. ರೋಗದಿಂದ ಕ್ಲೇಶಿತ ಶರೀರವುಳ್ಳವರು ಗ್ಲಾನ ಮುನಿಗಳು. ವೃದ್ಧ ಮುನಿಸಮುದಾಯ, ಇಲ್ಲವೆ ದೊಡ್ಡ ಮುನಿಗಳ ಪರಂಪರೆ ಇದನ್ನು ಅನುಸರಿಸುವವರು ಗಣಮುನಿಗಳು. ದೀಕ್ಷೆಕೊಡುವ ಆಚಾರ್ಯರ ಶಿಷ್ಯಸಮೂಹಕ್ಕೆ ಕುಲಸಾಧುಗಳೆನ್ನುವರು. ನಾಲ್ಕು ಪ್ರಕಾರದ ಮುನಿಗಳ ಸಮೂಹಕ್ಕೆ ಸಂಘವೆನ್ನುವರು. ಬಹುದಿವಸಗಳಿಂದ ದೀಕ್ಷೆಯನ್ನು ಹೊಂದಿದವರು ಸಾಧುಗಳು. ಉಪದೇಶದಿಂದ ಇಲ್ಲವೆ ಉಪದೇಶ ಮಾಡದೆ ಲೋಕಪೂಜ್ಯರಾದವರು ಮನೋಜ್ಞರು.

ಸ್ವಾಧ್ಯಾಯವು ವಾಚನೆ, ಪೃಚ್ಛನೆ, ಅನುಪ್ರೇಕ್ಷೆ, ಆಮ್ನಾಯ, ಧರ್ಮೋಪದೇಶ ಎಂದು ಅಯ್ದು ಬಗೆಯಾಗಿದೆ. ನಿರ್ದೋಷವಾದ ಗ್ರಂಥ, ಅರ್ಥಗಳನ್ನು ಭವ್ಯ ಪಾತ್ರಕ್ಕೆ ಶ್ರವಣ ಮಾಡಿಸುವುದು, ತಾನು ಮನನ ಮಾಡುವುದು ವಾಚನಾಸ್ವಾಧ್ಯಾಯವು. ಶಬ್ದ, ಅರ್ಥಗಳಲ್ಲಿ ಬಂದ ಸಂಶಯವನ್ನು ಹೋಗಲಾಡಿಸಿಕೊಳ್ಳುವುದಕ್ಕಾಗಿ ತನಗಿಂತ ಜ್ಞಾನಿಗಳನ್ನು ಕೇಳುವುದು ಪೃಚ್ಛನಾಸ್ವಾಧ್ಯಾಯವು. ಗುರುಜನಕ್ರಮದಿಂದ ಬಂದ ಅರ್ಥವನ್ನು ಮೇಲೆ ಮೇಲೆ ಚಿಂತನ ಮಾಡುವುದು ಅನುಪ್ರೇಕ್ಷಾ ಸ್ವಾಧ್ಯಾಯವು. ಆಚಾರ್ಯಪರಂಪರೆಯಿಂದ ಬಂದ ಕ್ರಮದಿಂದ ಶುದ್ಧ ಸೂತ್ರಪಾಠವನ್ನೋದುವುದು ಆಮ್ನಾಯಸ್ವಾಧ್ಯಾಯವು. ದುರ್ಮಾರ್ಗದಿಂದ ತಿರುಗಿಸುವುದಕ್ಕೂ ಸತ್ಯಮಾರ್ಗವನ್ನು ತೋರಿಸುವುದಕ್ಕೂ ಧರ್ಮಾರ್ಥವಾಗಿ ಉಪದೇಶಿಸುವುದು ಧರ್ಮೋಪದೇಶ ಸ್ವಾಧ್ಯಾಯವು.

ವ್ಯುತ್ಸರ್ಗವು ಬಾಹ್ಯೋಪಧಿತ್ಯಾಗ, ಆಭ್ಯಂತರೋಪಧಿತ್ಯಾಗ ಎಂದು ಎರಡು ವಿಧವಾಗಿದೆ. ಧನಧಾನ್ಯಾದಿ ಬಾಹ್ಯ ಪರಿಗ್ರಹಗಳನ್ನು ಬಿಡುವುದು ಬಾಹ್ಯೋಪಧಿತ್ಯಾಗವು; ಕ್ರೋಧಾದಿ ಅಭ್ಯಂತರ ಪರಿಗ್ರಹಗಳನ್ನು ಬಿಡುವುದು ಅಭ್ಯಂತರೋಪಧಿತ್ಯಾಗವು.

ಧ್ಯಾನವು ಆರ್ತ, ರೌದ್ರ, ಧರ್ಮ್ಯ, ಶುಕ್ಲ ಎಂದು ನಾಲ್ಕು ವಿಧವಾಗಿದೆ. ಇವುಗಳಲ್ಲಿ ಕೊನೆಯವೆರಡು ಮೋಕ್ಷಸಾಧಕವಾಗಿವೆ. ವಿಷ, ಕಂಟಕ, ಶತ್ರು, ಶಸ್ತ್ರ ಮೊದಲಾದ ಅಪ್ರಿಯ ವಸ್ತುಗಳ ಸಂಬಂಧವಾದಾಗ ಆ ಸಂಬಂಧವನ್ನು ದೂರ ಮಾಡಲೋಸುಗ ಮೇಲೆ ಮೇಲೆ ಚಿಂತನ ಮಾಡುವುದು ಆರ್ತಧ್ಯಾನದ ಮೊದಲನೆಯ ಪ್ರಕಾರವು. ಸ್ತ್ರೀ, ಪುತ್ರ ಮೊದಲಾದ ಇಷ್ಟ ವಸ್ತುಗಳ ವಿಯೋಗವಾಗಿರಲು ಅವುಗಳ ಪ್ರಾಪ್ತಿಗಾಗಿ ಚಿಂತಿಸುವುದು ಆರ್ತಧ್ಯಾನದ ಎರಡನೆಯ ಪ್ರಕಾರವು. ರೋಗ ಜನಿತವಾದ ಪೀಡೆಯನ್ನು ಚಿಂತಿಸುವುದು ವಿಲಾಪಾದಿಗಳನ್ನು ಮಾಡುವುದು ಆರ್ತಧ್ಯಾನದ ಮೂರನೆಯ ಪ್ರಕಾರವು. ಆಗಾಮಿಗಳಾದ

ಭೋಗ ಮೊದಲಾದುವುಗಳ ಚಿಂತನ ಮಾಡುವುದೂ, ಅವುಗಳ ವಿಚಾರದಲ್ಲಿಯೇ ತೊಡಗುವುದೂ ಆರ್ತಧ್ಯಾನದ ನಾಲ್ಕನೆಯ ಪ್ರಕಾರವು.

ರೌದ್ರಧ್ಯಾನವು ಹಿಂಸೆ, ಅನೃತ, ಸ್ತೇಯ, ಪರಿಗ್ರಹಸಂರಕ್ಷಣ ಎಂಬ ನಾಲ್ಕನ್ನು ಅವಲಂಬಿಸಿ ಹುಟ್ಟುವುದರಿಂದ ನಾಲ್ಕು ವಿಧವಾಗಿದೆ. ಹಿಂಸೆಯಲ್ಲಿ ಆನಂದಬಡುವುದು ಹಿಂಸಾನಂದ ರೌದ್ರಧ್ಯಾನವು; ಅನೃತದಲ್ಲಿ ಆನಂದಬಡುವುದು ಅನೃತಾನಂದ ರೌದ್ರಧ್ಯಾನವು. ಚೌರ್ಯದಲ್ಲಿ ಆನಂದಬಡುವುದು ಸ್ತೇಯಾನಂದ ರೌದ್ರಧ್ಯಾನವು. ಪರಿಗ್ರಹರಕ್ಷಣದಲ್ಲಿ ಆನಂದಬಡುವುದು ಪರಿಗ್ರಹಾನಂದ ರೌದ್ರಧ್ಯಾನವು.

ಧರ್ಮಧ್ಯಾನವು ಆಜ್ಞಾವಿಚಯ, ಅಪಾಯವಿಚಯ, ವಿಪಾಕವಿಚಯ ಸಂಸ್ಥಾನವಿಚಯ, ಎಂದು ನಾಲ್ಕು ವಿಧವಾಗಿದೆ. ಶಾಸ್ತ್ರಪ್ರಮಾಣದಿಂದ ಅರ್ಥ ವಿಚಾರ ಮಾಡುವುದು ಆಜ್ಞಾವಿಚಯವು ಮಿಥ್ಯಾದೃಷ್ಟಿಗಳುಪದೇಶಿಸಿದ ದುರ್ಮಾರ್ಗವನ್ನು ಬಿಟ್ಟು ಜನಗಳು ಹೇಗೆ ಸನ್ಮಾರ್ಗವರ್ತಿಗಳಾದಾರೆಂದು ಚಿಂತಿಸುವುದು ಅಪಾಯವಿಚಯವು. ಕರ್ಮಫಲಾನುಭವವನ್ನು ಗುಣಸ್ಥಾನಮಾರ್ಗಣದಲ್ಲಿ ಚಿಂತಿಸುವುದು, ಮತ್ತು ಉದೀರಣದ ಚಿಂತನ ಮಾಡುವುದು ವಿಪಾಕ ವಿಚಯವು. ಲೋಕಾಕಾರ, ಲೋಕದೊಳಗಿನ ದ್ರವ್ಯ, ಸ್ವಭಾವ, ದ್ವಾದಶಭಾವನೆ ಇವುಗಳನ್ನು ಚಿಂತಿಸುವುದು ಸಂಸ್ಥಾನವಿಚಯವು.

ಶುಕ್ಲಧ್ಯಾನದಲ್ಲಿ ಪೃಥಕ್ತ್ವವಿತರ್ಕ, ಏಕತ್ವವಿತರ್ಕ, ಸೂಕ್ಷ್ಮಕ್ರಿಯಾಪ್ರತಿಪಾತಿ, ವ್ಯುಪರತಕ್ರಿಯಾನಿವರ್ತಿ ಎಂದು ನಾಲ್ಕು ಪ್ರಕಾರಗಳು.

ಕರ್ಮನಿರ್ಜರೆಯು ಕೆಳಗೆ ಹೇಳುವವರಲ್ಲಿ ಅಸಂಖ್ಯಾತಗುಣವಾಗಿ ಬೆಳೆಯುವುದು. ಸಮ್ಯಗ್ದೃಷ್ಟಿ, ಪಂಚಮ ಗುಣಸ್ಥಾನದಲ್ಲಿರುವ ಶ್ರಾವಕ, ವಿರತ (ಮಹಾವ್ರತಿಮುನಿ) ಅನಂತಾನುಬಂಧಿಗಳ ಬಿಡುಗಡೆ ಮಾಡುವವ, ದರ್ಶನಮೋಹವನ್ನು ನಾಶಗೊಳಿಸುವವ, ಚಾರಿತ್ರಮೋಹದ ಉಪಶಮ ಮಾಡುವವ, ಉಪಶಾಂತ ಮೋಹ, ಕ್ಷಪಕಶ್ರೇಣಿಯನ್ನೇರುವವ, ಕ್ಷೀಣಮೋಹ (೧೨ನೆಯ ಗುಣಸ್ಥಾನದಲ್ಲಿರುವವ,) ಜಿನಸ್ವಾಮಿ.

ಸಮ್ಯಗ್ದೃಷ್ಟಿಯ ಅಸಂಖ್ಯಾತಗುಣ (ಮಡಿ) ಪಂಚಮ ಗುಣಸ್ಥಾನದ ಶ್ರಾವಕನಿಗೆ ಕರ್ಮನಿರ್ಜರೆಯಾಗುವುದು. ಇದರಂತೆ ಮುಂದೆಯೂ ಅಸಂಖ್ಯಾತಗುಣ ಎಂದು ತಿಳಿಯಬೇಕು.

ಮುನಿಗಳಲ್ಲಿ ಪುಲಾಕ, ಬಕುಶ, ಕುಶೀಲ, ನಿರ್ಗ್ರಂಥ, ಸ್ನಾತಕ ಎಂದು ಅಯ್ದು ಪ್ರಕಾರಗಳು. ಇವರಲ್ಲಿ ಮುಂದು ಮುಂದಿನವರು ಹೆಚ್ಚು ಹೆಚ್ಚು ಯೋಗ್ಯತೆಯುಳ್ಳವರು. ಸರ್ವಘಾತಿಕರ್ಮಗಳನ್ನು ನಾಶಮಾಡಿದ ಕೇವಲಿಗಳು ಸ್ನಾತಕರೆನಿಸುವರು.

---

# ೭ ಮೋಕ್ಷತತ್ತ್ವ

ಕೃತ್ಸ್ನಕರ್ಮ ವಿಪ್ರಮೋಕ್ಷೋ ಮೋಕ್ಷಃ । ತತ್ತ್ವಾರ್ಥಸಾರ ೧೦।೨

ಸಮಸ್ತಕರ್ಮಗಳ ಅತ್ಯಂತಾಭಾವವೇ ಮೋಕ್ಷವು. ಮೋಕ್ಷವು ಜೀವನ ಸ್ವಸ್ವರೂಪವು ಮೋಕ್ಷದಲ್ಲಿ ಜೀವನು ಸರ್ವಜ್ಞನೂ ಸರ್ವದರ್ಶಿಯೂ, ಅನಂತ ವೀರ್ಯ, ಅನಂತಸುಖಗಳುಳ್ಳವನೂ ಆಗುವನು. ಮುಕ್ತ ಜೀವನಿಗೆ ಕರ್ಮ ಬಂಧವೂ ತನ್ಮೂಲಕವಾದ ಸಂಸಾರವೂ ಇಲ್ಲ. ಮೋಕ್ಷಕ್ಕೆ ಕೇವಲ ಜ್ಞಾನವು ಮೊದಲು ಬೇಕಾದುದು. ಮೋಕ್ಷಸಾಧಕನಾದ ಜೀವನಿಗೆ ಮೊದಲು ಮೋಹನೀಯ ಕರ್ಮದ ನಾಶವಾಗಬೇಕು; ತರುವಾಯ ಜೀವನಿಗೆ 'ಕ್ಷೀಣಕಷಾಯ' ಎಂಬ ಗುಣಸ್ಥಾನವು ಅಂತರ್ಮುಹೂರ್ತದ ವರೆಗೆ ಬರುವುದು. ತರುವಾಯ ಜ್ಞಾನಾವರಣ, ದರ್ಶನಾವರಣ, ಅಂತರಾಯ ಎಂಬ ಕರ್ಮಗಳು ಏಕ ಕಾಲಕ್ಕೆ ನಾಶ ಹೊಂದುವುವು. ಆಗ ಕೇವಲ ಜ್ಞಾನವುಂಟಾಗುವುದು; ಎಂದರೆ ಜ್ಞಾನಾವರಣ ಮೊದಲಾದ ನಾಲ್ಕು ಘಾತಿ ಕರ್ಮಗಳ ಕ್ಷಯವಾಗಲು ಕೇವಲ ಜ್ಞಾನವು ಪ್ರಾಪ್ತವಾಗುವುದು. ಕೇವಲ ಜ್ಞಾನವುಂಟಾದ ಕೂಡಲೆ ವೇದನೀಯ, ಆಯು, ನಾಮ, ಗೋತ್ರ ಎಂಬ ನಾಲ್ಕು ಅಘಾತಿ ಕರ್ಮಗಳೂ ನಾಶಹೊಂದುವುವು. ಈ ಮೇರೆಗೆ ಮುಂದೆ ಆಗುವ ಕರ್ಮಬಂಧದ ಕಾರಣಗಳ ಅಭಾವವೂ, ಪೂರ್ವ ಸಂಚಿತ ಕರ್ಮಗಳ ನಾಶವೂ ಆಗುವುದನ್ನೇ ಮೋಕ್ಷವೆಂದೆನ್ನುವರು. ಮೋಕ್ಷ ಸಮ್ಮುಖನಾದ ಜೀವನ ಔಪಶಮಿಕ, ಕ್ಷಾಯೋಪಶಮಿಕ, ಔದಯಿಕ, ಭವ್ಯತ್ವ ಎಂಬ ನಾಲ್ಕುತರದ ಭಾವಗಳೂ, ಸರ್ವವಿಧ ಪುದ್ಗಲ ಕರ್ಮಪ್ರಕೃತಿಗಳೂ ನಾಶ ಹೊಂದುವುವು. ಜೀವನಿಗೆ ಜ್ಞಾನಾವರಣ ಕರ್ಮದ ಕ್ಷಯವಾಗಲು ಕೇವಲಜ್ಞಾನವೂ, ದರ್ಶನಾವರಣ ಕರ್ಮದಕ್ಷಯವಾಗಲು ಕೇವಲದರ್ಶನವೂ, ವೇದನೀಯ ಕರ್ಮಕ್ಷಯವಾಗಲು ಅವ್ಯಾಬಾಧತ್ವವೂ ಮೋಹನೀಯ ಕರ್ಮದ ಕ್ಷಯವಾಗಲು ಸ್ಥಿರವಾದ ಸಮ್ಯಕ್ತ್ವವೂ, ಆಯುಃಕರ್ಮದ ಕ್ಷಯವಾಗಲು ಪರಮಸೂಕ್ಷ್ಮತೆಯೂ, ನಾಮಕರ್ಮದ ಕ್ಷಯವಾಗಲು ಅವಗಾಹನಶಕ್ತಿಯೂ, ಗೋತ್ರ ಕರ್ಮದ ಕ್ಷಯವಾಗಲು ಅಗುರುಲಘುತ್ವವೂ, ಅಂತರಾಯಕರ್ಮದ ಕ್ಷಯವಾಗಲು ಅನಂತವೀರ್ಯತ್ವವೂ ಉಂಟಾಗುವುವು.

ಮುಕ್ತಜೀವನದಲ್ಲಿ, ಕೇವಲ ಸಮ್ಯಕ್ತ್ವ ಕೇವಲಜ್ಞಾನ, ಕೇವಲ ದರ್ಶನ, ಕೇವಲ ಸಿದ್ಧತ್ವ ಎಂಬ ನಾಲ್ಕು ಭಾವಗಳು ಮಾತ್ರ ಉಳಿಯುವುವು. ಕೇವಲ (ಅನಂತ) ಜ್ಞಾನ ಕೇವಲ (ಅನಂತ) ದರ್ಶನಗಳು ಮುಕ್ತ ಜೀವನಲ್ಲಿರುವುವೆಂದು ಹೇಳುವುದರಿಂದ ಇವುಗಳೊಡನೆ ಅವಿನಾಭಾವಿಸಂಬಂಧದಿಂದ ಇರುವ ಅನಂತ

ವೀರ್ಯ ಅನಂತಸುಖಗಳೂ ಮುಕ್ತಜೀವನಲ್ಲಿರುವುವೆಂದು ಹೇಳಿದಂತೆಯೇ ಆಗುವುದು.

ಸಂಪೂರ್ಣ ಕರ್ಮಕ್ಷಯವಾದೊಡನೆ ಮುಕ್ತಜೀವನು ಲೋಕಾಂತದ ವರೆಗೆ ಮೇಲಕ್ಕೆ ಹೋಗುವನು. ಮುಕ್ತಜೀವನ ಈ ಊರ್ಧ್ವಗಮನಕ್ಕೆ ಪೂರ್ವ ಸಂಸ್ಕಾರವೂ, ಸರ್ವಸಂಗರಾಹಿತ್ಯವೂ, ಕರ್ಮಬಂಧನಾಶವೂ ಕಾರಣ ವಾಗಿವೆ. ಇವಲ್ಲದೆ ಊರ್ಧ್ವಗಮನವು ಮುಕ್ತಜೀವನ ಸ್ವಭಾವವೂ ಆಗಿದೆ. ಜೀವನು ಅಮುಕ್ತದಶೆಯಲ್ಲಿದ್ದಾಗ ಮುಕ್ತಿಗಾಗಿ ನಿರಂತರ ಚಿಂತನದಲ್ಲಿರುವನು. ಈ ಪೂರ್ವ ಸಂಸ್ಕಾರಮೂಲಕವಾಗಿ ಆತನು ಮುಕ್ತನಾದ ಬಳಿಕ ಕುಂಬಾರನು ತನ್ನ ಕೈಯೊಳಗಿನ ದಂಡದಿಂದ ತಿಗುರಿಯನ್ನು ತಿರುಗಿಸಿ ದಂಡವನ್ನು ಈಚೆಗೆ ತೆಗೆದುಕೊಂಡರೂ ಕೂಡ ತಿಗುರಿಯು ತಿರುಗುತ್ತಿರುವಂತೆ ಊರ್ಧ್ವಗಮನ ವನ್ನು ಹೊಂದುವನು. ಸಂಗವೆಂದರೆ ಅನಾದಿ ಕರ್ಮಬಂಧನದಿಂದ ಬಂದ ಪರಾಧೀನತೆಯು. ಇದು ಮುಕ್ತದಶೆಯಲ್ಲಿ ಇಲ್ಲದಂತಾಗುವುದು. ಈಸುಗುಂಬಳಕಾಯಿಯ ಮೇಲೆ ಹಲವು ಮಣ್ಣಿನ ಲೇಪಗಳು ಅಂಟಿಕೊಂಡಿರುವಾಗ ಆ ಕಾಯಿಯನ್ನು ನೀರಲ್ಲಿ ಮುಳುಗಿಸಿದರೆ ಅದು ಕೆಳಗೇ ಇರುವುದು. ಆದರೆ ಅದರ ಮಣ್ಣಿನ ಲೇಪಗಳು ಇಲ್ಲದಂತಾಗಲು ಅದು ಒಮ್ಮೆಲೆ ಮೇಲಕ್ಕೆ ಬರುವುದು. ಹಾಗೆಯೇ ಕರ್ಮಲೇಪವು ಕಳಚಿಹೋಗಲು ಜೀವನು ಊರ್ಧ್ವಗಮನ ಹೊಂದುವನು. ಜೀವನಿಗೆ ಗತಿ, ನಾಮ, ಆಯು ಮೊದಲಾದ ಕರ್ಮಗಳು ಬಂಧರೂಪವಾಗಿವೆ. ಔಡಲಕಾಯಿಗೆ ಅದರ ತುಂಬು (ತೊಟ್ಟು) ಬಂಧರೂಪ ವಾಗಿರುವುದು. ಕಾಯಿಯೂ, ಔಡಲ ಗಿಡದ ಟೊಂಗೆಯೂ ಒಣಗಿ ಹೋಗಲು ಕಾಯಿಯ ಮೇಲಿನ ತೊಗಟೆಯು ಬಿಚ್ಚಲು ಒಳಗಿನ ಬೀಜವು ಮೇಲಕ್ಕೆ ಹಾರುವುದು. ಹಾಗೆಯೇ ಬಂಧಚ್ಛೇದವಾಗಲು ಜೀವನು ಮೇಲಕ್ಕೇರುವನು. ಜೀವನಿಗೆ ನರಕಗತಿ, ತಿರ್ಯಗ್ಗತಿ ಮೊದಲಾದ ಬೇರೆ ಗತಿಗಳು ಬರುವುದಕ್ಕೆ ಆಯಾ ಕರ್ಮಗಳು ಕಾರಣವಾಗಿವೆ. ಆ ಕಾರಣಗಳೇ ಮುಕ್ತದಶೆಯಲ್ಲಿ ಇಲ್ಲದಂತಾಗಲು ಅಗ್ನಿಜ್ವಾಲೆಯು ಅತ್ತಲಿತ್ತಲಿನ ಗಾಳಿಯ ಪ್ರತಿಬಂಧವಾಗದಿದ್ದರೆ ಹೇಗೆ ಮೇಲಕ್ಕೆ ಹೋಗುವುದೋ ಹಾಗೆ ಜೀವನು ಮೇಲಕ್ಕೆ ಹೋಗುವನು. ಆದರೆ ಮೇಲೆ ಹೋಗುವುದಕ್ಕೆ ಒಂದು ಅವಧಿಯುಂಟು. ಲೋಕದ ಕೊನೆಯ ವರೆಗೆ ಮುಕ್ತಜೀವನು ಹೋಗುವನು. ಅದಕ್ಕೂ ಮೇಲ್ಗಡೆಯಲ್ಲಿ (ಅಲೋಕಾಕಾಶದಲ್ಲಿ) ಜೀವನ ಗತಿಗೆ ಸಹಾಯವಾದ 'ಧರ್ಮ' ದ್ರವ್ಯವು ಇಲ್ಲದ ಕಾರಣದಿಂದ ಅಲ್ಲಿ ಹೋಗುವುದಿಲ್ಲ. ಲೋಕಾಂತದಲ್ಲಿ ಮುಕ್ತಜೀವರು ಇರುವ ಸ್ಥಾನಕ್ಕೆ ಸಿದ್ಧಕ್ಷೇತ್ರ (ಸಿದ್ಧಶಿಲೆ) ಎಂಬ ಹೆಸರುಂಟು. ಇದು ೪೫ ಲಕ್ಷ ಯೋಜನ ವಿಸ್ತೀರ್ಣವಾಗಿದೆ.

ಎಲ್ಲ ಮುಕ್ತಜೀವರೂ ಅನಂತಜ್ಞಾನಸುಖಸ್ವರೂಪರಾಗಿ ಏಕರೂಪನೆಂದು ತೋರಿದರೂ ಅವರಲ್ಲಿ ಕ್ಷೇತ್ರಾನುಯೋಗ ಮೊದಲಾದ ಹನ್ನೆರಡು ಅನುಯೋಗಗಳಿಂದ ಭೇದವನ್ನು ಹೇಳಬಹುದು. ಕೆಲವು ಜೀವರು ಭರತಕ್ಷೇತ್ರದಿಂದ, ಕೆಲವರು ವಿದೇಹಕ್ಷೇತ್ರದಿಂದ ಮುಕ್ತರಾಗಿರುವರು. ಇದರಿಂದ ಮುಕ್ತರಲ್ಲಿ ಭೇದವುಂಟಾಗುವುದರಿಂದ ಇದು ಕ್ಷೇತ್ರಾನುಯೋಗವು ಇದೇ ಮೇರೆಗೆ ಉತ್ಸರ್ಪಿಣಿ, ಅವಸರ್ಪಿಣಿ ಎಂಬ ಕಾಲಭೇದ, ಸಿದ್ಧಗತಿ, ಮನುಷ್ಯಗತಿ ಎಂಬ ಗತಿಭೇದ, ದ್ರವ್ಯಲಿಂಗ ಭಾವಲಿಂಗ ಎಂಬ ಲಿಂಗಭೇದ, ತೀರ್ಥಕರತ್ವ, ಎಂಬ ತೀರ್ಥಭೇದ, ಏಕಚರಿತ್ರ, ದ್ವಿತ್ರಿ ಚರಿತ್ರ ಎಂಬ ಚರಿತ್ರಭೇದ. ಪರೋಪದೇಶ ಸಾಪೇಕ್ಷತೆ, ಪರೋಪದೇಶ ನಿರಪೇಕ್ಷತೆ ಎಂಬ ಬುದ್ಧ ಬೋಧಿತಭೇದ, ಶರೀರಗಳ ಎತ್ತರಗಳ ಭಿನ್ನತೆ ಎಂಬ ಅವಗಾಹನ ಭೇದ, ಮುಕ್ತರಾಗುವ ಕಾಲಾವಧಿಭೇದ, ಒಂದು ಬಾರಿಗೆ ಒಬ್ಬ ಜೀವನು ಇಲ್ಲವೆ ೧೦೮ ಜೀವರು ಎಂಬ ಸಂಖ್ಯಾಭೇದ, ಒಂದು ಕಡೆಯುವರು ಸ್ವಲ್ಪಜೀವರು, ಇನ್ನೊಂದು ಕಡೆಯುವರು ಬಹುಜೀವರು ಎಂಬ ಅಲ್ಪಬಹುತ್ವಭೇದ ಇವು ಮುಕ್ತಜೀವರ ಭೇದ ಸಾಧಕಗಳು.

ಮುಕ್ತರ ಆವಾಸಸ್ಥಾನವಾದ ಸಿದ್ಧಕ್ಷೇತ್ರವು ನಿಯತಪ್ರದೇಶವುಳ್ಳದ್ದಾದರೂ ಅಲ್ಲಿ ಅಸಂಖ್ಯಾಸಂಖ್ಯ ಮುಕ್ತ ಜೀವರು ಆವಾಸಮಾಡುವರು. ಏಕೆಂದರೆ ಮುಕ್ತಜೀವರಲ್ಲಿ ಅವಗಾಹನಶಕ್ತಿಯು ಬರುವುದು. ಅವಗಾಹನವೆಂದರೆ ಹಲವು ದೀಪಗಳ ಪ್ರಕಾಶಗಳು ಒಂದೇ ಪ್ರದೇಶದಲ್ಲಿ ಹೇಗೆ ಒಂದರೊಳಗೊಂದು ಸೇರಿಕೊಂಡಿರುವುವೋ ಹಾಗೆ ಜೀವರ ಪ್ರದೇಶಗಳು ಒಂದರೊಳಗೊಂದು ಸೇರಿಕೊಳ್ಳುವುವು. ದೀಪದ ಮೇಲೆ ಒಂದು ಕೊಡವನ್ನು ಮುಚ್ಚಿದರೆ ಆ ದೀಪದ ಪ್ರಕಾಶವು ಕೊಡದ ಪ್ರದೇಶವನ್ನು ಮಾತ್ರ ವ್ಯಾಪಿಸುವುದು; ಒಂದು ಕೋಣೆಯಲ್ಲಿ ದೀಪವನ್ನಿಟ್ಟರೆ ಅದು ಕೋಣೆಯನ್ನಷ್ಟೇ ವ್ಯಾಪಿಸುವುದು. ಹಾಗೆ ಸಂಸಾರಿ ಜೀವನ ಜ್ಞಾನಪ್ರಕಾಶವು ಸಂಹರಣ ವಿಸರ್ಪಣ ಗುಣಗಳಿಂದ ತಾನು ಸ್ವೀಕರಿಸಿದ ಶರೀರವನ್ನು ವ್ಯಾಪಿಸುವುದು. ಆದರೆ ಮುಕ್ತಜೀವರ ಜ್ಞಾನಪ್ರಕಾಶಕ್ಕೆ ಸಂಹರಣ ವಿಸರ್ಪಣಗಳಿಲ್ಲ

ಮೋಕ್ಷದಲ್ಲಿ ಭಾವಮೋಕ್ಷ ದ್ರವ್ಯಮೋಕ್ಷ ಎಂದು ಎರಡು ಪ್ರಕಾರಗಳು.

ಭಾವಮೋಕ್ಷ– ಜೀವನಲ್ಲಿರುವ ರಾಗದ್ವೇಷಾದಿ ಭಾವಗಳು ಕರ್ಮಾಸ್ರವಕ್ಕೆ ಕಾರಣಗಳು. ಜ್ಞಾನಿಯಾದ ಜೀವನಲ್ಲಿ ರಾಗದ್ವೇಷಗಳು ನಿಃಶೇಷವಾಗಿ ನಾಶ ಹೊಂದಿರುವುದರಿಂದ ಆತನಿಗೆ ಯಾವತರದ ಆಸ್ರವವೂ ಇಲ್ಲ. ಈ ಮೇರೆಗೆ ಆಸ್ರವದ ಅತ್ಯಂತಾಭಾವವೂ ಉಂಟಾಗುವುದು. ಅದರಿಂದ ಜೀವನು ಸರ್ವಜ್ಞನೂ, ಸರ್ವದರ್ಶಿಯೂ, ಇಂದ್ರಿಯಾತೀತವಾದ ಸ್ಥಿರ ಸುಖವನ್ನು ಭೋಗಿಸುವವನೂ ಆಗುವನು. ಆತ್ಮನಿಗೆ ಸಂಬದ್ಧವಾದ ಸಮಸ್ತ ಕರ್ಮಗಳ ನಾಶಕ್ಕೆ ಕಾರಣವಾದ ಆತ್ಮನ ಪರಿಣಾಮವು ಭಾವಮೋಕ್ಷವೆನಿಸುವುದು.

ಜ್ಞಪ್ತಿಕ್ರಿಯೆ– ಎಂದರೆ ತಿಳಿಯುವ ಕ್ರಿಯೆಯು ಜೀವನ ಮುಖ್ಯ ಭಾವವು ಆದರೆ ಅನಾದಿ ಕರ್ಮ ಪುದ್ಗಲಗಳಿಂದ ಮುಚ್ಚಿದುದರಿಂದ ಸಂಸಾರಿಜೀವನ ಜ್ಞಪ್ತಿ ಕ್ರಿಯೆಯು ಏಕಕಾಲಕ್ಕೆ ಸರ್ವವಸ್ತುಗಳನ್ನು ವಿಷಯೀಕರಿಸಿಗೊಳ್ಳುವುದಿಲ್ಲ ಘಟಜ್ಞಾನವಾದ ಉತ್ತರಕ್ಷಣವಲ್ಲಿ ಪಟಜ್ಞಾನವೂ, ತದುತ್ತರಕ್ಷಣದಲ್ಲಿ ಕುಡ್ಯ ಜ್ಞಾನವೂ ಹೀಗೆ ಕ್ರಮದಿಂದ ವಸ್ತುಗಳು ಜ್ಞಾನವಿಷಯಗಳಾಗುವುವು. ಸಂಸಾರಿ ಜೀವನ ಈ ಜ್ಞಪ್ತಿಕ್ರಿಯೆಯು ಅನಾದಿ ಮೋಹನೀಯ ಕರ್ಮದಿಂದ ಮುಚ್ಚಲ್ಪಟ್ಟುದರಿಂದ ಅಶುದ್ಧವಾಗಿರುವುದು. ಅದರಿಂದ ಆತನಿಗೆ ದ್ರವ್ಯ ಕರ್ಮಾಸ್ರವಗಳುಂಟಾಗುವುವು. ಆದರೆ ಜ್ಞಾನಿಯಾದ ಜೀವನ ರಾಗದ್ವೇಷಮೋಹಗಳು ನಾಶಹೊಂದಿರುವುದರಿಂದ ಆತನ ಜ್ಞಪ್ತಿಕ್ರಿಯೆಯು ಶುದ್ಧವಾಗಿರುವುದು. ಅದರಿಂದ ಆತನಿಗೆ ಆಸ್ರವವುಂಟಾಗುವುದಿಲ್ಲ. ಈರೀತಿಗೆ ಆಸ್ರವನಿರೋಧವುಂಟಾಗಲು ಮೋಹನೀಯ ಕರ್ಮಕ್ಷಯವೂ ಜ್ಞಾನಾವರಣಕರ್ಮಕ್ಷಯವೂ ಉಂಟಾಗುವುದರಿಂದ ಆತನ ಜ್ಞಪ್ತಿ ಕ್ರಿಯೆಯು ಅತ್ಯಂತಶುದ್ಧವೂ ನಿಶ್ಚಲವೂ ಆಗುವುದು. ಆದರಿಂದ ಆ ಜ್ಞಪ್ತಿಯಲ್ಲಿ ಘಟಪಟ ಕುಡ್ಯ ಸ್ತಂಭ ಮೊದಲಾದ ಲೋಕಾಲೋಕದೊಳಗಿನ ಸಮಸ್ತ ವಸ್ತುಗಳು ಏಕಕಾಲಕ್ಕೆ ವಿಷಯವಾಗುವುವು. ಇದನ್ನೇ ಕೇವಲ ಜ್ಞಾನವೆನ್ನುವರು. ಈ ರೀತಿಗೆ ಶುದ್ಧಜ್ಞಾನ ಪರಿಣಾಮವು ಜೀವನಿಗೆ ಉಂಟಾಗಲು ಆತನ ಭಾವಕರ್ಮಗಳ ನಾಶವುಂಟಾಗುವುದು. ಭಾವಕರ್ಮನಾಶದಿಂದ ದ್ರವ್ಯಕರ್ಮನಾಶವುಂಟಾಗುವುದು. ಆಗ ಜೀವನು ಸರ್ವಜ್ಞನೂ, ಸರ್ವದರ್ಶಿಯೂ, ಇಂದ್ರಿಯಾತೀತಸ್ಥಿರಸುಖಭೋಕ್ತೃವೂ ಆಗುವನು. ಈ ಜೀವನನ್ನು ಸಯೋಗ ಕೇವಲಿಯೆನ್ನುವರು. ಜೀವನ ಈ ಸ್ಥಿತಿಗೆ ಭಾವಮೋಕ್ಷವೆನ್ನುವರು. ಭಾವಮೋಕ್ಷವು ದ್ರವ್ಯಮೋಕ್ಷಕ್ಕೆ ಕಾರಣವಾಗುವುದು.

–ದ್ರವ್ಯಮೋಕ್ಷ ಸಯೋಗಕೇವಲಿಯು ರಾಗದ್ವೇಷಾದಿರಹಿತನೂ, ಕರ್ಮೋದಯದಿಂದುಂಟಾಗುವ ವೈಷಯಿಕ ಸುಖದುಃಖವಿಕಾರರಹಿತನೂ ಆಗಿರುವುದರಿಂದ ತನ್ನ ಶುದ್ಧಸ್ವರೂಪದ ಧ್ಯಾನದಲ್ಲಿಯೇ ಮಗ್ನನಾಗುವನು. ಈ ಧ್ಯಾನವು ಕರ್ಮ ನಿರ್ಜರಣದ ಮುಖ್ಯ ಸಾಧನವು. ಇದಲ್ಲದೆ ಸಯೋಗ ಕೇವಲಿಗೆ ಪರಮ ಸಂವರವೂ ಪ್ರಾಪ್ತವಾಗಿರುವುದು. ಕರ್ಮ ನಿರ್ಜರಣೆಗೆ ಸಾಧನೀಭೂತವಾದ ಶುದ್ಧಸ್ವರೂಪಧ್ಯಾನದಿಂದ ಆ ಜೀವನ ಸಂಚಿತಕರ್ಮಪರಂಪರೆಯು ಒಮ್ಮೆಲೆ ತನ್ನ ಫಲಕೊಟ್ಟು ನಾಶ ಹೊಂದುವುದು. ಇಲ್ಲವೆ ಸಮುದ್ಘಾತದಿಂದ ನಾಶ ಹೊಂದುವುದು; ಮತ್ತು ಅದು ಆಯುಃಕರ್ಮದ ನಾಶದೊಡನೆ ನಾಶಹೊಂದುವುದಿದ್ದರೆ ಹಾಗೆ ಆಯುಃಕರ್ಮದ ನಾಶದೊಡನೆಯೂ ನಾಶಹೊಂದುವುದು. ಈ ರೀತಿಗೆ ಸಂಚಿತಕರ್ಮನಾಶವಾಗಲು ಆ ಜೀವನು ಸಂಸಾರದಿಂದ ಮುಕ್ತ

ಸಾಗುವುದಕ್ಕೆ ಮನುಷ್ಯಭಾವದ ತ್ಯಾಗ ಮಾಡುವನು. ಆಗ ಜೀವನ ವೇದನೀಯ, ಆಯು, ನಾಮ, ಗೋತ್ರಗಳೆಂಬ ಅಘಾತಿ ಕರ್ಮಪುದ್ಗಲಗಳು (ಅಗಾಮಿ ಕರ್ಮಬಂಧನಗಳು) ಅತ್ಯಂತ ವಿಯೋಗ ಹೊಂದುವುವು .ಈ ಮೇರೆಗೆ ಸರ್ವ ಕರ್ಮಪುದ್ಗಲಗಳು ಜೀವನಿಂದ ಅತ್ಯಂತ ವಿಯೋಗವನ್ನು ಹೊಂದುವುದೇ ದ್ರವ್ಯಮೋಕ್ಷವು.

## ಪಂಚ ಪರಮೇಷ್ಠಿಗಳು.

ಜೈನರಲ್ಲಿ ಈಶ್ವರನಿಲ್ಲವಾದರೂ ತೀರ್ಥಂಕರಾದಿ ಮುಕ್ತಜೀವರ ಪೂಜೆ ನಡೆಯುವುದು. ಅವರಲ್ಲಿ ಅರ್ಹಂತರು, ಸಿದ್ಧರು, ಉಪಾಧ್ಯಾಯರು, ಆಚಾರ್ಯರು, ಸಾಧುಗಳು ಇವರಿಗೆ ಪಂಚಪರಮೇಷ್ಠಿಗಳೆಂಬ ಹೆಸರು. ಇವರು ಪೂಜ್ಯರು; ಇವರನ್ನು ನಮಸ್ಕರಿಸುವಾಗ ಹೇಳುವ ೧ ಣಮೋ ಅರಹಂತಾಣಂ (ಅರ್ಹಂತರಿಗೆ ನಮಸ್ಕಾರ), ೨ ಣಮೋ ಸಿದ್ಧಾಣಂ (ಸಿದ್ಧರಿಗೆ ನಮಸ್ಕಾರ) ೩ ಣಮೋ ಆಯರಿಯಾಣಂ (ಆಚಾರ್ಯರಿಗೆ ನಮಸ್ಕಾರ) ೪ ಣಮೋ ಉವಜ್ಝಾಯಣಂ (ಉಪಾಧ್ಯಾಯರಿಗೆ ನಮಸ್ಕಾರ) ೫ ಣಮೋ ಲೋಏ ಸವ್ವ ಸಾಹೂಣಂ (ಲೋಕದೊಳಗಿನ ಸರ್ವಸಾಧುಗಳಿಗೆ ನಮಸ್ಕಾರ) ಈ ಐದು ಮಂತ್ರಗಳಿಗೆ ಣಮೋಕಾರಮಂತ್ರಗಳೆಂಬ ಹೆಸರು.

### ೧ ಅರ್ಹಂತರು.

ಅರ್ಹಂತರಿಗೆ ತೀರ್ಥಂಕರ, (ತೀರ್ಥವನ್ನು- ಸಂಸಾರ ನಿಸ್ತರಣೋಪಾಯವನ್ನು- ಮಾಡುವವ) ಜಿನ, (ರಾಗ ದ್ವೇಷಗಳನ್ನು ಇಲ್ಲವೆ ಕರ್ಮರೂಪ ಶತ್ರುಗಳನ್ನು ಜಯಿಸುವವ) ಪರಮೇಷ್ಠಿ, (ಪರಮಸ್ಥಾನದಲ್ಲಿರುವವ) ವೀತರಾಗ (ರಾಗವಿಲ್ಲದವ) ಎಂಬ ಬೇರೆ ಹೆಸರುಗಳೂ ಉಂಟು.

ಣಟ್ಠ ಚದು ಘಾಯಿಕಮ್ಮೋ ದಂಸಣ ಸುಹಣಾಣ ವೀರಿಯ ಮಈಓ।
ಸುಹ ದೇಹತ್ಥೋ ಅಪ್ಪಾ ಸುದ್ಧೋ ಅರಿಹೋ ವಿಚಿಂತಿ ಜ್ಜೋ ॥

ದ್ರವ್ಯಸಂಗ್ರಹ.

— ಚತುರ್ವಿಧ ಘಾತಿಕರ್ಮಗಳನ್ನು ನಾಶಗೊಳಿಸಿದವನೂ, ಅನಂತಜ್ಞಾನ-ದರ್ಶನ-ಸುಖ-ವೀರ್ಯಗಳುಳ್ಳವನೂ, ಶುಭ್ರದೇಹವುಳ್ಳವನೂ ಪರಿಶುದ್ಧನೂ ಆದವನು ಅರ್ಹಂತನು. ಅರ್ಹಂತರು ನಿಶ್ಚಯನಯಾನುಸಾರವಾಗಿ ಅಶರೀರರಾದರೂ ವ್ಯವಹಾರ ನಯಾನುಸಾರವಾಗಿ ಸಪ್ತಧಾತುರಹಿತ-ಅತ್ಯುಜ್ವಲ ಪವಿತ್ರದೇಹವುಳ್ಳವರು. ಇವರಲ್ಲಿ ಕ್ಷುಧೆ, ತೃಷೆ, ಭಯ, ದ್ವೇಷ, ರಾಗ, ಮೋಹ,

ಚಿಂತೆ, ಜರೆ, ರೋಗ, ಮೃತ್ಯು, ಖೇದ, ಸ್ವೇದ, ಮದ, ಅರತಿ, ವಿಸ್ಮಯ, ಜನ್ಮ, ನಿದ್ರೆ, ವಿಷಾದ ಎಂಬ ೧೮ ತರದ ದೋಷಗಳಿರುವುದಿಲ್ಲ.

ಪೃಥಿವಿಯ ಪಾಪಭಾರವನ್ನು ಕಡಿಮೆ ಮಾಡುವುದಕ್ಕೆ, ಸದ್ಧರ್ಮ ಪ್ರಕಾಶದಿಂದ ತಾಮಸ ಹೃದಯವನ್ನು ಬೆಳಗುವುದಕ್ಕೆ ಕಲ್ಪ ಕಲ್ಪಗಳಲ್ಲಿ ತೀರ್ಥಂಕರರು ಉದಯಿಸುವರು. ತೀರ್ಥಂಕರರಾಗುವ ಜೀವರು ಮಾತೃ ಗರ್ಭಕ್ಕೆ ಬಂದ ಕೂಡಲೆ, ಅವರು ಜನಿಸಿದೊಡನೆ, ಅವರ ನಿಷ್ಕ್ರಮಣ ಕಾಲದಲ್ಲಿ, ಅವರಿಗೆ ಕೇವಲ ಜ್ಞಾನವಾದಾಗ, ಅವರ ಪರಿನಿರ್ವಾಣಕಾಲದಲ್ಲಿ ಹೀಗೆ ಐದು ಬಾರಿ ಇಂದ್ರಾದಿ ದೇವತೆಗಳು ಮಹೋತ್ಸವವನ್ನು ಮಾಡುವರು. ಈ ಮಹೋತ್ಸವಗಳಿಗೆ ಪಂಚಮಹಾಕಲ್ಯಾಣಗಳೆಂಬ ಹೆಸರು. ಅವು– ೧ ಗರ್ಭಾವತರಣ, (ತೀರ್ಥಂಕರನು ಗರ್ಭಕ್ಕೆ ಬರುವ ಕಾಲದ ಉತ್ಸವ.) ೨ ಜನ್ಮಾಭಿಷೇಕ (ಆತನು ಜನಿಸಿದೊಡನೆ ಇಂದ್ರರು ಮಾಡುವ ಅಭಿಷೇಕೋತ್ಸವ) ೩ ಪರಿನಿಷ್ಕ್ರಮಣ (ಆತನು ವಿರಕ್ತನಾಗಿ ಮನೆಬಿಟ್ಟು ಹೊರಟಾಗ ಮಾಡುವ ಉತ್ಸವ) ೪ ಕೇವಲ ಜ್ಞಾನ ಕಲ್ಯಾಣ (ಆತನಿಗೆ ಕೇವಲ ಜ್ಞಾನವುಂಟಾದಾಗ ಮಾಡುವ ಉತ್ಸವ) ೫ ಪರಿನಿರ್ವಾಣ ಕಲ್ಯಾಣ (ಆತನು ಮೋಕ್ಷಕ್ಕೆ ಹೋಗುವಾಗ ಮಾಡುವ ಉತ್ಸವ),

ತೀರ್ಥಂಕರರು ಅನಂತಜ್ಞಾನ, ಅನಂತದರ್ಶನ, ಅನಂತಸುಖ, ಅನಂತ ವೀರ್ಯ ಎಂಬ ಇಲ್ಲವೆ ಅಪಾಯಾಗಮಾತಿಶಯ, ಜ್ಞಾನಾತಿಶಯ, ಪೂಜಾತಿಶಯ, ವಚನಾತಿಶಯ– ಎಂಬ ಅತಿಶಯ ಚತುಷ್ಟಯವುಳ್ಳವರು. ಅಪಾಯಾಗಮಾತಿಶಯ– ಯಾವತರದ ಕ್ಲೇಶವೂ ಸೋಂಕದಿರುವುದು; ಜ್ಞಾನಾತಿಶಯ– ಜಗತ್ತಿನೊಳಗಿನ ಎಲ್ಲ ವಿಷಯಗಳ ಜ್ಞಾನ; ಪೂಜಾತಿಶಯ– ಸರ್ವ ಜೀವರಿಂದ ಪೂಜೆಗೊಳ್ಳುವಿಕೆ; ವಚನಾತಿಶಯ– ಹೃದ್ಯವೂ ಕಲ್ಯಾಣಕರವೂ ಸುಬೋಧ್ಯವೂ ಆದ ವಾಣಿ. ಇವಲ್ಲದೆ ತೀರ್ಥಂಕರರಿಗೆ ಬೇರೆ ೩೪ ಅತಿಶಯಗಳಿರುವುವು. ೧ ದೇಹದಲ್ಲಿ ಯಾವಾಗಲೂ ಬೆವರಿಲ್ಲ, (೨) ಯಾವ ಹೊಲಸೂ ಇಲ್ಲ; (೩) ಶರೀರದ ರಕ್ತ ಮಾಂಸಗಳು ಶುಭ್ರವಾಗಿ ವಿಶುದ್ಧವಾಗಿ ಇರುವುವು. (೪) ಅವರ ಆಕೃತಿಯು ಉತ್ತಮ (ಸಮಚತುರಸ್ರಸಂಸ್ಥಾನ.); (೫) ಅವರ ಶರೀರದ ಸ್ನಾಯು ವೇಷ್ಟನ, ಎಲುವು ಕೀಲಗಳು ವಜ್ರಮಯ. (೬) ಅವರ ಶರೀರವು ಅತಿಶಯ ಸುಂದರ; (೭) ಅವರ ದೇಹವು ದಿವ್ಯಸುಗಂಧವನ್ನು ಬೀರುವುದು; (೮) ಅವರ ದೇಹವು ೧೦೮ ಸುಲಕ್ಷಣ (ಲಾಂಛನ)ಗಳುಳ್ಳುದು; (೯) ಅವರ ಶರೀರವು ಅಪರಿಮಿತವೀರ್ಯವುಳ್ಳುದು (೧೦) ಅವರ ಭಾಷಣವು ಹಿತವೂ ಮಿತವೂ ಪ್ರಿಯವೂ ಆಗಿರುವುದು. (ಇವು ಹತ್ತು ಜನ್ಮಸಿದ್ಧವಾದ ಅತಿಶಯಗಳು.) ಕೇವಲ ಜ್ಞಾನವುಂಟಾದ ತರುವಾಯ ಬರುವ ಅತಿಶಯಗಳು ಹತ್ತು. ಅವು:–) (೧) ಅವರು ಇರುವ ಪ್ರದೇಶದ ಸುತ್ತಲು ೧೦೦ ಯೋಜನಗಳ ವರೆಗೆ ಸುಭಿಕ್ಷವಿರುವುದು (೨)

ಅವರು ಭೂಮಿಯನ್ನು ಸೋಂಕದೆ ಆಕಾಶದಲ್ಲಿ ಸಂಚರಿಸುವರು (೩) ಅವರಿರುವಲ್ಲಿ ಯಾವ ಪ್ರಾಣಿಯ ವಧೆಯೂ ಆಗುವುದಿಲ್ಲ. [೪] ಅವರು ಭೋಜನ ಮಾಡುವುದಿಲ್ಲ. [೫] ಅವರು ಸಂಚರಿಸುವಲ್ಲಿ ಅತಿವೃಷ್ಟ್ಯಾದಿ ಈತಿಬಾಧೆಗಳಿಲ್ಲ [೬] ಅವರನ್ನು ನೋಡುವವರಿಗೆಲ್ಲ ಅವರು ತಮ್ಮ ಸಮ್ಮುಖದಲ್ಲಿದ್ದಂತೆ ತೋರುವುವು. [೭] ಎಲ್ಲಾ ವಿದ್ಯೆಗಳ ಒಡೆಯತನವು ಅವರಿಗುಂಟು. [೮] ಅವರ ನೆಳಲು ಬೀಳುವುದಿಲ್ಲ. [೯] ಅವರು ಕಣ್ಣಾರೆಪ್ಪೆಗಳನ್ನು ಬಡಿಯುವುದಿಲ್ಲ. [೧೦] ಅವರ ದೇಹದ ಕೂದಲು ಉಗುರುಗಳು ಬೆಳೆವುದಿಲ್ಲ. [ಇನ್ನು ೧೪ ಅತಿಶಯಗಳು ದೇವತೆಗಳಿಂದ ಮಾಡಲ್ಪವುವು. ಅವು:-] [೧] ಅರ್ಹಂತರಿಗೆ ಅರ್ಧ ಮಾಗಧೀ ಭಾಷೆಯುಂಟಾಗುವುದು, [೨] ಸಮಸ್ತ ಜೀವರಲ್ಲಿ ಪರಸ್ಪರ ಮೈತ್ರಿಯುಂಟಾಗುವುದು [೩] ದಿಕ್ಕುಗಳು ನಿರ್ಮಲವಾಗುವುವು. [೪] ಆಕಾಶವು ನಿರ್ಮಲವಾಗುವುದು. [೫] ಎಲ್ಲ ಋತುಗಳ ಹೂ ಹಣ್ಣು ಕಾಯಿಗಳೂ ಕಾಳುಗಳೂ ಬೆಳೆಯುವುವು. [೬] ಒಂದು ಗಾವುದದ ವರೆಗಿನ ನೆಲವು ಕನ್ನಡಿಯಂತೆ ನಿರ್ಮಲವಾಗುವುದು [೭] ಅರ್ಹಂತರು ನಡೆಯುವಾಗ ಅವರ ಪಾದಗಳ ಕೆಳಗೆ ಸುವರ್ಣ ಕಮಲಗಳುಂಟಾಗುವುವು. [೮] ಆಕಾಶದಲ್ಲಿ ಜಯಜಯಧ್ವನಿಯುಂಟಾಗುವುದು [೯] ಮಂದವೂ ಸುಗಂಧವೂ ಆದ ಗಾಳಿ ಬೀಸುವುದು [೧೦] ಸುವಾಸನೆಯ ನೀರಿನ ಮಳೆಯಾಗುವುದು [೧೧] ಪವನಕುಮಾರ ದೇವತೆಗಳು ನೆಲವನ್ನು ಗುಡಿಸಿ ನಿರ್ಮಲಮಾಡುವರು [೧೨] ಎಲ್ಲ ಜೀವಿಗಳಿಗೆ ಆನಂದವಾಗುವುದು. [೧೩] ಅವರ ಇದಿರಿನಲ್ಲಿ ಧರ್ಮ ಚಕ್ರವು ತಿರುಗುವುದು. [೧೪] ಛತ್ರಚಾಮರ ಘಂಟೆ ಮೊದಲಾದ ಎಂಟು ಮಂಗಲ ವಸ್ತುಗಳು ಯಾವಾಗಲೂ ಹತ್ತಿರ ಇರುವುವು.

ಇವಲ್ಲದೆ ಅರ್ಹಂತರಿಗೆ ಅಷ್ಟ ಮಹಾ ಪ್ರಾತಿಹಾರ್ಯಗಳು ಆಗುವುವು:- ೧ ಅರ್ಹಂತರು ಅಶೋಕವೃಕ್ಷದ ಅಡಿಯಲ್ಲಿರುವರು. ೨ ಅವರ ಮೇಲೆ ದೇವತೆಗಳು ಪೂಮಳೆಗರೆವರು ೩ ಅವರ ಮುಖದಿಂದ ಧರ್ಮನಿರೂಪಣ ಮಾಡುವ ಅನಕ್ಷರ ದಿವ್ಯಧ್ವನಿಯು ಹೊರಡುವುದು ೪ ಯಕ್ಷರು ಚಾಮರಗಳನ್ನು ಬೀಸುವರು. ೫ ಅವರು ರತ್ನ ಸಿಂಹಾಸನದಲ್ಲಿ ಕುಳಿತುಕೊಳ್ಳುವರು. ೬ ಬೆಳ್ದಿಂಗಳಂತೆ ಆಹ್ಲಾದಕ ಪ್ರಭಾ ಮಂಡಲವು ಅವರ ಮುಖದ ಸುತ್ತಲು ಪ್ರಕಾಶಿಸುವುದು ೭ ದುಂದುಭಿಧ್ವನಿಯಾಗುವುದು ೮ ಅವರ ಮಸ್ತಕದ ಮೇಲೆ ಸೂರ್ಯನಂತೆ ಪ್ರಕಾಶಿಸುವ ಮೂರು ಛತ್ರಗಳು ಭ್ರಮಿಸುವುವು.

ಈ ಮೇರೆಗೆ ಅನಂತ ಚತುಷ್ಟಯ (ಇಲ್ಲವೆ ಮೂಲ ಅತಿಶಯ)ಗಳು, ೩೪ ಅತಿಶಯಗಳು ೮ ಪ್ರಾತಿಹಾರ್ಯಗಳು ಸೇರಿ ೪೬ ಅರ್ಹಂತರ ಗುಣಗಳೆನಿಸುವುವು. ಅರ್ಹಂತರು ಜನ್ಮಕಾಲದಿಂದಲೇ ಮತಿ, ಶ್ರುತ, ಅವಧಿ ಎಂಬ ಮೂರು ತರದ

ಜ್ಞಾನವುಳ್ಳವರು. ಇವರು ಕಠೋರ ತಪಶ್ಚರ್ಯಾದಿಗಳಿಂದ ಜ್ಞಾನಾವರಣ, ದರ್ಶನಾವರಣ, ಮೋಹನೀಯ, ಅಂತರಾಯ ಎಂಬ ಘಾತಿ ಕರ್ಮಗಳನ್ನು ನಾಶಗೊಳಿಸಲು ಸರ್ವಜ್ಞರಾಗುವರು; ಈ ಸರ್ವಜ್ಞತೆಗೇ ಕೇವಲ ಜ್ಞಾನವೆಂಬ ಹೆಸರು. ಕೇವಲ ಜ್ಞಾನಿಗಳು ಜೀವನ್ಮುಕ್ತರು; ಜೀವನ್ಮುಕ್ತ ಕೇವಲಿಗಳಲ್ಲಿ ಸಾಮಾನ್ಯ ಕೇವಲಿ, ತೀರ್ಥಂಕರ ಎಂಬ ಎರಡು ವರ್ಗಗಳು. "ತೀರ್ಥಕರ" ಎಂಬ ಕರ್ಮದಿಂದ ತೀರ್ಥಂಕರತ್ವವು ಬರುವುದು. ಸಾಮಾನ್ಯ ಕೇವಲಿಗಳು ತಮ್ಮ ಮುಕ್ತಿಯನ್ನು ಮಾತ್ರ ಸಾಧಿಸಿಕೊಳ್ಳುವರು; ಆದರೆ ತೀರ್ಥಂಕರರು ತಮ್ಮ ಮುಕ್ತಿಯನ್ನು ಸಾಧಿಸಿಕೊಳ್ಳುವದಲ್ಲದೆ ಸಂಸಾರಿ ಜೀವರಿಗೆ ಪರಿನಿರ್ವಾಣಮಾರ್ಗವನ್ನು ತೋರುವರು.

ತೀರ್ಥಂಕರರು ಸರ್ವಜ್ಞರಾಗಿರುವರು. ಎಂದರೆ ಅವರಿಗೆ ಮೂಲೋಕಗಳೊಳಗಿನ ತ್ರೈಕಾಲಿಕ ಸಮಸ್ತ ಸ್ಥಿತಿವ್ಯಾಪಾರಗಳ ಜ್ಞಾನವುಂಟಾಗುವುದು. ತೀರ್ಥಂಕರರು ಸಾಕ್ಷಾದೀಶ್ವರರೆನಿಸುವರು. ಜೈನಪುರಾಣಗಳಲ್ಲೆಲ್ಲ ತೀರ್ಥಂಕರರ ಮಹಿಮಾತಿಶಯವೇ ವರ್ಣಿಸಲ್ಪಡುವುದು.

ಈ ಅರ್ಹಂತರು ಅತೀತಕಾಲದಲ್ಲಿ ೨೪ ಜನರು, ವರ್ತಮಾನಕಾಲದಲ್ಲಿ ೨೪ ಜನರು, ಭವಿಷ್ಯತ್ಕಾಲದಲ್ಲಿ ೨೪ ಜನರು ಆಗುವರು.

## ೨ ಸಿದ್ಧರು

ಜೀವನ್ಮುಕ್ತಾವಸ್ಥೆಯಲ್ಲಿ ಶರೀರವು ಇರುವುದಾದರೂ ಜೀವನ್ಮುಕ್ತನು ಅಘಾತಿಕರ್ಮಗಳನ್ನು ನಾಶಗೊಳಿಸಿದ ದಿವಸ ಆತನ ಪಾರ್ಥಿವ ಶರೀರವು ಕರ್ಪುರದಂತೆ ಕರಗಿ ಹಾರಿಹೋಗುವುದು. ಈ ಅವಸ್ಥೆಯೇ ಪರಾಮುಕ್ತಿಯು. ಆಗ ಜೀವನ ಸಾಂಸಾರಿಕ ಆಯುಷ್ಯವು ಮುಗಿದಿರುವುದು. ಆತನಿಗೆ ನಿತ್ಯ ಪರಿವರ್ತನಶೀಲವಾದ ಈ ದೇಹವಿಲ್ಲ; ಆಗ ಜೀವನು ಸಂಪೂರ್ಣ ಸ್ವತಂತ್ರನು. ಇದೇ ವಿದೇಹಮೋಕ್ಷವು. ಈ ವಿದೇಹಮೋಕ್ಷವೇ ಜೀವನ ಸ್ವಭಾವವೂ, ಕೊನೆಯ ಪರಿಣತಿಯೂ ಕೊನೆಯ ಉನ್ನತಿಯೂ ಆಗಿದೆ. ಅಘಾತಿ ಕರ್ಮಕ್ಷಯಾನಂತರದಲ್ಲಿ ವಿದೇಹಮುಕ್ತಿಯುಳ್ಳಿರುವ ಸಾಮಾನ್ಯಕೇವಲಿಗಳೂ, ತೀರ್ಥಂಕರರೂ ಸಮಾನರೇ. ವಿದೇಹ ಮುಕ್ತಿಯುಳ್ಳದಿವ ಈ ಸರ್ವಜ್ಞರಿಗೆ ಸಿದ್ಧರೆಂಬ ಹೆಸರು.

ಣಟ್ಠಟ್ಠ ಕಮ್ಮದೇಹೋ ಲೋಯಾಲೋಯಸ್ಸ ಜಾಣ ಓದಟ್ಠಾ ।
ಪುರಿಸಾಯಾರೋ ಅಪ್ಪಾ ಸಿದ್ಧೋ ಝಾ ಏಹಲೋಯ ಸಿಹರತ್ಥೋ ॥

ದ್ರವ್ಯಸಂಗ್ರಹ.

ಸಿದ್ಧರಿಗೆ ಅಷ್ಟವಿಧಕರ್ಮಜನಿತದೇಹವಿಲ್ಲ. ಲೋಕವನ್ನೂ ಅಲೋಕವನ್ನೂ ತಿಳಿಯುವರು; ನೋಡುವರು. ನಿಶ್ಚಯನಯಾನುಸಾರವಾಗಿ ಅವರು ಸಂಪೂರ್ಣವಿದೇಹರಾದವರೂ ವ್ಯವಹಾರನಯಾನುಸಾರವಾಗಿ ಪುರುಷಾಕಾರರು, ಆತ್ಮಪ್ರದೇಶಮಾತ್ರರು. ಆ ಪುರುಷಾಕಾರವಾದ ಆತ್ಮಪ್ರದೇಶವು ಅವರ ಕೊನೆಯ ಪಾರ್ಥಿವಶರೀರಕ್ಕಿಂತ ಸ್ವಲ್ಪ ಸಣ್ಣದು. ಅವರು ಲೋಕಾಕಾಶದ ಶಿಖರದಲ್ಲಿ ವಿರಾಜಮಾನರಾಗುವರು. ಸಿದ್ಧಪುರುಷರು ಸಂಸಾರದಲ್ಲಿ ಮರಳಿ ಬರುವುದಿಲ್ಲ. ಅವರು ಯಾವ ಕಾರ್ಯಕ್ಕೂ ಜನಕರಲ್ಲ; ಜನ್ಯರೂ ಅಲ್ಲ. ಕಾರಣಭೂತರೂ ಅಲ್ಲ. ಅವರು ದರ್ಶನಜ್ಞಾನ ವೀರ್ಯಸುಖಗಳ ಆಗರವು. ಲೋಕಾಕಾಶದ ಉಚ್ಚತಮ ಸೀಮೆಯಾದ ಶಾಂತಿಮಯ ಸಿದ್ಧಶಿಲೆಯ ಮೇಲೆ ಸ್ವ-ಭಾವದಲ್ಲಿ ಅವಸ್ಥಿತರಾಗುವರು. ಅವರ ಕೆಳಗೆ ಬಹುದೂರದಲ್ಲಿ ಕರ್ಮಕಾರಾಗೃಹವೆನಿಸುವ ಲೋಕಾಕಾಶವು. ಅವರ ಮೇಲೆಯೂ ಎದುರಿಗೂ ಸ್ತಬ್ಧವೂ ಅನಿರ್ದೇಶ್ಯವೂ ಸ್ಥಿರವೂ ಅನಂತವೂ ಆದ ಅಲೋಕವಿರುವುದು.

ಸಮ್ಮತ್ತಣಾಣದಂಸಣ ವೀರಿಯಸುಹಮಂ ತಹೇವ ಅವಗಹಣಂ ।
ಅಗುರುಲಘು ಮವ್ವಾಬಾಹಂ ಅತ್ಠಗುಣಾ ಹುಂತಿ ಸಿದ್ಧಾಣಂ ॥

ಸಿದ್ಧರಲ್ಲಿ ೧ ಸಮ್ಯಕ್ತ್ವವಿರುವುದು. ೨ ಅವರಲ್ಲಿ ಅನಂತಜ್ಞಾನವು ಇರುವುದು; ಅವರಿಗೆ ಲೋಕ, ಅಲೋಕಗಳಲ್ಲಿ ಯಾವ ಪದಾರ್ಥವೂ ಅಜ್ಞಾತವಲ್ಲ. ೩ ಅವರಲ್ಲಿ ಅನಂತ ದರ್ಶನವಿರುವುದು. ೪ ಅವರಲ್ಲಿ ಅನಂತ ವೀರ್ಯವಿರುವುದು; ಅನಂತ ಪದಾರ್ಥಗಳ ದ್ರವ್ಯಪರ್ಯಾಯಗಳ ಜ್ಞಾನ, ದರ್ಶನ, ಧಾರಣಗಳನ್ನು ಮಾಡಿಕೊಳ್ಳುವುದಕ್ಕೆ ಅವರಿಗೆ ಬಳಲಿಕೆಯಿಲ್ಲ. ೫ ಸಿದ್ಧಜೀವರು ಅತಿ ಸೂಕ್ಷ್ಮರು; ಇಂದ್ರಿಯ ಗೋಚರರಲ್ಲ. ೬ ಸಿದ್ಧರು ಅವಗಾಹ ಗುಣದಿಂದ ಕೂಡಿರುವರು; ಅವರು ಜಡಧರ್ಮವುಳ್ಳವರಲ್ಲ. ಒಂದು ದೀಪದ ಪ್ರಕಾಶದಲ್ಲಿ ಇನ್ನೊಂದು ದೀಪದ ಪ್ರಕಾಶವು ಹೇಗೆ ಸುಲಭವಾಗಿ ಪ್ರವೇಶಿಸಬಹುದೋ ಹಾಗೆ ಒಬ್ಬ ಸಿದ್ಧನಿರುವಲ್ಲಿ ಇನ್ನೊಬ್ಬ ಸಿದ್ಧನ ಪ್ರವೇಶವು ಬಾಧಕವಾಗುವುದಿಲ್ಲ. ೭ ಸಿದ್ಧ ಜೀವರು "ಅಗುರುಲಘು"ಗಳು ಅವರು ಗುರು (ಜಡ)ಗಳೂ ಅಲ್ಲ; ಲಘುಗಳೂ ಅಲ್ಲ. ಸಿದ್ಧಶಿಲೆಯಲ್ಲಿ ಸ್ವಭಾವದಿಂದ ಇರುವರು ೮ ಅವ್ಯಾಬಾಧ ಎಂಬುದು ಸಿದ್ಧರ ಎಂಟನೆಯ ಗುಣವು. ಅದರಿಂದ ಅವರಿಗೆ ಪಾರ್ಥಿವ ಕ್ಷಣಭಂಗುರ ಸುಖದುಃಖಗಳ ಸಂಪರ್ಕವಿಲ್ಲ. ಅನಂತ-ಅಪರಿವರ್ತಿತ-ಅಸೀಮ ಆನಂದದಲ್ಲಿ ಇರುವರು.

# ೩ ಆಚಾರ್ಯರು.

ಬಾರಹತವ ಭಾವಸ್ಸಯ ಪಂಚಾಚಾರಾ ತಹೇವ ದಹದವ್ವಾ ।
ಗುತ್ತಿತ್ತಯಸಂಜುತ್ತಾ ಛತ್ತೀಸಗುಣಾಹುಂತಿ ಆಯರಿಯಾ ॥೩॥

ಆಚಾರ್ಯರಿಗೆ ಧರ್ಮದಲ್ಲಿ ಶಾಸನಾಧಿಕಾರವಿರುವುದು. ಅವರು ಬೇರೆ ಮುನಿಗಳನ್ನು ತಮ್ಮ ಸಂಘಕ್ಕೆ ಸೇರಿಸಿಕೊಳ್ಳುವರು; ಅವರಿಗೆ ದೀಕ್ಷೆಯನ್ನು ಕೊಡುವರು. ಅಪರಾಧವು ಘಟಿಸಿದರೆ ದಂಡವನ್ನು ಕಟ್ಟುವರು; ಇಲ್ಲವೆ ಸಂಘದಿಂದ ಹೊರಪಡಿಸುವರು.

ಆಚಾರ್ಯರಿಗೆ ೩೬ ಗುಣಗಳು ಹೇಳಲ್ಪಟ್ಟಿವೆ. ಅವು:- ದ್ವಾದಶವಿಧ ತಪಸ್ಸುಗಳು (೧೨), ಗುಪ್ತಿತ್ರಯ (೩), ದಶವಿಧ ಧರ್ಮಗಳು (೧೦), ಪಂಚಾಚಾರಗಳು (೫), ಷಡಾವಶ್ಯಕಗಳು (೬);

ದ್ವಾದಶವಿಧ ತಪಸ್ಸುಗಳು:— ೧ ಅನಶನ ಇಲ್ಲವೆ ಉಪವಾಸ. ೨ ಊನೋದರತೆ- ಹಸಿವೆಗಿಂತ ಕಡಿಮೆ ಊಟಮಾಡುವುದು. ೩ ವೃತ್ತಿಪರಿಸಂಖ್ಯಾನ- ಊಟಕ್ಕೋಸ್ಕರ ಹೋಗುವ ಮನೆಗಳ ನಿಯಮ ಮೊದಲಾದುವನ್ನು ಮಾಡಿಕೊಳ್ಳುವುದು. ೪ ರಸ ಪರಿತ್ಯಾಗ- ಆರೂ ರಸಗಳನ್ನು ಇಲ್ಲವೆ ಒಂದೆರಡನ್ನು ಬಿಡುವುದು. ೫ ವಿವಿಕ್ತಶಯ್ಯಾಸನ- ಏಕಾಂತಸ್ಥಾನದಲ್ಲಿ ಇರುವುದು, ಮತ್ತು ಮಲಗುವುದು. ೬ ಕಾಯಕ್ಲೇಶ- ಶರೀರಕ್ಕೆ ಕಷ್ಟಕೊಡುವುದು. ೭ ಪ್ರಾಯಶ್ಚಿತ್ತ- ದೋಷಕ್ಕಾಗಿ ದಂಡ ಕೊಡುವುದು. ೮ ವಿನಯ- ರತ್ನತ್ರಯಕ್ಕೂ, ಅದನ್ನು ಧರಿಸುವವರಿಗೂ ವಿನಯ ತೋರಿಸುವುದು ೯ ವೈಯಾವೃತ್ತ್ಯ- ಪಾದಸಂವಾಹನ ಮೊದಲಾದುವುಗಳಿಂದ ಗುರುಗಳನ್ನೂ ಮುನಿಗಳನ್ನೂ ಸೇವಿಸುವದು. ೧೦ ಸ್ವಾಧ್ಯಾಯ- ಶಾಸ್ತ್ರಗಳನ್ನು ಓದುವುದು. ೧೧ ವ್ಯುತ್ಸರ್ಗ- ಶರೀರದ ಮೇಲಿನ ಮಮತೆಯನ್ನು ಕಡಿಮೆ ಮಾಡಿಕೊಳ್ಳುವುದು. ೧೨ ಧ್ಯಾನ ಮಾಡುತ್ತಿರುವುದು.

ಷಡಾವಶ್ಯಕಗಳು:— ೧ ಸಮತ್ವ- ಎಲ್ಲ ಜೀವಗಳಲ್ಲಿ ಸಮತ್ವಭಾವನೆ ೨ ವಂದನೆ- ಪೂಜ್ಯರನ್ನು ನಮಸ್ಕರಿಸುವುದು. ೩ ಸ್ತವ- ಪರಮೇಷ್ಠಿಗಳ ಸ್ತುತಿ ೪ ಪ್ರತಿಕ್ರಮಣ- ಹಿತ್ತಿದ ದೋಷಗಳಿಗಾಗಿ ಪಶ್ಚಾತ್ತಾಪ ೫ ಪ್ರತ್ಯಾಖ್ಯಾನ ಮುಂದೆ ಇಂಥ ಪಾಪ ಕರ್ಮಗಳನ್ನು ಮಾಡುವದಿಲ್ಲೆಂದು ಪ್ರತಿಜ್ಞೆ ಮಾಡುವುದು. ೬ ಕಾಯೋತ್ಸರ್ಗ- ಶರೀರದ ಮೇಲಿನ ಮಮತ್ವವನ್ನು ಬಿಟ್ಟು ಧ್ಯಾನ ಮಾಡುವುದು.

ಪಂಚಾಚಾರಗಳು:- ೧ ದರ್ಶನಾಚಾರ, ೨ ಜ್ಞಾನಾಚಾರ, ೩ ಚಾರಿತ್ರಾಚಾರ, ೪ ತಪ ಆಚಾರ, ೫ ವೀರ್ಯಾಚಾರ.

೧ ಸರ್ವಜ್ಞರಾದ ತೀರ್ಥಂಕರರು ಹೇಳಿದ ಜೀವಾದಿ ತತ್ವಗಳಲ್ಲಿ ಶ್ರದ್ಧೆಯಿಡುವದು ದರ್ಶನಾಚಾರವು.

೨ ನಿರ್ಬಾಧವಾದ ಆಗಮವನ್ನೂ ಸ್ವಪರತತ್ವಗಳನ್ನೂ ಆತ್ಮಾನುಭವದಿಂದ ತಿಳಿಯುವುದು ಜ್ಞಾನಾಚಾರವು.

೩ ಸಾಮಯಿಕ, ಛೇದೋಪಸ್ಥಾನ, ಪರಿಹಾರವಿಶುದ್ಧಿ, ಸೂಕ್ಷ್ಮಸಾಂಪರಾಯ ಯಥಾಖ್ಯಾತ ಚರಿತ್ರಗಳನ್ನು ಆಚರಿಸುವುದು ಚಾರಿತ್ರಾಚಾರವು.

೪ ದ್ವಾದಶತಪಗಳನ್ನು ಪಾಲಿಸುವುದು ತಪ ಆಚಾರವು.

೫ ಪರೀಷಹಾದಿಗಳು ಪ್ರಾಪ್ತವಾದಾಗ ತಮ್ಮ ಶಕ್ತಿಯನ್ನು ಕುಂದಿಸದೆ ಧೈರ್ಯದಿಂದ ಪ್ರವರ್ತಿಸುವುದು ವೀರ್ಯಾಚಾರವು.

## ೪ ಉಪಾಧ್ಯಾಯರು.

ರತ್ನತ್ರಯಧರ್ಮಯುಕ್ತರಾಗಿ ನಿಜಶುದ್ಧಾತ್ಮಾನುಭವಾನಂದದಲ್ಲಿರುವ ಕಾಲವನ್ನು ಬಿಟ್ಟು ಉಳಿದ ಕಾಲದಲ್ಲಿ ಭವ್ಯಪ್ರಾಣಿಗಳಿಗೆ ಧರ್ಮವನ್ನುಪದೇಶಿಸುತ್ತ ಮತಿ-ಶ್ರುತ-ಅವಧಿ- ಮನಃಪರ್ಯಯಗಳೆಂಬ ಜ್ಞಾನ ಚತುಷ್ಕಸಮನ್ವಿತರಾಗಿ ನಿರತೀಚಾರ ವ್ರತಶೀಲ ಸಂಪನ್ನರೂ, ಮೃದುಮಧುರ ವಚನವುಳ್ಳವರೂ ಪರಾನುಗ್ರಹ ನಿರತರೂ, ಪ್ರಮಾದರಹಿತರೂ ಏಕಾದಶಾಂಗ, ಚತುರ್ದಶಪೂರ್ವಗಳೆಂಬ (೨೫) ಶಾಸ್ತ್ರಗಳ ಜ್ಞಾನದಿಂದ ಸಂಪನ್ನರೂ ಆದ ಮುನಿಶ್ರೇಷ್ಠರು ಉಪಾಧ್ಯಾಯರೆನಿಸುವರು.

ಇಗ್ಯಾ ಅಂಗೇ ಸಹಿಯಾ । ಚೌದಸಪುವ್ವೇಯುಶೇಷಾಣಾಂ ।
ಪಣವೀಸಾಗುಣಜುತ್ತಾ । ಅನ್ನಾತಸ್ಸ ಉತ್ತರ ಉವಝ್ಝಾಯಾ ॥೪॥

## ೫ ಸಾಧುಗಳು.

ಉಚ್ಚ ಜೀವರು ಮುನಿಗಳಾಗಿ ರಾಗದ್ವೇಷಾದಿಗಳನ್ನು ತೊರೆದು ಅಡವಿಯಲ್ಲಿ ವಾಸಿಸುವರು. ಅಲ್ಲಿ ಜ್ಞಾನ, ಧ್ಯಾನಗಳಲ್ಲಿ ಆಸಕ್ತರಾಗಿ ಕಾಲಯಾಪನ ಮಾಡುವರು. ದಿವಸದಲ್ಲಿ ಒಂದುಬಾರಿ ಶುದ್ಧ- ಆಹಾರವನ್ನು ಸಂಪಾದಿಸುವುದಕ್ಕಾಗಿ ಊರೊಳಗೆ ಚರ್ಯೆಗೆ ಬರುವರು. ಅವರು ಊರಲ್ಲಿ ಬರುವುದಕ್ಕೆ ಚರ್ಯ, ಚರಿಗೆ ಎಂದೂ, ಅವರು ಬರುವ ಗತಿಗೆ ಚಂದ್ರಗತಿ ಎಂದೂ ಹೇಳುವರು. ಹಿಂಸೆಯಾಗದಂತೆ ಸುತ್ತಮುತ್ತಲೂ ಮುಂದೂ ಚೆನ್ನಾಗಿ ನೋಡಿ ಸಾವಕಾಶ ಸಾವಧಾನದಿಂದ ನಡೆಯುವುದು ಚಂದ್ರಗತಿಯು. ಇವರು ಧನವಸ್ತ್ರ ಮೊದಲಾದ ಯಾವ ಪರಿಗ್ರಹವನ್ನೂ ಇಟ್ಟುಕೊಳ್ಳುವುದಿಲ್ಲ.

ವಯ ಸಮ ಇಂಧಿಯರೋಹೇ । ಲೋಹೋ ಆವಸ್ಸಯ ಅಚೇಲಮಾಣಂ ॥
ಖಿದಿಸಯಣಮದಂತ । ಧಾವಣ ಠಿದಿಭೋಯಣಮೇಯಭುತ್ತಂಚ ॥೫॥

ಸಾಧುಗಳಿಗೆ ೨೮ ಮೂಲಗುಣಗಳೆಂದು ಹೇಳಲ್ಪಟ್ಟಿವೆ.

ಪಂಚಮಹಾವ್ರತಗಳು ೫; ಪಂಚಸಮಿತಿಗಳು ೫; ಪಂಚೇಂದ್ರಿಯ ನಿಗ್ರಹ ೫; ಷಡಾವಶ್ಯಕಗಳು ೬ (ಸಮತ್ವ, ವಂದನೆ, ಸ್ತುತಿ, ಪ್ರತಿಕ್ರಮಣ; ಸ್ವಾಧ್ಯಾಯ, ಕಾಯೋತ್ಸರ್ಗ) ೧ ಸ್ನಾನಾಭಾವ ೧, ಭೂಮಿಶಯನ ೧, ನಗ್ನತ್ವ ೧, ಕೇಶೋತ್ಪಾಟನ ೧, ಏಕಾಶನ ೧, ದಂತಧಾವನಾಭಾವ. ಸ್ಥಿತಾಶನ (ನಿಂತು ಉಣ್ಣುವುದು) ೧, ಒಟ್ಟಿಗೆ ೨೮. ಈ ಮೂಲೋತ್ತರ ಗುಣಗಳನ್ನು ಸರ್ವೋತ್ತಮವಾಗಿ ಪಾಲಿಸುವುದರಿಂದ ಇವರನ್ನು ಸರ್ವಸಾಧುಗಳೆಂದೂ ಹೇಳುವರು.

ಸಾಧುಗಳು ಚರಿಗೆಗೆ ಬಂದಾಗ ಅವರಿಗೆ ಅನ್ನವಿಕ್ಕಲು ಪುಣ್ಯಾತಿಶಯವೆಂದೂ, ಅದರಿಂದ ಪಂಚಾಶ್ಚರ್ಯಗಳುಂಟಾಗುವುವೆಂದೂ ಹೇಳುವರು.

ಪಂಚಾಶ್ಚರ್ಯಗಳು:— ಸುರಪುಷ್ಪವೃಷ್ಟಿ, ಸುವರ್ಣವೃಷ್ಟಿ, ತಂಗಾಳಿ. ದೇವದುಂದುಭಿ, ಸುರರ ಅಹೋನಾದ.

ಸುರಿಯೆ ವಸುಧಾರೆ ನಭದೊಳ್ ।
ಸುರವೃಂದಂ ಪೊಗಳೆ ಮೊಳಗೆ ಸುರದುಂದುಭಿ ತ ।
ಣ್ಣೆಲರೆಸಗೆ ಕುಸುಮ ವರ್ಷಂ ।
ದೊರೆಕೊಳೆ ಸಾಶ್ಚರ್ಯಮಾಯ್ತು ಪಂಚಾಶ್ಚರ್ಯಂ ॥

ಅಜಿತನಾಥ ಪುರಾಣ.

---

# ರತ್ನತ್ರಯ.

ಸಮ್ಯಗ್ದರ್ಶನಜ್ಞಾನ ಚಾರಿತ್ರಾಣಿ ಮೋಕ್ಷಮಾರ್ಗಃ ।

ತತ್ತ್ವಾರ್ಥ ಸೂತ್ರ.

ಸಮ್ಯಗ್‌ದರ್ಶನ, ಸಮ್ಯಗ್ ಜ್ಞಾನ, ಸಮ್ಯಕ್ ಚಾರಿತ್ರಗಳು ಕರ್ಮನಾಶಕ್ಕೂ, ಸಂಸಾರ ದುಃಖನಾಶಪೂರ್ವಕವಾಗಿ ಮೋಕ್ಷರೂಪವಾದ ನಿರತಿಶಯ ಸುಖಕ್ಕೂ ಕಾರಣವಾಗುವುವು. ಇವುಗಳ ವಿರುದ್ಧವಾದ ಆಚರಣೆಗಳು ಸಂಸಾರಕ್ಕೆ ಕಾರಣವಾಗುವುವು ಈ ಮೂರು ರತ್ನಗಳಂತೆ ಉಪಾದೇಯಗಳಾದುದರಿಂದ ಇವನ್ನು ರತ್ನತ್ರಯವೆಂದು ಹೇಳುವರು. ಈ ತ್ರಿವರ್ಗವು ವ್ಯವಹಾರನಯಾನುಸಾರವಾಗಿ ಮೋಕ್ಷಮಾರ್ಗವೆನಿಸುವುದು. ಜೀವನು ತನ್ನ ಶುದ್ಧಸ್ವರೂಪದಲ್ಲಿ ಪರಿಣತನಾಗುವುದು ನಿಶ್ಚಯಮೋಕ್ಷಮಾರ್ಗವು; ಈ ನಿಶ್ಚಯ ಮೋಕ್ಷಮಾರ್ಗಕ್ಕೆ ರತ್ನತ್ರಯರೂಪವಾದ ವ್ಯವಹಾರಮೋಕ್ಷಮಾರ್ಗವು ಕಾರಣವಾಗಿದೆ.

# ೧ ಸಮ್ಯಗ್ದರ್ಶನ.

ಶ್ರದ್ಧಾನಂ ಪರಮಾರ್ಥಾನಾಮಾಪ್ತಾಗಮ ತಪೋಭೃತಾಂ ।
ತ್ರಿಮೂಢಾಪೋಢಮಷ್ಟಾಂಗಂ ಸಮ್ಯಗ್ದರ್ಶನಮಸ್ಮಯಂ ॥೪॥ ರತ್ನಕರಂಡಶ್ರಾವಕಾಚಾರ.

— ವೀತರಾಗ ಸರ್ವಜ್ಞ ನಿರ್ದೋಷಿ ಪರಮೇಶ್ವರ ಪರಮ ಭಟ್ಟಾರಕ (ಆಪ್ತ)ರನ್ನೂ, ತನ್ಮುಖಕಮಲವಿನಿರ್ಗತಪೂರ್ವಾಪರಾದಿ ದೋಷರಹಿತವಪ್ಪ ಪರಮಾಗಮ (ಆಗಮ)ವನ್ನೂ ಆ ಪರಮಾಗಮದಲ್ಲಿ ಹೇಳಿದ ಷಡ್ದ್ರವ್ಯ, ಪಂಚಾಸ್ತಿಕಾಯ, ಸಪ್ತತತ್ತ್ವ, ನವಪದಾರ್ಥ (ಪರಮಾರ್ಥ) ಇವುಗಳನ್ನೂ, ಸರ್ವಜ್ಞಪ್ರಣೀತಕ್ರಮದಿಂದ ತಪ್ಪದೆ ಆಚರಿಸುವ ತಪಸ್ವಿಗಳನ್ನೂ ಮೂಢತ್ರಯ ಮೊದಲಾದ ಪಂಚವಿಂಶತಿ (೨೫) ಮಲ ರಹಿತವಾಗಿ ನಂಬುವುದು ಸಮ್ಯಗ್ ದರ್ಶನವು.

ದೋಷರಹಿತನೂ, ಸರ್ವಜ್ಞನೂ, ಆಗಮಜ್ಞಾನವುಳ್ಳವನೂ ಆಪ್ತನೆನಿಸುವನು. ಕ್ಷುಧೆ, ತೃಷೆ ಜರೆ, ಆತಂಕ, ಜನ್ಮ, ಮರಣ, ಭಯ ಗರ್ವಗಳೂ, ರಾಗದ್ವೇಷಗಳೂ ಯಾರಿಗೆ ಇಲ್ಲವೋ ಅವನು ಆಪ್ತನೆನಿಸುವನು. ಇಂತಹ ಆಪ್ತನು ಹೇಳಿದುದೂ ನಿರಾಕರಿಸಬಾರದುದೂ, ವಿರೋಧಗಳಿಲ್ಲದುದೂ, ತತ್ತ್ವೋಪದೇಶ ಮಾಡುವಂತಹುದೂ, ಸರ್ವಹಿತಕರವೂ ಆದುದು ಆಗಮವೆನಿಸುವುದು.

ಮೂಢತ್ರಯ ಮೊದಲಾದ ೨೫ ದೋಷಗಳು- ಮೂಢಗಳು ಮೂರು. ದೇವತಾಮೂಢ- ರಾಗಾದಿ ದೋಷಯುಕ್ತ ದೇವತೆಗಳ ಆರಾಧನೆ; ಲೋಕಮೂಢ- ಗಂಗಾದಿನದಿ, ಗೋ, ಅಗ್ನಿ ಮೊದಲಾದುವುಗಳ ಪೂಜೆಯು ಪುಣ್ಯಕಾರಣವೆಂದಾಚರಿಸುವುದು. ಪಾಷಂಡಿಮೂಢ ಧನಧಾನ್ಯಾದಿಪರಿಗ್ರಹವುಳ್ಳ ಪಾಷಂಡಿಗಳನ್ನು ಗುರುವೆಂದು ಪೂಜಿಸುವುದು; ಮದಗಳು ೮. ಜ್ಞಾನಮದ, ಪೂಜಾಮದ, ಕುಲಮದ, ಜಾತಿಮದ, ಬಲಮದ, ಐಶ್ವರ್ಯಮದ, ತಪೋಮದ, ರೂಪಮದ. ಅನಾಯತನಗಳು ೬. ಮಿಥ್ಯಾದೇವ, ಮಿಥ್ಯಾದೇವಾರಾಧನ, ಮಿಥ್ಯಾತಪಸ್ಸು, ಮಿಥ್ಯಾತಪಸ್ವಿ, ಮಿಥ್ಯಾಶಾಸ್ತ್ರ, ಮಿಥ್ಯಾಶಾಸ್ತ್ರಜ್ಞ ಈ ಆರು ಅನಾಯತನಗಳ ಸೇವೆಮಾಡುವುದು. ಅನಾಯತನ ಸೇವೆ. ಶಂಕಾದಿ ದೋಷಗಳು. ೮. ಶಂಕೆ- ವೀತರಾಗೋಪದಿಷ್ಟ ಶಾಸ್ತ್ರಾದಿಗಳಲ್ಲಿ ಶಂಕೆ. ಕಾಂಕ್ಷೆ ಸಾಂಸಾರಿಕ ಸುಖದಲ್ಲಿ ಇಚ್ಛೆಯನ್ನಿಡುವುದು. ವಿಚಿಕಿತ್ಸೆ ರತ್ನತ್ರಯಾರಾಧಕ ವ್ರತಿಗಳ ಶರೀರಾಶುಚಿತ್ವವನ್ನು ನೋಡಿ ಅಸಹ್ಯಪಡುವುದು. ಮೂಢದೃಷ್ಟಿ- ಅಜ್ಞಾನಿಗಳ ಚಿತ್ತಚಮತ್ಕಾರಕ್ಕಾಗಿ ಮಿಥ್ಯಾದೃಷ್ಟಿಗಳು ಮಾಡುವ ಕೃತಿಗಳಲ್ಲಿಯೂ ಮಿಥ್ಯಾದೃಷ್ಟಿಗಳಲ್ಲಿಯೂ ಮೂರ್ಖತನದಿಂದ ಭಕ್ತಿಯನ್ನಿಡುವುದು; ಅನುಪಗೂಹನ- ರತ್ನತ್ರಯ

ಭಾವನಾರೂಪವೇಕ್ಷಮಾರ್ಗದಲ್ಲಿ ಅಜ್ಞಾನಿಗಳಿಂದ ಉಂಟಾಗುವ ದೂಷಣೆಯನ್ನು ಧರ್ಮೋಪದೇಶದಿಂದ ದೂರ ಮಾಡದಿರುವುದು, ಅಸ್ಥಿತೀಕರಣ- ಸಮ್ಯಗ್ದರ್ಶನಜ್ಞಾನ ಚಾರಿತ್ರಗಳನ್ನು ಬಿಡಲಿಚ್ಛಿಸುವ ಭವ್ಯನನ್ನು ಯಾವುದೊಂದು ಉಪಾಯದಿಂದ ಧರ್ಮದಲ್ಲಿ ಸ್ಥಿರಪಡಿಸದಿರುವುದು. ಅವಾತ್ಸಲ್ಯ- ಧಾರ್ಮಿಕರಾದ ಸಹ ಧರ್ಮಿಗಳಲ್ಲಿ ಪ್ರೀತಿಯನ್ನು ಮಾಡದಿರುವುದು. ಅಪ್ರಭಾವನೆ- ದಾನ ಪೂಜಾದಿಗಳಿಂದಲೂ, ತಪಃಶ್ರುತಾದಿಗಳಿಂದಲೂ ಜಿನಾಜ್ಞೆಯನ್ನು ಪ್ರಕಾಶಪಡಿಸದಿರುವುದು.

ಈ ಸಮ್ಯಗ್ದರ್ಶನವು ಮೇಲೆ ಹೇಳಿದ ಶಂಕೆ ಮೊದಲಾದ ೮ ದೋಷಗಳಿಗೆ ವಿರುದ್ಧಗಳಾದ ನಿಃಶಂಕೆ ದೊದಲಾದ ೮ ಗುಣಗಳುಳ್ಳುದಾಗಿರಬೇಕು. ನಿಃಶಂಕೆ ನಿಷ್ಕಾಂಕ್ಷೆ, ನಿರ್ವಿಚಿಕಿತ್ಸೆ, ಅಮೂಢದೃಷ್ಟಿ, ಉಪಗೂಹನ, ಸ್ಥಿತೀಕರಣ, ವಾತ್ಸಲ್ಯ ಪ್ರಭಾವನೆ ಎಂಬಿವು ೮ ಗುಣಗಳು.

## ೨ ಸಮ್ಯಗ್ಜ್ಞಾನ.

ತತ್ತ್ವಗಳು ಹೇಗೆ ಇರುವುವೋ ಅದೇ ರೀತಿಯಲ್ಲಿ (ಯಥಾರ್ಥವಾಗಿ) ಆದ ಆ ತತ್ತ್ವಗಳ ಜ್ಞಾನವು ಸಮ್ಯಗ್ಜ್ಞಾನವು. ಇದು ಸಂಶಯ, ವಿಪರ್ಯಯ, ಅನಧ್ಯವಸಾಯ ಎಂಬ ಮೂರು ದೋಷಗಳಿಲ್ಲದುದಾಗಿರಬೇಕು. ಸಿಂಪಿನ ತುಂಡನ್ನು ಕಂಡಾಗ ಇದು ಸಿಂಪೋ ಬೆಳ್ಳಿಯೋ ಎಂಬ ಜ್ಞಾನವು ಸಂಶಯವು; ಅದನ್ನು ಬೆಳ್ಳಿಯೆಂದು ತಿಳಿದುಕೊಳ್ಳುವುದು ವಿಪರ್ಯಯವು; ದಾರಿಯಲ್ಲಿ ಹೋಗುತ್ತಿರುವಾಗ ಕಾಲಿಗೆ ಹುಲ್ಲು ತಗುಲಿತೋ ಎಂಬ ಅನಿಶ್ಚಿತಜ್ಞಾನವು ಅನಧ್ಯವಸಾಯವು. ಈ ಮೂರು ಮಿಥ್ಯಾಜ್ಞಾನಗಳು. ಮಿಥ್ಯಾಜ್ಞಾನ ರಹಿತವಾಗಿ ದೀಪದಂತೆ ತನ್ನನ್ನೂ ಪರಪದಾರ್ಥಗಳನ್ನೂ ಪ್ರಕಾಶಪಡಿಸುವ ಜ್ಞಾನವು ಸಮ್ಯಗ್ಜ್ಞಾನವು.

ಸಮ್ಯಗ ಜ್ಞಾನವು ಮತಿ, ಶ್ರುತ, ಅವಧಿ, ಮನಃಪರ್ಯಯ, ಕೇವಲ ಎಂದು ಐದು ಬಗೆಯಾಗಿದೆ. ಮತಿಜ್ಞಾನ- ಜ್ಞಾನಾವರಣಕರ್ಮದ ಕ್ಷಯೋಪಶಮವಾಗಲು ಇಂದ್ರಿಯ, ಮನಸ್ಸು ಇವುಗಳ ಸಹಾಯದಿಂದ ಉಂಟಾಗುವ ಜ್ಞಾನವು ಶ್ರುತಜ್ಞಾನ- ಮತಿಜ್ಞಾನ ಪೂರ್ವಕವಾಗಿ ಉಂಟಾಗುವ ಜ್ಞಾನವು ಶ್ರುತಜ್ಞಾನವು; ಶಾಸ್ತ್ರಜ್ಞಾನಕ್ಕೂ ಶ್ರುತಜ್ಞಾನವೆಂಬ ಹೆಸರು. ಅವಧಿಜ್ಞಾನ- ಅವಧಿ ಜ್ಞಾನಾವರಣಕರ್ಮದ ಕ್ಷಯೋಪಶಮಕ್ಕನುಗುಣವಾಗಿ ದ್ರವ್ಯ, ಕ್ಷೇತ್ರ, ಕಾಲ, ಭಾವಗಳ ಮೇರೆ (ಅವಧಿ)ಯಿಂದ ಉಂಟಾಗುವ ಮೂರ್ತ ಪದಾರ್ಥಗಳ ಏಕದೇಶಜ್ಞಾನವು ಅವಧಿಜ್ಞಾನವೆನಿಸುವುದು. ಮನಃ ಪರ್ಯಯಜ್ಞಾನ- ಮನಃಪರ್ಯಯಜ್ಞಾನಾವರಣ ಕರ್ಮದ ಮತ್ತು ವೀರ್ಯಾಂತರಾಯಕರ್ಮದ ಕ್ಷಯೋಪಶಮವಾಗಲು ಪರರ ಮನಸ್ಸಿನಲ್ಲಿರುವ ಮೂರ್ತಪದಾರ್ಥಗಳನ್ನು ಏಕ

ನೇಶ ಪ್ರತ್ಯಕ್ಷದಿಂದ ತಿಳಿಯುವ ಜ್ಞಾನವು ಮನಃಪರ್ಯಯವು. ಕೇವಲಜ್ಞಾನ-ಜ್ಞಾನಾವರಣ, ದರ್ಶನಾವರಣ, ಮೋಹನೀಯ, ಅಂತರಾಯ ಎಂಬ ನಾಲ್ಕು ಘಾತಿಕರ್ಮಗಳ ಕ್ಷಯದಿಂದ ಸಮಸ್ತ ದ್ರವ್ಯಗಳನ್ನೂ ಪರ್ಯಾಯಗಳನ್ನೂ ಏಕಕಾಲಕ್ಕೆ ತಿಳಿಯುವ ಜ್ಞಾನವು ಕೇವಲಜ್ಞಾನವು. ಈ ಐದು ತೆರದ ಸಮ್ಯಗ್ಜ್ಞಾನಗಳಲ್ಲಿ ಮತಿ ಶ್ರುತ ಜ್ಞಾನಗಳೆರಡು ಪರೋಕ್ಷಜ್ಞಾನಗಳು; ಅವಧಿ ಮನಃಪರ್ಯಯಗಳು ವಿಕಲ ಪ್ರತ್ಯಕ್ಷಜ್ಞಾನಗಳು; ಕೇವಲಜ್ಞಾನವು ಸಕಲ ಪ್ರತ್ಯಕ್ಷಜ್ಞಾನವು. ಇಂದ್ರಿಯಾದಿಗಳ ಸಹಾಯವಿಲ್ಲದೆ ಆತ್ಮಸಾಪೇಕ್ಷವಾಗಿ ಉಂಟಾಗುವ ಜ್ಞಾನವು ಪ್ರತ್ಯಕ್ಷಜ್ಞಾನವು.

ಶ್ರುತಜ್ಞಾನದ ವಿಶೇಷವರ್ಣನೆ- ಶ್ರುತಜ್ಞಾನವು ಅಂಗ, ಅಂಗಬಾಹ್ಯ ಎಂದು ಎರಡು ಬಗೆಯಾಗಿದೆ. ಅಂಗ ಶ್ರುತಜ್ಞಾನವು ಆಚಾರ, ಸೂತ್ರಕೃತ, ಸ್ಥಾನ, ಸಮವಾಯ, ವ್ಯಾಖ್ಯಾಪ್ರಜ್ಞಪ್ತಿ, ಜ್ಞಾತೃಧರ್ಮಕಥೆ, ಉಪಾಸಕಾಧ್ಯಯನ, ಅಂತಕೃದ್ದಶ, ಅನುತ್ತರೋಪಪಾದಿಕದಶ, ಪ್ರಶ್ನವ್ಯಾಕರಣ, ವಿಪಾಕಸೂತ್ರ. ದೃಷ್ಟಿವಾದ ಎಂದು ಹನ್ನೆರಡುಬಗೆಯಾಗಿದೆ. ಇವೆಲ್ಲ ಶಾಸ್ತ್ರ ಗ್ರಂಥಗಳು. ಇವುಗಳಲ್ಲಿ ಆಚಾರ, ವ್ಯವಹಾರ ಜೀವಾಜೀವಾದಿಸ್ವರೂಪ ನಿರೂಪಣ, ಮತತತ್ತ್ವಗಳ ವಿಷಯದಲ್ಲಿ ಸಂಶಯಗಳ ನಿರಾಸ, ಮಿಥ್ಯಾಮತಗಳ ಖಂಡನೆ ಮುಂತಾದ ಹಲವು ವಿಷಯಗಳು ಪ್ರತಿಪಾದಿಸಲ್ಪಟ್ಟಿರುವುವು. ಹನ್ನೆರಡನೆಯ ದೃಷ್ಟಿವಾದ ಎಂಬ ಅಂಗದಲ್ಲಿ ಪರಿಕರ್ಮ, ಸೂತ್ರ, ಪ್ರಥಮಾನುಯೋಗ, ಪೂರ್ವಗತ, ಚೂಲಿಕೆ ಎಂಬ ಐದು ಭೇದಗಳುಂಟು. ಪರಿಕರ್ಮದಲ್ಲಿ ಚಂದ್ರಸೂರ್ಯಾದಿಗಳ ಗತಿ, ಗ್ರಹಣ ಮುಂತಾದ ವಿಷಯಗಳೂ ಭೂಗೋಲವಿಷಯ ಮುಂತಾದುವೂ ಬಂದಿವೆ. ಸೂತ್ರದಲ್ಲಿ ಮಿಥ್ಯಾಮತಗಳ ಖಂಡನೆಯಿದೆ. ಪ್ರಥಮಾನುಯೋಗದಲ್ಲಿ ತ್ರಿಷಷ್ಟಿಶಲಾಕಾಪುರುಷರ ವರ್ಣನೆಯುಂಟು. ಪೂರ್ವಗತದಲ್ಲಿ ಜೈನಧರ್ಮದ ತತ್ತ್ವಗಳ ಸಮಗ್ರವಾದ ವಿವೇಚನೆಯುಂಟು. ಚೂಲಿಕೆಯಲ್ಲಿ ಜಲಸ್ತಂಭನ, ಅಗ್ನಿಸ್ತಂಭನ, ಇಂದ್ರಜಾಲ ಮುಂತಾದ ಮಂತ್ರತಂತ್ರಗಳ ವಿಚಾರವುಂಟು.

ಅಂಗಬಾಹ್ಯಶ್ರುತಜ್ಞಾನದಲ್ಲಿಯೂ ಸಾಮಾಯಿಕ ಚತುರ್ವಿಂಶತಿಸ್ತವ, ವಂದನೆ, ಪ್ರತಿಕ್ರಮಣ. ಮುಂತಾದ ೧೪ ಪ್ರಕಾರಗಳುಂಟು.

ಈ ಎಲ್ಲ ಪ್ರಾಚೀನತಮ ಗ್ರಂಥಗಳನ್ನು ಹಿಂದುಗಳು ವೇದಗಳನ್ನು ಹೇಗೋ ಹಾಗೆ ಜೈನರು ಪೂಜಿಸುವರು. ಕಾಲಕ್ರಮದಿಂದ ಮನುಷ್ಯಶಕ್ತಿಯು ಕುಂದುತ್ತ ಬಂದುದರಿಂದ ಈ ಗ್ರಂಥಗಳು ಖಿಲವಾಗಿ ಹೋಗಿವೆ.

## ೩ ಸಮ್ಯಕ್ಚಾರಿತ್ರ.

ಮಿಥ್ಯಾತ್ವ, ಅಸಂಯಮ, ಕಷಾಯ ಮೊದಲಾದ ಅಶುಭ ಕಾರ್ಯಗಳನ್ನು ಬಿಟ್ಟು, ಸಮ್ಯಕ್ತ್ವ, ಸಂಯಮ, ಕಷಾಯನಿಗ್ರಹ ಮುಂತಾದ ಶುಭಕಾರ್ಯಗಳಲ್ಲಿ ನಿರತನಾಗುವುದು ಸಮ್ಯಕ್ಚಾರಿತ್ರವು. ಎಂದರೆ ಸರ್ವ ಪಾಪವ್ಯಾಪಾರಗಳಿಂದ ಜ್ಞಾನ ಶ್ರದ್ಧಾನಪೂರ್ವಕವಾಗಿ ನಿವೃತ್ತನಾಗಿ ಪವಿತ್ರಾಚರಣಗಳನ್ನು ಆಚರಿಸುವುದು ಸಮ್ಯಕ್ಚಾರಿತ್ರವು. ಸಂಸಾರದಲ್ಲಿ ಮೋಹವು ಕಡಿಮೆಯಾಗಲು ಸಮ್ಯಗ್ದರ್ಶನವು ಲಭಿಸುವುದು; ತರುವಾಯ ಜ್ಞಾನವು ನಿಶ್ಚಿತವಾಗುವುದು. ಈ ಸ್ಥಿತಿಯಲ್ಲಿ ಜೀವನು ರಾಗದ್ವೇಷಾದಿಗಳ ನಾಶಕ್ಕಾಗಿ ಉತ್ತಮಾಚರಣಗಳನ್ನು ಮಾಡತೊಡಗುವನು. ಇದೇ ಸಮ್ಯಕ್ಚಾರಿತ್ರವು.

ಸಮ್ಯಗ್ದರ್ಶನಾದಿಗಳು ಮೂರೂ ಸೇರಿದರೆ ಮಾತ್ರ ಮೋಕ್ಷಕ್ಕೆ ಕಾರಣವಾಗುವವು. ಒಂದೊಂದೇ ಮೋಕ್ಷ ಕಾರಣವಾಗಲಾರದು.

# ನಿಶಯ ರತ್ನತ್ರಯ

ಹಿಂದೆ ಸಮ್ಯಗ್ದರ್ಶನಜ್ಞಾನಚಾರಿತ್ರಗಳು ವ್ಯವಹಾರನಯದಿಂದ ಹೇಳಲ್ಪಟ್ಟಿವೆ. ಆದುದರಿಂದ ಅವು ವ್ಯವಹಾರ ಮೋಕ್ಷಮಾರ್ಗವೆನಿಸುವುವು. ಈಗ ನಿಶ್ಚಯನಯದಿಂದ ಅವುಗಳ ನಿರೂಪಣವು ಮಾಡಲ್ಪಡುವುದು. ನಿಶ್ಚಯ ಸಮ್ಯಗ್ದರ್ಶನಾದಿಗಳು ನಿಶ್ಚಯಮೋಕ್ಷಮಾರ್ಗವೆನಿಸುವುವು.

ಜೀವನು ಚೈತನ್ಯರೂಪದಿಂದ ಪರಿಣಾಮ ಹೊಂದುವನು; ಚೈತನ್ಯದ ಸಾಮಾನ್ಯ ಸ್ವರೂಪವು ಎಂದರೆ ಸಾಮಾನ್ಯರೂಪವಾಗಿ ಆಗುವ ವಸ್ತುಜ್ಞಾನವು ದರ್ಶನವೆನಿಸುವುದು. ಚೈತನ್ಯದ ವಿಶೇಷಸ್ವರೂಪವು ಎಂದರೆ ವಿಶೇಷರೂಪವಾಗಿ ಆಗುವ ವಸ್ತುಜ್ಞಾನವು ಜ್ಞಾನವೆನಿಸುವುದು. ಜೀವನು ಚೈತನ್ಯರೂಪದಿಂದ ಪರಿಣಾಮಹೊಂದುವಂತೆಯೇ ಚೈತನ್ಯದ ಸಾಮಾನ್ಯ ವಿಶೇಷಸ್ವರೂಪವಾದ ದರ್ಶನಜ್ಞಾನಗಳ ಸ್ವರೂಪದಿಂದಲೂ ಜೀವನೇ ಪರಿಣಾಮ ಹೊಂದುವನು. ಆದುದರಿಂದ ದರ್ಶನಜ್ಞಾನಗಳು ಜೀವನಸ್ವಭಾವವೆನಿಸುವುವು. ಈ ಜೀವಸ್ವಭಾವಭೂತವಾದ ದರ್ಶನಜ್ಞಾನಗಳು ರಾಗದ್ವೇಷರೂಪವಾಗಿ ಪರಿಣತವಾಗದೆ ನಿರ್ದೋಷವಾಗಿರುವ ಅವುಗಳ ಅಸ್ತಿತ್ವವೇ ಚಾರಿತ್ರವು.

ಇಲ್ಲಿ ಜ್ಞಾನದರ್ಶನಗಳ ಅಸ್ತಿತ್ವವೆಂದರೆ ಉತ್ಪತ್ತಿ ಸ್ಥಿತಿನಾಶಗಳು. ಇದು ಘಟವು ಎಂದು ಜ್ಞಾನವಾಗುವುದು ಜ್ಞಾನದ ಉತ್ಪತ್ತಿಯು; ಈ ಜ್ಞಾನವು ಕೆಲವು ಕಾಲದ ತರುವಾಯ ಇಲ್ಲದಂತಾಗುವುದು; ಇದು ನಾಶವು. ಆದರೆ ಘಟ

ಜ್ಞಾನ ಪಟಜ್ಞಾನರೂಪವಾದ ಜ್ಞಾನವಿಶೇಷಗಳಿಗೆ ಉತ್ಪತ್ತಿನಾಶಗಳಿದ್ದರೂ ಜ್ಞಾನವು ಜ್ಞಾನವು ಎಂಬ ಸಾಮಾನ್ಯ ರೂಪದಿಂದ ಯಾವಾಗಲೂ ಅದು ಇದ್ದೇ ಇರುವುದು. ದರ್ಶನವೂ ಇದೇ ಮೇರೆಗೆ ಸಾಮಾನ್ಯ ರೂಪದಿಂದ ಇದ್ದೇ ಇರುವುದು. ಇದೇ ದರ್ಶನಜ್ಞಾನಗಳ ಅಸ್ತಿತ್ವವು.

ಮೇಲೆ ಹೇಳಿದ ಜ್ಞಾನದರ್ಶನಗಳ ನಿರ್ದೋಷ ಅಸ್ತಿತ್ವರೂಪವಾದ ಚಾರಿತ್ರವು ಸ್ವಚಾರಿತ್ರ ಇಲ್ಲವೆ ಸ್ವಸಮಯವೆಂದೂ, ಪರಚಾರಿತ್ರ ಇಲ್ಲವೆ ಪರಸಮಯವೆಂದೂ ಎರಡು ವಿಧವಾಗಿದೆ. ಜೀವನ ಪರಿಣಾಮಭೂತವಾದ ದರ್ಶನಜ್ಞಾನಗಳು ರಾಗದ್ವೇಷಾದಿ ವಿಭಾವಗಳಿಂದ ಮಲಿನವಾಗದೆ ತಮ್ಮ ಶುದ್ಧಸ್ವರೂಪದಿಂದ ಇದ್ದರೆ ಅದಕ್ಕೆ ಸ್ವಚಾರಿತ್ರವೆಂದು ಹೆಸರು. ಜೀವನು ಸ್ವಚಾರಿತ್ರಸ್ವೀಕಾರವನ್ನೂ, ಪರಚಾರಿತ್ರತ್ಯಾಗವನ್ನೂ ಮಾಡುವುದರಿಂದ ಕರ್ಮಕ್ಷಯವಾಗಲು ಆತನು ಮೋಕ್ಷಹೊಂದುವನು. ಆದರೆ ಸಂಸಾರಿ ಜೀವನ ಜ್ಞಾನದರ್ಶನಪರಿಣಾಮಗಳು ಅನಾದಿಮೋಹನೀಯಕರ್ಮದಿಂದ ರಾಗದ್ವೇಷಾದಿಮಿಶ್ರಗಳಾಗಿ ಉಂಟಾಗುವುವು. ಈ ರಾಗದ್ವೇಷ ಮಿಶ್ರವಾಗಿ ಜೀವನು ಪರಿಣಮಿಸುವುದೇ ಆತನ ಪರಚಾರಿತ್ರವು ಇಲ್ಲವೆ ಪರಸಮಯವು. ಮೋಹನೀಯ ಕರ್ಮದ ಉದಯದಿಂದ ಜೀವನ ಪರಿಣಾಮಗಳು ಮಲಿನವಾಗಲು ಶರೀರಾದಿ ಪುದ್ಗಲದ್ರವ್ಯಗಳಲ್ಲಿ ಪ್ರೀತಿ, ಅಪ್ರೀತಿಗಳನ್ನು ಧರಿಸುವನು. ಈ ಜೀವನು ಸ್ವಚರಿತ್ರದಿಂದ ಭ್ರಷ್ಟನಾಗಿ ಪರಚರಿತ್ರವನ್ನು ಆಚರಿಸುವವನೆನಿಸುವನು.

ಅರ್ಹದಾದಿ ಪೂಜ್ಯರಲ್ಲಿ ಪ್ರೀತಿಯು ಪ್ರಶಸ್ತರಾಗವೆಂದೂ, ಧರ್ಮವಿರುದ್ಧ ವಿಷಯಗಳಲ್ಲಿ ಪ್ರೀತಿಯು ಅಪ್ರಶಸ್ತರಾಗವೆಂದೂ ಹೇಳಲ್ಪಡುವುದು. ಪ್ರಶಸ್ತರಾಗದಿಂದ ಪುಣ್ಯಾಸ್ರವವೂ, ಅಪ್ರಶಸ್ತರಾಗದಿಂದ ಪಾಪಾಸ್ರವವೂ ಉಂಟಾಗುವುವು. ಆತ್ಮನ ಪರಿಣಾಮಗಳು ಪುಣ್ಯವನ್ನಾಗಲಿ, ಪಾಪವನ್ನಾಗಲಿ ಆಸ್ರವಿಸುತ್ತಿದ್ದರೆ (ಆಕರ್ಷಿಸುತ್ತಿದ್ದರೆ) ಆ ಆತ್ಮನು ಪರಚಾರಿತ್ರವನ್ನು ಆಚರಿಸುವನೆಂದು ತಿಳಿಯಬೇಕು. ಪರಿಚಾರಿತ್ರಾನುವರ್ತನವು ಪುಣ್ಯಕರವಾಗಿದ್ದರೂ ಆ ಪುಣ್ಯವು ಬಂಧಕ್ಕೆ ಕಾರಣವಾಗುವುದರಿಂದ ಮೋಕ್ಷಸಾಧಕವಾಗುವುದಿಲ್ಲ. ಆದುದರಿಂದ ಜೀವನು ತನ್ನ ಶುದ್ಧ ಪರಿಣಾಮಗಳಿಂದ ಸ್ವಸ್ವರೂಪವನ್ನು ನೋಡಬೇಕು, ಮತ್ತು ತಿಳಿಯಬೇಕು. ಹೀಗೆ ಶುದ್ಧಜ್ಞಾನದರ್ಶನ ಸ್ವರೂಪಗಳಿಂದ ತನ್ನನ್ನು ತಿಳಿದುಕೊಳ್ಳುವ ಮತ್ತು ನೋಡುವ ಜೀವನು ಸ್ವಚರಿತ್ರವನ್ನು ಆಚರಿಸುವವನಾದುದರಿಂದ ಮೋಕ್ಷವನ್ನೈದುವನು.

ಜೀವನು ಮೋಹನೀಯಕರ್ಮದಿಂದ ಸಂಪೂರ್ಣವಾಗಿ ಬಿಡುಗಡೆಹೊಂದಿದ ಬಳಿಕ ದೇಹ ಮೊದಲಾದ ಪುದ್ಗಲರೂಪವಾದ ಪರದ್ರವ್ಯವಿಷಯದಲ್ಲಿ

ನಾನು ಎಂಬ ಬುದ್ಧಿಯನ್ನು ಬಿಟ್ಟು ಕೇವಲ ದ್ರವ್ಯವನ್ನು (ಆತ್ಮದ್ರವ್ಯವನ್ನು) ಅನುಸರಿಸುವುದು, ಮತ್ತು ಆತ್ಮ ಪರಿಣಾಮಗಳಾದ ಜ್ಞಾನದರ್ಶನಗಳನ್ನು "ಇವು ಕಥಂ ಚಿತ್ ಸತ್ಸ್ವರೂಪಗಳು" ಎಂದು ಅಭೇದ ಭಾವನೆಯನ್ನು ಮಾಡಿಕೊಂಡು ಶುದ್ಧ ಸ್ವಚಾರಿತ್ರವನ್ನು ಆಚರಿಸುವವನಾಗುವನು. ಶುದ್ಧ ಜ್ಞಾನದರ್ಶನರೂಪ ಆತ್ಮಪರಿಣಾಮಗಳಲ್ಲಿ ಅಭೇದ ಬುದ್ಧಿಯನ್ನು ಧರಿಸುವುದೇ ಸ್ವಚಾರಿತ್ರಾಚರಣವೆನಿಸುವುದು. ಈ ಸ್ವಚಾರಿತ್ರಾಚರಣರೂಪವಾದ ಮೋಕ್ಷಮಾರ್ಗವು ಜೀವದ್ರವ್ಯದಿಂದ ಕಥಂಚಿತ್ ಅಭಿನ್ನವಾಗಿದೆ. ಏಕೆಂದರೆ, ಇಲ್ಲಿ ಮಾಡಿದ ಮೋಕ್ಷಮಾರ್ಗನಿರೂಪಣವು ನಿಶ್ಚಯನಯಾಪೇಕ್ಷೆಯಿಂದ ಮಾಡಲ್ಪಟ್ಟಿರುವುದರಿಂದಲೂ, ನಿಶ್ಚಯನಯವು ಶುದ್ಧದ್ರವ್ಯವನ್ನಾಶ್ರಯಿಸಿ ಪ್ರವರ್ತಿಸುವುದರಿಂದಲೂ ಶುದ್ಧ ಸ್ವಚಾರಿತ್ರರೂಪವಾದ ಮೋಕ್ಷಮಾರ್ಗವು ಜೀವದ್ರವ್ಯದ ಒಂದು ಪರಿಣಾಮವಾಗಿರುವುದರಿಂದಲೂ ಅದು ಜೀವದ್ರವ್ಯದೊಡನೆ ಕಥಂಚಿತ್ ಅಭಿನ್ನವಾಗಿರುವುದೆಂಬುದು ಸ್ಪಷ್ಟವಿದೆ. ಇಲ್ಲಿ ಸಾಧ್ಯವಾದ ಮೋಕ್ಷಮಾರ್ಗವೂ ಸಾಧನವಾದ ಆತ್ಮನೂ ಅಭಿನ್ನವೆಂದು ಇಟ್ಟುಕೊಂಡು ಇಲ್ಲಿ ನಿರೂಪಿಸಲ್ಪಟ್ಟಿದೆ. ವ್ಯವಹಾರನಯದಿಂದ ಹೇಳುವ ಮೋಕ್ಷಮಾರ್ಗದಲ್ಲಿ ಸಾಧ್ಯವಾದ ಮೋಕ್ಷಮಾರ್ಗಕ್ಕೂ ಸಾಧನವಾದ ಆತ್ಮನಿಗೂ ಕಥಂಚಿತ್ ಭೇದವನ್ನು ಇಟ್ಟುಕೊಳ್ಳಬೇಕಾಗುವುದು. ನಿಶ್ಚಯ ಮೋಕ್ಷಮಾರ್ಗವು ವ್ಯವಹಾರಮೋಕ್ಷಮಾರ್ಗದೊಡನೆ (ವ್ಯವಹಾರ ಮೋಕ್ಷಮಾರ್ಗವು ಚಾರಿತ್ರರೂಪವಾಗಿ ಇರುವುದರಿಂದ) ಅಭಿನ್ನವೆಂದು ತಿಳಿಯಲ್ಪಟ್ಟಿದೆ.

ವ್ಯವಹಾರ ಮೋಕ್ಷಮಾರ್ಗವು ನಿಶ್ಚಯ ಮೋಕ್ಷಮಾರ್ಗಕ್ಕೆ ಸಾಧಕವಾಗಿದೆ. ವ್ಯವಹಾರಮೋಕ್ಷಮಾರ್ಗವು ಸಾಧನವಾಗಿಯೂ, ನಿಶ್ಚಯಮೋಕ್ಷಮಾರ್ಗವು ಸಾಧ್ಯವಾಗಿಯೂ ಇದ್ದರೂ ಇವು ಪರಸ್ಪರ ಭಿನ್ನಗಳಲ್ಲ. ಕಣಿಯೊಳಗಿನ ಸುವರ್ಣಶಿಲೆ, ಮತ್ತು ಸುವರ್ಣ ಇವು ವ್ಯವಹಾರದೃಷ್ಟಿಯಿಂದ ಭಿನ್ನವಾಗಿ ಕಂಡುಬಂದರೂ ವಾಸ್ತವನಾಗಿ ಅವುಗಳಲ್ಲಿ ಭೇದವಿಲ್ಲ. ಸುವರ್ಣಶಿಲೆಯೇ ತಾಪನಾದಿ ಸಂಸ್ಕಾರಗಳಿಂದ ಸುವರ್ಣವಾಗುವುದು. ಇಲ್ಲಿಯೂ ಸಮ್ಯಗ್ದರ್ಶನಜ್ಞಾನಗಳಿಂದ ಕೂಡಿದ ಸಮ್ಯಕ್ಚಾರಿತ್ರವೆಂಬ ವ್ಯವಹಾರ ಮೋಕ್ಷಮಾರ್ಗ ಮತ್ತು ಮೇಲೆ ನಿರೂಪಿಸಿದ ನಿಶ್ಚಯಮೋಕ್ಷಮಾರ್ಗ ಇವುಗಳಲ್ಲಿ ಸಾಧ್ಯಸಾಧನಭಾವವಿದ್ದರೂ ಎರಡೂ ಒಂದೇ ಎಂದು ತಿಳಿಯಬೇಕು. ನಯಭೇದದಿಂದ ಶಾಸ್ತ್ರದಲ್ಲಿ ವಿವೇಚನೆಯಿರುವುದರಿಂದ ಅವುಗಳನ್ನು ಪ್ರತ್ಯೇಕವಾಗಿ ಹೇಳಿದೆ. ವ್ಯವಹಾರನಯವನ್ನು ಮುಖ್ಯವೆಂದು ತಿಳಿದು ವಿವೇಚನಮಾಡಿದಲ್ಲಿ ಪದಾರ್ಥಗಳ ಭೇದಕ್ಕೆ ಪ್ರಾಧಾನ್ಯವಿರುವುದು. ನಿಶ್ಚಯನಯಕ್ಕೆ ಪ್ರಾಧಾನ್ಯವಿರುವಲ್ಲಿ ಅಭೇದಕ್ಕೆ ಪ್ರಾಧಾನ್ಯವಿರುವುದು.

ಸಮ್ಯಗ್ದರ್ಶನ, ಸಮ್ಯಗ್ಜ್ಞಾನ, ಸಮ್ಯಕ್ಚಾರಿತ್ರಗಳು ಈ ಮೂರು ಒಂದೆ ಡೆಗೆ ಸೇರುವುದೇ ಮೋಕ್ಷಮಾರ್ಗವು. ಧರ್ಮ ಮೊದಲಾದ ಆರು ದ್ರವ್ಯಗಳು ಜೀವ ಮೊದಲಾದ ಒಂಬತ್ತು ಪದಾರ್ಥಗಳು ಇವುಗಳ ನಿಜಸ್ವರೂಪದಲ್ಲಿ ದೃಢ ವಿಶ್ವಾಸವು ಸಮ್ಯಗ್ದರ್ಶನವು. ಸಮ್ಯಗ್ದರ್ಶನವು ಆತ್ಮನ ಒಂದು ವಿಶೇಷ ಪರಿ ಣಾಮವು. ೧೨ ಅಂಗಶಾಸ್ತ್ರಗಳು ೧೪ ಪೂರ್ವಶಾಸ್ತ್ರಗಳು ಇವುಗಳಲ್ಲಿ ಪ್ರತಿಪಾ ದಿಸಿದ ವಿಷಯಗಳ ಯಥಾರ್ಥ ಜ್ಞಾನವು ಸಮ್ಯಗ್ಜ್ಞಾನವು. ಆಚಾರಾಂಗ ಮೊದಲಾದ ಸೂತ್ರಗಳಲ್ಲಿ ಹೇಳಿದ ಯತಿಧರ್ಮಗಳನ್ನು ಪಾಲಿಸುವ ತಪಶ್ಚ ರ್ಯೆಯು ಸಮ್ಯಕ್ಚಾರಿತ್ರವು. ಈ ಮೂರಕ್ಕೆ ವ್ಯವಹಾರನಯದಿಂದ ಮೋಕ್ಷ ಮಾರ್ಗವೆನ್ನುವರು. ಸಮ್ಯಗ್ದರ್ಶನದ-ತೆ ಜ್ಞಾನಚಾರಿತ್ರಗಳೂ ಆತ್ಮನ ವಿಶೇಷ ಪರಿಣಾಮಗಳಾಗಿದ್ದರೂ ಆ ಪರಿಣಾಮಗಳು ಕೇವಲ ಆತ್ಮನ ಪರಿಣಾ ಮಗಳೇ ಆಗಿರದೆ ಆತ್ಮ ಮತ್ತು ಪುದ್ಗಲದ್ರವ್ಯ ಇವೆರಡರ ಮಿಶ್ರ ಪರಿಣಾಮಗ ಳಾದುದರಿಂದ ಈ ದರ್ಶನಜ್ಞಾನಚಾರಿತ್ರಸಮುದಾಯವು. ಉಭಯಾಶ್ರಿತವಾ ಗಿದೆ. ಆದುದರಿಂದ ಇದಕ್ಕೆ ವ್ಯವಹಾರಮೋಕ್ಷಮಾರ್ಗವೆಂದು ಹೆಸರು. ಸುವ ರ್ಣಪಾಷಾಣವು ಸುವರ್ಣಸ್ವರೂಪವನ್ನು ಹೊಂದುವುದಕ್ಕೆ ಅಗ್ನಿಯು ಸಾಧನ ವಾಗುವಂತೆ ಜೀವನು ವ್ಯವಹಾರ ಮೋಕ್ಷಮಾರ್ಗವನ್ನು ಅವಲಂಬಿಸಲು ಆತನು ಮುಂದುಮುಂದಿನ ಗುಣಸ್ಥಾನವನ್ನು ಹೊಂದುವನು. ಆದರಿಂದ ಆತನ ಸ್ವರೂ ಪವು ಶುದ್ಧವಾಗುತ್ತ ಬರಲು ಆತನು ಶುದ್ಧಸ್ವಭಾವದಿಂದ ಪರಿಣಾಮ ಹೊಂದ ತೊಡಗುವನು. ಶುದ್ಧಸ್ವರೂಪದಿಂದ ಪರಿಣಾಮಹೊಂದುವುದೇ ನಿಶ್ಚಯಮೋ ಕ್ಷಮಾರ್ಗವು. ಇದರಿಂದ ವ್ಯವಹಾರ ಮೋಕ್ಷಮಾರ್ಗವು ನಿಶ್ಚಯಮೋಕ್ಷಮಾ ರ್ಗದ ಸಾಧನವೆಂಬುದು ಸ್ಪಷ್ಟವಾಗುವುದು.

ದರ್ಶನಜ್ಞಾನಚಾರಿತ್ರರೂಪನಾದುದರಿಂದ ಆತ್ಮನೇ ಮೋಕ್ಷಮಾರ್ಗವೆನಿ ಸುವನು. ಜೀವನು ತನ್ನಿಂದ ಅಭಿನ್ನವಾದ ಸ್ವಸ್ವರೂಪವನ್ನು ತಾನೇ ಉಂಟು ಮಾಡಿಕೊಳ್ಳುವನು. ತನ್ನ ನಿಶ್ಚಿತವಾದ ಅಸ್ತಿತ್ವವು ಶುದ್ಧಭಾವದ್ದೆಂದು ತಿಳಿದು ಆ ಶುದ್ಧಸ್ವಭಾವದ ಅನುವರ್ತನಮಾಡುವನು. ತನ್ನಿಂದಲೇ- ಸ್ವಯಂಪ್ರಕಾ ಶದಿಂದಲೇ- ತನ್ನ ಸ್ವರೂಪವನ್ನು ತಿಳಿಯುವನು. ಮತ್ತು ತನ್ನಿಂದಲೇ- ತನ್ನ ವಾಸ್ತವಸ್ವರೂಪದಿಂದಲೇ- ತನ್ನನ್ನು ನೋಡುವನು. ಹೀಗೆ ಆತ್ಮನೇ ಚಾರಿತ್ರ, ಜ್ಞಾನ, ದರ್ಶನಸ್ವರೂಪನಾಗಿರುವನು. ಆದುದರಿಂದ ಶುದ್ಧಜ್ಞಾನದರ್ಶನಚಾ ರಿತ್ರಗಳಿಂದ ಅಭಿನ್ನನಾದ ಆತ್ಮನೇ ನಿಶ್ಚಯಮೋಕ್ಷಮಾರ್ಗವು. ಇಲ್ಲಿ ಅನು ವರ್ತನ ಮಾಡುವುದು, ತಿಳಿಯುವುದು, ನೋಡುವುದು ಎಂಬ ಕ್ರಿಯೆಗಳ ಕರ್ತೃವು ಆತ್ಮನು, ಕರ್ಮವೂ ಆತ್ಮನು. ಕರಣವೂ ಆತ್ಮನೇ. ಆ ಕ್ರಿಯೆಗಳು ಕೂಡ ಆತ್ಮನಿಂದ ಕಥಂಚಿತ್ ಅಭಿನ್ನವಿರುತ್ತವೆ. ಈ ಕಾರಣದಿಂದಲೂ ಶುದ್ಧನಿಶ್ಚಯ

ನಯದಿಂದ ಆತ್ಮನಿಂದ ದರ್ಶನಜ್ಞಾನ ಚಾರಿತ್ರ ಸ್ವರೂಪತ್ವವು ಬರುವುದರಿಂದ ಆತ್ಮನೇ ಮೋಕ್ಷಮಾರ್ಗವೆಂದು ಸಿದ್ಧವಾಗುವುದು.

ದರ್ಶನಜ್ಞಾನಚಾರಿತ್ರಗಳಲ್ಲಿ ಶುದ್ಧ, ಅಶುದ್ಧ ಎಂದು ಎರಡು ವಿಧವು. ಶುದ್ಧ ದರ್ಶನಜ್ಞಾನಚಾರಿತ್ರಗಳು ಮೋಕ್ಷಸಾಧಕಗಳು; ಅಶುದ್ಧಗಳು ಬಂಧ ಹೇತುಗಳಾಗಿವೆ. ದರ್ಶನಜ್ಞಾನಚಾರಿತ್ರಗಳು ರಾಗದ್ವೇಷಾದಿ ಪರಸಮಯ ಯುಕ್ತವಾಗಲು ಬಂಧವನ್ನುಂಟು ಮಾಡುವುವು. ಉದಾ:- ಒಬ್ಬ ಸಮ್ಯಗ್ದೃಷ್ಟಿಯುಳ್ಳ ಜೀವನು ಅರ್ಹಂತರಲ್ಲಿ ಚಿತ್ತವೃತ್ತಿಯು ಸೇರಿದರೆ ಮುಕ್ತನಾಗುವೆನು ಎಂದು ತಿಳಿದಿದ್ದರೆ ಆತನು ಪರಸಮಯಾಸಕ್ತನಾದುದರಿಂದ ಅವನಿಗೆ ಪುಣ್ಯಬಂಧನವು ಮಾತ್ರ ಉಂಟಾಗುವುದು. ಅರ್ಹದ್ಭಕ್ತಿಯೂ ಕೂಡ ಮೋಕ್ಷೇಚ್ಛಾರೂಪ ರಾಗದಿಂದ ಉಂಟಾದುದರಿಂದ ಪರಸಮಯವೆನಿಸುವುದು. ಇನ್ನು ಇದಕ್ಕಿಂತ ಹೆಚ್ಚಾದ ಇಚ್ಛೆಗಳುಳ್ಳ ಜೀವನು ಪರಸಮಯರತನೆಂದು ಹೇಳಬೇಕಾದುದಿಲ್ಲ. ಅರ್ಹತ್ ಸಿದ್ಧ ಪ್ರವಚನ (ಶಾಸ್ತ್ರ) ಗಣಧರಮುನಿ ಮೊದಲಾದವರಲ್ಲಿ ಭಕ್ತಿಯುಳ್ಳ ಜೀವನು ಪುಣ್ಯ ಸಂಚಯವನ್ನು ಮಾಡುವನು. ಅದರಿಂದ ಕರ್ಮಕ್ಷಯವಾಗುವುದಿಲ್ಲ. ಅರ್ಹದ್ಭಕ್ತಿಯೆಂಬುದು ಪ್ರಶಸ್ತರಾಗವೆನಿಸುವುದು. ಈ ಪ್ರಶಸ್ತರಾಗವು ಪುಣ್ಯರೂಪದಿಂದ ಬಂಧಹೇತುವು; ಕರ್ಮಕ್ಷಯಕಾರಕವಲ್ಲದುದರಿಂದ ಮೋಕ್ಷಹೇತುವಲ್ಲ. ಪರದ್ರವ್ಯವಿಷಯದಲ್ಲಿ ಅತ್ಯಲ್ಪವಾದ ರಾಗವು ಇದ್ದರೂ ಕೂಡ, ಆತನು ಸಂಪೂರ್ಣ ಆಗಮಜ್ಞಾನವುಳ್ಳವನಾಗಿದ್ದರೂ ಅವನು ಸ್ವಸಮಯವನ್ನು ತಿಳಿಯನು. ಆದುದರಿಂದ ಅರಳೆಯನ್ನು ಹಿಂಜುವ ತಂತಿಯನ್ನು ಠಣತ್ಕರಿಸಲು ಅದು ತನಗೆ ಹತ್ತಿದ ಎಲ್ಲ ಅರಳೆಯನ್ನು ಹೇಗೆ ದೂರಕ್ಕೋಡಿಸಿ ಬಿಡುವುದೋ ಹಾಗೆ ಜೀವನು ಅರ್ಹದ್ಭಕ್ತಿ ಮೊದಲಾದ ರಾಗದ ಅಂಶಗಳನ್ನು ಪೂರ್ಣವಾಗಿ ಬಿಡಬೇಕು. ಎಂದರೆ ಆತನು ವೀತರಾಗನಾಗಬೇಕು. ಆವಾಗಲೇ ಮೋಕ್ಷಯೋಗ್ಯನಾಗುವನು. ಆತ್ಮನು ರಾಗವನ್ನು (ಅಂತರ ಪರಿಗ್ರಹ, ಬಾಹ್ಯ ಪರಿಗ್ರಹಗಳನ್ನು) ಬಿಡಲು ಶುದ್ಧ ಆತ್ಮದ್ರವ್ಯದಲ್ಲಿ ಲೀನವಾಗುವ ವಾಸ್ತವಸಿದ್ಧಭಕ್ತಿಯು ಅವನಲ್ಲಿ ಉಂಟಾಗುವುದರಿಂದ ಆತನು ಕರ್ಮಬಂಧವನ್ನು ಪೂರ್ಣವಾಗಿ ನಾಶಗೊಳಿಸಿ ಮೋಕ್ಷವನ್ನೈದುವನು. ಆದರೆ ನವಪದಾರ್ಥಗಳು, ಅರ್ಹಂತನು, ಆತನು ಉಪದೇಶಿಸಿದ ಶಾಸ್ತ್ರಗಳು ಇವುಗಳಲ್ಲಿ ಹೆಚ್ಚು ಹೆಚ್ಚು ಭಕ್ತಿಯನ್ನು ಇಟ್ಟುಕೊಂಡವನು ಹೆಚ್ಚು ಹೆಚ್ಚು ಬಂಧನವುಳ್ಳವನಾಗುವುದರಿಂದ ಮೋಕ್ಷಕ್ಕೆ ಹೆಚ್ಚು ಹೆಚ್ಚು ದೂರದಲ್ಲಿ ಉಳಿಯುವನು. ಅವನು ಸ್ವರ್ಗಾದಿಲೋಕಗಳಲ್ಲಿ ಜನ್ಮತಾಳಿ ಸಂಸಾರದಲ್ಲಿ ಪರಿಭ್ರಮಣಮಾಡಬೇಕಾಗುವುದು. ಅರ್ಹದಾದಿ ಭಕ್ತಿಯು ಪರಂಪರೆಯಿಂದ ಮೋಕ್ಷಸಾಧಕವಾದರೂ ನಡುವೆ ಸ್ವರ್ಗಾದಿ ಪ್ರಾಪ್ತಿಯನ್ನುಂಟು ಮಾಡುವುದರಿಂದ ಕ್ಲೇಶೋತ್ಪಾದಕವೇ ಆಗುವುದು. ಆದುದರಿಂದ ವೀತರಾಗತ್ವವೇ ಮುಕ್ತಿಸಾಧಕವೆಂದು ತಿಳಿಯಬೇಕು.

———

## ೫. ಚತುರ್ದಶ ಗುಣಸ್ಥಾನಗಳು.

ದುಃಖವು ಪ್ರಾಣಿಮಾತ್ರಕ್ಕೆ ಸಾಮಾನ್ಯವಾದುದು. ಶ್ರೀಮಂತನಿಗೂ, ದರಿದ್ರನಿಗೂ, ನೀರೋಗಿಗೂ, ರೋಗಿಗೂ, ತರುಣನಿಗೂ, ವೃದ್ಧನಿಗೂ ಒಂದಲ್ಲೊಂದು ದುಃಖವು ಬಿಟ್ಟಿಲ್ಲ. ಒಮ್ಮೊಮ್ಮೆ ಸುಖವಾದಂತೆ ಕಂಡು ಒಂದರೂ ಅದು ನಿಜ ಸುಖವಲ್ಲ. ಸುಖದಂತೆ ತೋರುವುದು. ಈ ಸುಖಾಭಾಸದ ಪ್ರಾಪ್ತಿಗಾಗಿಯೇ ಜೀವನು ಅನಂತಯೋನಿಗಳಲ್ಲಿ ಅನಂತಕಾಲ ಭ್ರಮಣ ಮಾಡುತ್ತಿರುವನು. ಸತ್ಯಧರ್ಮವನ್ನು ಆಶ್ರಯ ಮಾಡಿದ ಹೊರತು, ಆತನು ಸತ್ಯ ಸುಖವನ್ನು ಹೊಂದಲಾರನು. ಸತ್ಯಸುಖವೆಂಬುದೇ ಮೋಕ್ಷವು. ಶಾಶ್ವತವೂ, ಅನಂತವೂ ಆದ ಈ ಮೋಕ್ಷಸುಖವನ್ನು ದೊರಕಿಸುವುದಕ್ಕೆ ಧರ್ಮದ ಹೊರತು ಬೇರೆ ಗತಿಯಿಲ್ಲ. ಸಮ್ಯಗ್ದರ್ಶನ, ಸಮ್ಯಗ್ಜ್ಞಾನ, ಸಮ್ಯಕ್ಚಾರಿತ್ರ ಇವುಗಳ ಐಕ್ಯವನ್ನೇ ಧರ್ಮವೆನ್ನುವರು. ಈ ರತ್ನತ್ರಯವು ಪೂರ್ಣವಾದೊಡನೆ ಜೀವನು ಮೋಕ್ಷವನ್ನೈದುವನು. ಇದು ಒಮ್ಮೆಲೆ ಪರಿಪೂರ್ಣವಾಗುವುದಿಲ್ಲ. ಕ್ರಮದಿಂದ ಪೂರ್ಣತೆಯನ್ನು ಹೊಂದುವುದು. ಈ ರತ್ನತ್ರಯದ ಪ್ರಮಾಣವು ಹೆಚ್ಚುತ್ತ ನಡೆದಂತೆ ಜೀವನು ಮೋಕ್ಷದ ಸಮೀಪ ಸಮೀಪಕ್ಕೆ ಹೋಗುವನು. ರತ್ನತ್ರಯದ ಪ್ರಮಾಣದ ತಾರತಮ್ಯದಿಂದ ಮೋಕ್ಷ ಮಾರ್ಗದಲ್ಲಿ ಹದಿನಾಲ್ಕು ತರಗತಿಗಳು ಕಲ್ಪಿಸಲ್ಪಟ್ಟಿವೆ. ಇವುಗಳನ್ನು ಗುಣಸ್ಥಾನಗಳೆನ್ನುವರು. ಮೋಕ್ಷವೆಂಬ ಪ್ರಾಸಾದವನ್ನೇರುವುದಕ್ಕೆ ಇಟ್ಟಿರುವ ರತ್ನತ್ರಯವೆಂಬ ನಿಚ್ಚಣಿಕೆಗೆ ಹದಿನಾಲ್ಕು ಗುಣಸ್ಥಾನಗಳೆಂಬಿವು ಹದಿನಾಲ್ಕು ಮೆಟ್ಟಲುಗಳೆಂದು ಹೇಳಬಹುದು. ಅವು:- ಮಿಥ್ಯಾತ್ವ, ಸಾಸಾದನಸಮ್ಯಕ್ತ್ವ, ಮಿಶ್ರ, ಅವಿರತ ಸಮ್ಯಕ್ತ್ವ, ದೇಶವಿರತ, ಪ್ರಮತ್ತ, ಅಪ್ರಮತ್ತ, ಅಪೂರ್ವಕರಣ, ಅನಿವೃತ್ತಿಕರಣ, ಸೂಕ್ಷ್ಮಸಾಂಪರಾಯ, ಉಪಶಾಂತಕಷಾಯ, ಕ್ಷೀಣಕಷಾಯ, ಸಯೋಗಕೇವಲಿ, ಅಯೋಗಕೇವಲಿ. ಮೋಕ್ಷೇಚ್ಛೆಯಿಲ್ಲದ ಎಲ್ಲ ಸಂಸಾರಿ ಜೀವರು ಎಲ್ಲಕ್ಕೂ ಕೆಳಗಿನ ಮೆಟ್ಟಲಿನಲ್ಲಿರುವರು. ಈ ಮೊದಲನೆಯ ಗುಣಸ್ಥಾನಕ್ಕೆ ಮಿಥ್ಯಾತ್ವವೆಂದು ಹೆಸರು. ಈ ಗುಣಸ್ಥಾನದಲ್ಲಿರುವ ಜೀವನನ್ನು ಮಿಥ್ಯಾದೃಷ್ಟಿ ಎನ್ನುವರು. ಈ ಮಿಥ್ಯಾದೃಷ್ಟಿ ಜೀವನು ಪದಾರ್ಥಗಳ ನಿಜಸ್ವರೂಪದ ಮೇಲೆ ಶ್ರದ್ಧೆಯನ್ನಿಡದೆ ತನ್ನ ಕಲ್ಪನೆಯಂತೆ ಮಿಥ್ಯಾಶ್ರದ್ಧೆಯನ್ನಿಟ್ಟುಕೊಂಡಿರುವನು. ತಕ್ಕ ಕಾಲವು ಪ್ರಾಪ್ತವಾಗಲು ಜೀವನು ಮೊದಲನೆಯ ಗುಣಸ್ಥಾನವನ್ನು ಬಿಟ್ಟು, ಮೇಲೆ ಹೋಗಲು ಬಯಸುವನು. ಆಗ ಜೀವನ ಪರಿಣಾಮದಲ್ಲಿ ನಿರ್ಮಲತೆಯುಂಟಾಗುವುದು. ಜೈನಧರ್ಮದ ಮೇಲೂ, ಅದನ್ನುಪದೇಶಿಸುವ ಗುರುವಿನ ಮೇಲೂ ಶ್ರದ್ಧೆಯುಂಟಾಗುವುದು. ಈ ತರದ ಶ್ರದ್ಧೆಯುಂಟಾಗಲು ಜೀವನು ಮೋಕ್ಷಕ್ಕೆ ನಿಮಿತ್ತವಾದ ಚರಿತ್ರವನ್ನು ಬಯಸುವನು. ಚರಿತ್ರವನ್ನಾಚರಿಸುವುದಕ್ಕೆ ಸಮರ್ಥನಾಗುವವರೆಗೆ

ಆತನು ನಾಲ್ಕನೆಯ ಗುಣಸ್ಥಾನದಲ್ಲಿರುವನೆಂದು ತಿಳಿಯುವರು. ಮೊದಲನೆಯ ಗುಣಸ್ಥಾನದಿಂದ ಜೀವನು ಏರತೊಡಗಲು ಆತನು ಒಮ್ಮೆಲಿ ನಾಲ್ಕನೆಯ ಗುಣಸ್ಥಾನವನ್ನು ಹೊಂದುವನು. ಮೇಲೆ ಏರುವಾಗ ಎರಡನೆಯ ಮತ್ತು ಮೂರನೆಯ ಗುಣಸ್ಥಾನಗಳು ಪ್ರಾಪ್ತವಾಗುವುದಿಲ್ಲ. ನಾಲ್ಕನೆಯ ಗುಣಸ್ಥಾನದಿಂದ ಕೆಳಗೆ ಇಳಿಯುವಾಗ ಎರಡನೆಯ ಇಲ್ಲವೆ ಮೂರನೆಯ ಗುಣಸ್ಥಾನವನ್ನು ಹೊಂದುವನು. ನಾಲ್ಕನೆಯ ಗುಣಸ್ಥಾನದಲ್ಲಿ ಚರಿತ್ರವು ಇಲ್ಲವೆ ವ್ರತವು ಘಟಿಸುತ್ತಿದುವುದಿಲ್ಲ; ಕೇವಲ ಶ್ರದ್ಧೆಯೊಂದಿರುವುದು. ಈ ಗುಣಸ್ಥಾನವನ್ನು ಅವಿರತ ಸಮ್ಯಕ್ತ್ವವೆನ್ನುವರು. ಈ ಗುಣಸ್ಥಾನದಲ್ಲಿರುವ ಜೀವರನ್ನು ಅವಿರತ ಸಮ್ಯಗ್‌ದೃಷ್ಟಿಗಳೆನ್ನುವರು. ಈ ತರಗತಿಯ ಜೀವರು ಜೀವಹಿಂಸೆಯನ್ನಾಗಲಿ ಬೇರೆ ಪಾತಕವನ್ನಾಗಲಿ ಮಾಡುವುದಿಲ್ಲ. ಪಾಪಕರ್ಮವು ಘಟಿಸುವ ಪ್ರಸಂಗವು ಬಂದರೆ ಶಕ್ಯವಿದ್ದಮಟ್ಟಿಗೆ ಅದರಿಂದ ದೂರ ಇರುವುದಕ್ಕೆ ಪ್ರಯತ್ನಿಸುವರು.

ಎರಡನೆಯ ಮತ್ತು ಮೂರನೆಯ ತರಗತಿಗಳು ನಾಲ್ಕನೆಯ ಗುಣಸ್ಥಾನದಿಂದ ಕೆಳಗೆ ಇಳಿಯುವ ಜೀವನಿಗೆ ಉಂಟಾಗುವುವೆಂದು ಮೇಲೆ ಹೇಳಿದೆಯಷ್ಟೇ. ಅದು ಹೇಗೆಂದರೆ– ನಾಲ್ಕನೆಯ ಗುಣಸ್ಥಾನದಲ್ಲಿರುವಾಗ ಒಂದು ವೇಳೆ ಅನಂತಾನುಬಂಧಿ (ತೀವ್ರ) ಕಷಾಯಗಳುಂಟಾದರೆ ಜೀವನು ಅಲ್ಲಿಂದ ಕೆಳಗೆ ಇಳಿಯುವನು. ಮತ್ತು ಆಗ ಮಿಥ್ಯಾತ್ವಕರ್ಮದ ಉದಯವಾದರೆ ಮಿಥ್ಯಾತ್ವಗುಣಸ್ಥಾನಕ್ಕಿಳಿಯುವನು. ಆದರೆ ಕಷಾಯದಿಂದ ಕೆಳಗಿಳಿಯುವ ಜೀವನಿಗೆ ಮಿಥ್ಯಾತ್ವಕರ್ಮದ ಉದಯವಾಗದಿರಲು ಆತನು ಮೊದಲನೆಯ ಗುಣಸ್ಥಾನದ ವರೆಗೆ ಕೆಳಗಿಳಿಯುವದಿಲ್ಲ. ಅವನು ಇಳಿಯುವ ಆ ಸ್ಥಾನವನ್ನು ಸಾಸಾದನ ಗುಣಸ್ಥಾನವೆನ್ನುವರು ಅದು ಎರಡನೆಯ ಗುಣಸ್ಥಾನವು. ಮಿಥ್ಯಾತ್ವವು ಅರ್ಧದಷ್ಟು ಕಡಿಮೆಯಾಗಲು ಪರಿಣಾಮಗಳು ನಿರ್ಮಲವಾಗುವುವು. ಅದು ಮೂರನೆಯ ಗುಣಸ್ಥಾನವು. ಈ ಕಾಲದಲ್ಲಿ ಪರಿಣಾಮಗಳು ಅರ್ಧಶುದ್ಧವಾಗಿಯೂ ಅರ್ಧ ಮಲಿನವಾಗಿಯೂ ಇರುವುವು. ಈ ಮೂರನೆಯ ಗುಣಸ್ಥಾನವನ್ನು ಸಮ್ಯಗ್‌ಮಿಥ್ಯಾತ್ವ (ಮಿಶ್ರ)ವೆನ್ನುವರು.

ಜೀವನು ಮರಣವೊದಗಿದರೂ ತಾನು ಪಾಪವನ್ನಾಚರಿಸುವುದಿಲ್ಲವೆಂದು ಪ್ರತಿಜ್ಞೆ ಮಾಡಿದರೆ ಆತನು ಐದನೆಯ ಗುಣಸ್ಥಾನವನ್ನೇರಿದನೆಂದು ತಿಳಿಯಬೇಕು. ಈಗ ಆತನಿಗೆ ಶ್ರಾವಕನೆಂದು ಹೆಸರು ಬರುವುದು. ಜೀವನು ಈ ಅವಸ್ಥೆಯಲ್ಲಿ ಬಿಡಬೇಕಾಗಿರುವ ಮಹಾಪಾತಕಗಳು ಐದು; ಅವು ೧ ಹಿಂಸೆ, ೨ ಅಸತ್ಯ, ೩ ಚೌರ್ಯ, ೪ ಪರಸ್ತ್ರೀಸೇವನ, ೫ ಪರಿಗ್ರಹ ಮಮತ್ವ. ಶ್ರಾವಕನು * ಅಷ್ಟ

* ಅಷ್ಟ ಮೂಲಗುಣ– ಮದ್ಯ ಮಾಂಸ ಮಧುತ್ಯಾಗ (೩); ಅತ್ತಿ, ಆಲ, ಗೋಳಿ, ಬಸರಿ, ಅರಳಿ ಹಣ್ಣುಗಳನ್ನು ಬಿಡುವುದು (೫). ಸೇರಿ ಎಂಟು.

ಮೂಲಗುಣಗಳುಳ್ಳವನೂ ಅಣುವ್ರತ, ಗುಣವ್ರತ ಶಿಕ್ಷಾವ್ರತಗಳುಳ್ಳವನೂ ಆಗ ಬೇಕು. ಈ ಗುಣಸ್ಥಾನದಲ್ಲಿರುವ ಶ್ರಾವಕರಲ್ಲಿ ಹನ್ನೊಂದು ಪ್ರಕಾರಗಳುಂಟು. ಆ ಪ್ರಕಾರಗಳನ್ನು ಪ್ರತಿಮೆಗಳೆಂದೆನ್ನುವರು. ಪ್ರತಿಮೆಗಳ ವಿವರಣೆಯನ್ನು ಮುಂದಿನ ಭಾಗದಲ್ಲಿ ನೋಡಿರಿ.

ಹಿಂಸೆ, ಅಸತ್ಯ, ಚೌರ್ಯ, ಪರಸ್ತ್ರೀಸೇವನ, ಪರಿಗ್ರಹ ಮಮತ್ವ ಎಂಬೀ ಪಾತಕಗಳನ್ನು ಪೂರ್ಣವಾಗಿ ತ್ಯಾಗಮಾಡಿದರೆ ಆತನು ಆರನೆಯ ಗುಣಸ್ಥಾನಕ್ಕೆ ಶಕ್ಯವನಾಗುವನು. ಮೇಲೆ ಹೇಳಿದ ಪಂಚಪಾತಕಗಳನ್ನು ಸಂಪೂರ್ಣವಾಗಿ ತ್ಯಾಗ ಮಾಡುವುದು ಗೃಹಸ್ಥಾಶ್ರಮಿಗೆ ಶಕ್ಯವಾಗುವುದಿಲ್ಲ ಆದುದರಿಂದ ಆತನು ಗಾರ್ಹಸ್ಥ್ಯವನ್ನು ಬಿಟ್ಟು ಸಾಧು ಪದವನ್ನು ಹೊಂದಬೇಕಾಗುವುದು. ಎಂದ ಬಳಿಕ ಇದರ ಮುಂದಿನ ಗುಣಸ್ಥಾನಗಳು ಸಾಧುವಲ್ಲದವನಿಗೆ ಶಕ್ಯವಿಲ್ಲವೆಂದು ಹೇಳಿದಂತಾಗುವುದು. ಬಾಹ್ಯ ಪಾಪಗಳ ಸೂಕ್ಷ್ಮತೆಯನ್ನು ವಿಚಾರ ಮಾಡಲು ಉಡು ತೊಡುವ ಬಟ್ಟೆಗಳನ್ನು ಬಳಿಯಲ್ಲಿಟ್ಟುಕೊಳ್ಳುವುದರಿಂದಲೂ ಪಾಪವು ಘಟಿಸುವುದು. ಆದುದರಿಂದ ಪಾಪಗಳನ್ನು ಪೂರ್ಣವಾಗಿ ತ್ಯಾಗ ಮಾಡುವ ಸಾಧುವು ಬಟ್ಟೆಗಳನ್ನು ಕೂಡ ಬಿಡಬೇಕಾಗುವುದು. ಧರ್ಮದ ಇಲ್ಲವೆ ಜ್ಞಾನದ ಅಭಿವೃದ್ಧಿಗೆ ಸಾಧಕವಾದ ಪಿಂಛ, ಕಮಂಡಲು, ಪುಸ್ತಕ ಇವುಗಳನ್ನು ಇಟ್ಟುಕೊಳ್ಳಬಹುದು. ಇವುಗಳ ಹೊರತು ಧನ, ಧಾನ್ಯ, ಕುಟುಂಬ, ವಸ್ತ್ರ, ಪಾತ್ರೆ, ಅಲಂಕಾರ, ಸ್ತ್ರೀ ಮೊದಲಾದ ಎಲ್ಲ ವಸ್ತುಗಳನ್ನು ಬಿಟ್ಟು ಶರೀರ ಮಾತ್ರಧಾರಿಗಳಾದವರು ಸರ್ವಪಾಪತ್ಯಾಗಿಗಳಾಗುವರು. ಆಗ ಅವರನ್ನು ವೀತರಾಗರೆಂದು ಹೇಳುವರು. ಈ ಗುಣಸ್ಥಾನವನ್ನು ಮಹಾವ್ರತ ಇಲ್ಲವೆ ಪ್ರಮತ್ತ ವ್ರತವೆನ್ನುವರು.

ಇನ್ನು ಮುಂದೆ ಸಾಧುಗಳು ಏಕಾಗ್ರಚಿತ್ತರಾಗಿ ಧರ್ಮಧ್ಯಾನದಲ್ಲಿ ಆಸಕ್ತರಾಗುವರು. ಆಗ ಅವರು ಏಳನೆಯ ತರಗತಿಯನ್ನೈದುವರು. ಆಗ ಬಾಹ್ಯ ಚಲನ ವಲನ ಮೊದಲಾದ ಎಲ್ಲ ವ್ಯಾಪಾರಗಳು ನಿಲ್ಲುವಷ್ಟುಮಟ್ಟಿಗೆ ಅವರ ಇಚ್ಛೆ ಮಂದವಾಗುವುದು. ಈ ಗುಣಸ್ಥಾನವನ್ನು ಅಪ್ರಮತ್ತ (ಆತ್ಮನಲ್ಲಿ ಸಾವಧಾನನಾಗಿರುವುದು) ಎಂದು ಹೇಳುವರು.

ಇದಕ್ಕೂ ಮುಂದೆ ಆತ್ಮನಲ್ಲಿ ಶುದ್ಧಧ್ಯಾನವು ಆಗ ತೊಡಗುವುದು. ಆ ಗುಣಸ್ಥಾನವು ಅಪೂರ್ವ ಕರಣವೆಂಬ ಎಂಟನೆಯ ಗುಣಸ್ಥಾನವು.

ಅಶುದ್ಧ ಆತ್ಮಧ್ಯಾನದ ಬಲದಿಂದ ಮೈಥುನಭಾವನಾ ಜನಕವಾದ ಮಲಿನ ಪರಿಣಾಮಗಳನ್ನು ನಾಶಗೊಳಿಸುವ ಶಕ್ತಿಯು ಉಂಟಾಗುವುದು. ಈ ಸ್ಥಿತಿಯು ಅನಿವೃತ್ತಿಕರಣವೆಂಬ ೯ನೆಯ ಗುಣಸ್ಥಾನವು.

ಎಂಟನೆಯ ಒಂಬತ್ತನೆಯ ಗುಣಸ್ಥಾನಗಳಲ್ಲಿ ಆಗುತ್ತಿರುವ ಶುಕ್ಲ ಧ್ಯಾನಕ್ಕಿಂತ ಹೆಚ್ಚು ಉತ್ತಮವಾದ ಧ್ಯಾನವು ಆರಂಭವಾಗಲು ಆ ಸಮಯದಲ್ಲಿ ಸ್ವಲ್ಪ ಪ್ರಮಾಣದಿಂದ ಸೂಕ್ಷ್ಮಲೋಭವೆಂಬ ಕಷಾಯವು ಮಾತ್ರ ಉಳಿಯುವುದು. ಬೇರೆ ಎಲ್ಲ ಕಷಾಯಗಳ ನಾಶವಾಗುವುದು. ಈ ಮೇರೆಗೆ ಎಲ್ಲ ಕಷಾಯಗಳ ನಾಶವಾಗಲು ಹತ್ತನೆಯ ಗುಣಸ್ಥಾನವು ಪ್ರಾಪ್ತವಾಗುವುದು. ಇದರಲ್ಲಿ ಪರಿಣಾಮಗಳು ಮತ್ತಿಷ್ಟು ನಿರ್ಮಲವಾಗುವುವು. ಉಳಿದಂತಹ ಸೂಕ್ಷ್ಮಲೋಭವು ಕೂಡ ನಾಶಹೊಂದತೊಡಗುವುದು. ಈ ಅವಸ್ಥೆಗೆ ಸೂಕ್ಷ್ಮಲೋಭ ಇಲ್ಲವೆ ಸೂಕ್ಷ್ಮಸಾಂಪರಾಯವೆಂಬ ಹೆಸರು.

ಎಂಟನೆಯ ಗುಣಸ್ಥಾನದಿಂದ ಜೀವನ ಪರಿಣಾಮಗಳು ಎರಡು ವಿಧವಾಗುವುವು. ಅವುಗಳಲ್ಲಿ ಮೊದಲನೆಯ ತರದ ಪರಿಣಾಮದಿಂದ ರಾಗದ್ವೇಷಾದಿಗಳಿಗೆ ಕಾರಣೀಭೂತವಾದ ಕರ್ಮಗಳ ಉದಯವು ನಿಂತುಹೋಗುವುದು. ಆದರೆ ಇದ್ದ ಕರ್ಮಗಳ ನಾಶವಾಗುವುದಿಲ್ಲ ಎರಡನೆಯ ತರದ ಪರಿಣಾಮಗಳಿಂದ ಆ ಕರ್ಮಗಳ ನಾಶಕ್ಕೆ ಪ್ರಾರಂಭವಾಗುವುದು. ನಾಶವನ್ನು ಮಾಡುವ ಪರಿಣಾಮಗಳನ್ನು ಧರಿಸುವ ಜೀವನು ಹತ್ತನೆಯ ಗುಣಸ್ಥಾನದ ಕೊನೆಯವರೆಗೆ ಸೂಕ್ಷ್ಮಲೋಭದ ಉದಯವನ್ನು ಮಾತ್ರ ನಿಲ್ಲಿಸುವನು. ಆದುದರಿಂದ ಆತನು ಪರಮ ಶಾಂತದೆಶೆಯನ್ನು ಹೊಂದಿ ಹನ್ನೊಂದನೆಯ ಗುಣ ಸ್ಥಾನವನ್ನು ಹೊಂದುವನು. ಇದಕ್ಕೆ ಉಪಶಾಂತಕಷಾಯವೆಂದು ಹೆಸರು. ಈ ಮೇರೆಗೆ ಎಂಟನೆಯದರಿಂದ ಹನ್ನೊಂದನೆಯ ಗುಣಸ್ಥಾನದ ವರೆಗೆ ಹೋಗುವುದು ಉಪಶಮ ಶ್ರೇಣಿಯೆನಿಸುವುದು.

ಈ ಮೇರೆಗೆ ಹನ್ನೊಂದನೆಯ ಗುಣಸ್ಥಾನದ ವರೆಗೆ ಏರಿದವನು ಕೂಡ ಒಮ್ಮೊಮ್ಮೆ ಮತ್ತೆ ಕೆಳಗೆ ಬಿದ್ದು ಆರನೆಯ ಗುಣಸ್ಥಾನದಲ್ಲಿ ನಿಲ್ಲುವನು. ಇಲ್ಲವೆ ಮೊದಲನೆಯ ಗುಣಸ್ಥಾನದವರೆಗೂ ಇಳಿಯುವನು.

ಎಂಟನೆಯ ಗುಣಸ್ಥಾನದಿಂದ ಕರ್ಮನಾಶ ಮಾಡುವುದಕ್ಕೆ ಆರಂಭಿಸಿದ ಜೀವನು ಹತ್ತನೆಯ ಗುಣಸ್ಥಾನದ ಕೊನೆಯ ವರೆಗೆ ಸೂಕ್ಷ್ಮಲೋಭವನ್ನು ನಾಶಪಡಿಸಿ ನಿರ್ಮಲತೆಯನ್ನು ಹೊಂದುವನು. ಆದರಿಂದ ಹನ್ನೊಂದನೆಯ ಗುಣಸ್ಥಾನದ ಮುಂದಿನದನ್ನು ಪಡೆಯುವರು. ಈ ಹನ್ನೆರಡನೆಯ ಗುಣಸ್ಥಾನವನ್ನು ಕ್ಷೀಣಕಷಾಯವೆನ್ನುವರು. ಎಂಟರಿಂದ ಮುಂದೆ ಕರ್ಮನಾಶಮಾಡುತ್ತ ಹೋಗುವವರಿಗೆ ಕ್ಷಪಣಾಕ ಶ್ರೇಣಿಯನ್ನೇರುವವರೆಂದೆನ್ನುವರು. ಏಳರಿಂದ ಹನ್ನೆರಡನೆಯ ಗುಣಸ್ಥಾನದ ವರೆಗೆ ಹೋಗುವದಕ್ಕೆ ಬಹಳ ಸ್ವಲ್ಪ ವೇಳೆ ಹಿಡಿಯುವುದು. ಎರಡು ಗಳಿಗೆಯ ಒಳಗೆ ಹನ್ನೆರಡನೆಯ ಗುಣಸ್ಥಾನದ ಕೊನೆಯ ತನಕ ಹೋಗುವರು. ಈ ಹನ್ನೆರಡನೆಯ ಗುಣಸ್ಥಾನದಲ್ಲಿ ಜ್ಞಾನದರ್ಶನಬಲಗಳನ್ನು ನಾಶಗೊಳಿಸುವ ಜ್ಞಾನಾವರಣ ದರ್ಶನಾವರಣ ಅಂತರಾಯ ಈ ಮೂರು

ಕರ್ಮಗಳು ಪೂರ್ಣ ನಾಶಹೊಂದಿದ ಕೂಡಲೆ ಆತ್ಮನಲ್ಲಿ ಪೂರ್ಣಜ್ಞಾನವೂ ಪೂರ್ಣ ದರ್ಶನವೂ ಪೂರ್ಣ ಆತ್ಮಬಲವೂ ಪ್ರಕಟ-ಾಗುವುವು. ಆಗ ಹದಿಮೂರನೆಯ ಗುಣಸ್ಥಾನವು ಪ್ರಾಪ್ತವಾಗುವುದು. ಈ ಸಮಯಕ್ಕೆ ಜೀವನು ಪೂರ್ಣ ಜ್ಞಾನವುಳ್ಳವನಾಗುವುದರಿಂದ ಜಗತ್ತಿನೊಳಗಿನ ಎಲ್ಲ ಚರಾಚರ ವಸ್ತುಗಳಜ್ಞಾನವು ಆತನಿಗೆ ಉಂಟಾಗುವುದು; ಇದೇ ಕೇವಲಜ್ಞಾನವು. ರಾಗದ್ವೇಷಾದಿ ಭಾವಗಳನ್ನುಂಟುಮಾಡುವ ಕರ್ಮಗಳನ್ನು ಚಾರಿತ್ರಮೋಹನೀಯಗಳೆನ್ನುವರು. ಇವುಗಳ ನಾಶವು ಹತ್ತನೆಯ ಗುಣಸ್ಥಾನದಲ್ಲಿ ಆಗಿರುವುದು. ಆದದರಿಂದ ಹತ್ತರಿಂದ ಮುಂದಿನ ಸ್ಥಾನಗಳಲ್ಲಿ ಆತ್ಮನಲ್ಲಿ ಪೂರ್ಣನಿರ್ಮಲತೆ ತಲೆದೋರುವುದು. ಅದನ್ನು ಪೂರ್ಣ ಚಾರಿತ್ರವೆನ್ನುವರು. ಈ ಗುಣಸ್ಥಾನದಲ್ಲಿರುವವರು ಅಖಂಡ ಚಾರಿತ್ರವೂ ಪೂರ್ಣಜ್ಞಾನವೂ ಪ್ರಾಪ್ತವಾಗಿರುವುದರಿಂದ ಉಪದೇಶವನ್ನು ಮಾಡುವರು. ಮತ್ತು ಅಲ್ಲಿ ಇಲ್ಲಿ ಸಂಚರಿಸುವರು. ಅವರನ್ನು ಪರಮಧಾನಿಗಳೆನ್ನುವರು. ರಾಗದ್ವೇಷಗಳು ಅವರಲ್ಲಿ ಉಳಿಯದಿರುವುದರಿಂದ ಇವರು ಯಾರ ಮೇಲೂ ಪಕ್ಷಪಾತವಿಲ್ಲದೆ ಎಲ್ಲರಿಗೂ ಸತ್ಯಮಾರ್ಗವನ್ನು ಉಪದೇಶಿಸುವರು. ಇವರೇ ಧರ್ಮದಲ್ಲಿ ಪರಮಗುರುಗಳು; ಪರಮದೇವತೆಗಳು; ಭಗವಂತರಾದ ಅರ್ಹಂತರೂ ಇವರೇ. ಇವರಲ್ಲಿ ಆತ್ಮಧ್ಯಾನದ ಬಲವು ಪ್ರಕಟವಾಗಿರುವುದರಿಂದಲೂ ದುಃಖದಾಯಕವಾದ ಚಾರಿತ್ರಮೋಹನಿಯ ಕರ್ಮದ ನಾಶವಾಗಿರುವುದರಿಂದಲೂ ಹಸಿವೆ ಇರುವುದಿಲ್ಲ; ನೀರಡಿಕೆ ಇರುವುದಿಲ್ಲ; ಅಂಜಿಕೆ ಬಳಲಿಕೆಗಳು ಇರುವುದಿಲ್ಲ. ಈ ತರದ ಉತ್ತಮ ಸುಖಮಯ ಅವಸ್ಥೆಯು ಪ್ರಾಪ್ತವಾಗುವುದು.

ಮಾತುಗಳನ್ನಾಡುವುದರಿಂದಲೂ ಅಲ್ಲಿ ಇಲ್ಲಿ ತಿರುಗಾಡುವುದರಿಂದಲೂ ಉಂಟಾಗುತ್ತಿದ್ದ ಚಂಚಲತೆಯನ್ನು ಶರೀರತ್ಯಾಗವು ಸಮೀಪಿಸಿದಾಗ ಕ್ರಮದಿಂದ ಬಿಡತೊಡಗುವರು. ಕ್ರಮದಿಂದ ಕಡಿಮೆಯಾಗುತ್ತ ಪೂರ್ಣನಿಶ್ಚಲತೆಯು ಪ್ರಾಪ್ತವಾಗಲು ಹದಿನಾಲ್ಕನೆಯ ಗುಣಸ್ಥಾನವು ಪ್ರಾಪ್ತವಾಗುವುದು. ಇದೇ ಕೊನೆಯ ತರಗತಿಯು. ಆತ್ಮಚಂಚಲತೆಗೆ ಯೋಗವೆಂಬ ಹೆಸರಿರುವುದರಿಂದ ಈ ಗುಣಸ್ಥಾನಕ್ಕೆ ಅಯೋಗಕೇವಲವೆಂದೂ ಇದಕ್ಕೂ ಮೊದಲು ಚಂಚಲತೆಯು ಇದ್ದುದರಿಂದ ಹದಿಮೂರನೆಯ ಗುಣಸ್ಥಾನಕ್ಕೆ ಸಯೋಗಕೇವಲವೆಂದೂ ಹೆಸರು.

ಹತ್ತನೆಯ ಗುಣಸ್ಥಾನದ ಮುಂದೆ ಹೊಸ ಕರ್ಮಗಳ ಬಂಧವು ಕಟ್ಟಾಗುವುದು. ಆದರೆ ಮೊದಲೇ ಸಂಬದ್ಧವಾದ ಸರ್ವ ಪ್ರಬಲ ಕರ್ಮಗಳ ನಾಶವು ೧೨ನೆಯ ಗುಣಸ್ಥಾನದ ವರೆಗೆ ಆಗುವುದು. ಅಲ್ಲಿಂದ ಮುಂದೆ ಸಣ್ಣ ಸಣ್ಣ ಕರ್ಮಗಳ ನಾಶವಾಗುತ್ತ ಆಗುತ್ತ ಹದಿನಾಲ್ಕನೆಯ ಗುಣಸ್ಥಾನದ ಕೊನೆಗೆ ಎಲ್ಲ ಕರ್ಮಗಳ ನಾಶವಾಗುವುದು. ಆಗ ಯಾವ ಕರ್ಮವೂ ಉಳಿಯುವುದಿಲ್ಲ. ಆಗ ಶರೀರವೂ ಉಳಿಯುವುದಿಲ್ಲ. ಯಾವತರದ ಮಲಿನತೆಯೂ ಉಳಿಯುವುದಿಲ್ಲ.

ಈ ಸಮಯದಲ್ಲಿ ಜೀವನು ಪವಿತ್ರನಾಗಿ ಶರೀರವನ್ನು ಬಿಟ್ಟು ಹೊರಟು ಹೋಗುವನು. ಮೇಲೆ ಹೋಗುತ್ತ ಹೋಗುತ್ತ ಲೋಕದ ಮೇಲ್ಗಡೆಗೆ ಹೋಗಿ ಅಲ್ಲಿ ಸ್ಥಿರವಾಗಿ ನಿಲ್ಲುವನು. ಅಲ್ಲಿ ಅನಂತಸುಖಿಯೂ ಅನಂತಜ್ಞಾನಿಯೂ ಅನಂತಬಲನೂ ಕ್ಷಾಯಿಕ ಸಮ್ಯಕ್ತ್ವಸಹಿತನೂ ಆಗುವನು. ಇವರಿಗೆ ಸಿದ್ಧಪರಮೇಷ್ಠಿಗಳೆಂದೂ, ಮುಕ್ತ ಜೀವರೆಂದೂ ಹೆಸರು. ಇದೇ ಮೋಕ್ಷಸುಖವು. ಸಂಸಾರಿ ಜೀವನು ಕ್ರಮದಿಂದ ಈ ಹದಿನಾಲ್ಕು ಗುಣಸ್ಥಾನಗಳನ್ನು ಏರುತ್ತ ನಡೆದರೆ ಕೊನೆಗೆ ಮೋಕ್ಷಹೊಂದುವನು. ಇದು ಶಾಶ್ವತ ಸುಖವು. ಇದನ್ನು ಹೊಂದಿದವನು ಮತ್ತೆ ಸಂಸಾರವನ್ನು ಹೊಂದುವುದಿಲ್ಲ. ಆತನಿಗೆ ಪುನರಾವೃತ್ತಿ ಇಲ್ಲ.

---

## ಹನ್ನೊಂದು ಪ್ರತಿಮೆಗಳು.

ಐದನೆಯ ಗುಣಸ್ಥಾನದಲ್ಲಿರುವ ಶ್ರಾವಕರಲ್ಲಿ ಹನ್ನೊಂದು ಪ್ರಕಾರಗಳು ಇಲ್ಲವೆ ಪ್ರತಿಮೆಗಳುಂಟೆಂದು ಹಿಂದೆ ಹೇಳಿದೆಯಷ್ಟೇ. ಶ್ರಾವಕನು ಧರ್ಮಮಾರ್ಗದಲ್ಲಿ ಉನ್ನತಿಯನ್ನು ಹೊಂದುವಾಗ ಈ ಹನ್ನೊಂದರಲ್ಲಿ ಒಂದನೆಯ ಪ್ರತಿಮೆಯಿಂದ ಎರಡನೆಯದನ್ನು, ಎರಡನೆಯದರಿಂದ ಮೂರನೆಯದನ್ನು ಹೊಂದುತ್ತ ಹೋಗುವನು. ಹೀಗೆ ಹನ್ನೊಂದನೆಯ ಪ್ರತಿಮೆಯನ್ನು ಹೊಂದಿದ ಬಳಿಕ ಆತನು ಸಾಧುವೆನಿಸಿಕೊಳ್ಳುವನು. ಮುಂದುಮುಂದಿನ ತರಗತಿಯನ್ನು ಹೊಂದಿದ ಹಾಗೆ ಹಿಂದಿನ ತರಗತಿಯ ಕ್ರಿಯೆಗಳ ಸಂಬಂಧವೂ ಇರಬೇಕಾಗುವುದು.

೧ ದರ್ಶನಪ್ರತಿಮೆ:- ಸಮ್ಯಗ್ದರ್ಶನದೊಡನೆ ಎಂಟು ಮೂಲಗುಣಗಳನ್ನು ಧರಿಸುವುದೂ, ಸಪ್ತವ್ಯಸನಗಳ ತ್ಯಾಗಮಾಡುವುದೂ ದರ್ಶನಪ್ರತಿಮೆಯೆನಿಸುವುದು. ಈ ಪ್ರತಿಮೆಯಲ್ಲಿ ದರ್ಶನಿಕ ಶ್ರಾವಕನೆನಿಸಿಕೊಳ್ಳುವನು. ಈತನು ಯಾವಾಗಲೂ ಸಂಸಾರದಲ್ಲಿ ಉದಾಸೀನನೂ ದೃಢನಿಶ್ಚಯದವನೂ ಫಲಾಪೇಕ್ಷೆಯಿಲ್ಲದವನೂ ಆಗಿರುವನು.

೨ ವ್ರತಪ್ರತಿಮೆ:- ಐದು ಅಣುವ್ರತಗಳನ್ನೂ ಮೂರು ಗುಣವ್ರತಗಳನ್ನೂ ನಾಲ್ಕು ಶಿಕ್ಷಾವ್ರತಗಳನ್ನೂ ಪಾಲಿಸುವುದು ವ್ರತಪ್ರತಿಮೆಯೆನಿಸುವುದು. ಈ ಪ್ರತಿಮೆಯಲ್ಲಿರುವವನು ವ್ರತಿಕ ಶ್ರಾವಕನೆನಿಸಿಕೊಳ್ಳುವನು.

೩ * ಸಾಮಾಯಿಕ ಪ್ರತಿಮೆ:- ಪ್ರತಿದಿವಸ ಪ್ರಾತಃಕಾಲ ಮಧ್ಯಾಹ್ನಕಾಲ ಸಾಯಂಕಾಲಗಳಲ್ಲಿ ಅತೀಚಾರಗಳನ್ನು ಬಿಟ್ಟು ವಿಧಿಪೂರ್ವಕವಾಗಿ ಸಾಮಾಯಿಕವನ್ನು ಆಚರಿಸುವುದು ಸಾಮಾಯಿಕ ಪ್ರತಿಮೆಯೆನಿಸುವುದು.

೪ ಪ್ರೋಷಧೋಪವಾಸ ಪ್ರತಿಮೆ:- ಪ್ರತಿ ಅಷ್ಟಮಿ ಚತುರ್ದಶಿಗಳಲ್ಲಿ ೧೬ ಪ್ರಹರಗಳ ವರೆಗೆ ಅತೀಚಾರರಹಿತ ಉಪವಾಸವನ್ನು ಎಂದರೆ ಪ್ರೋಷಧೋಪವಾಸವನ್ನು ಮಾಡಬೇಕು. ಮನೆಮಾರು ವ್ಯಾಪಾರ ವ್ಯವಹಾರ ಭೋಗೋಪಭೋಗ ಇವುಗಳನ್ನು ಬಿಟ್ಟು ಏಕಾಂತದಲ್ಲಿ ಕುಳಿತು ಧರ್ಮಧ್ಯಾನಮಾಡಬೇಕು. ಇದು ಪ್ರೋಷಧೋಪವಾಸ ಪ್ರತಿಮೆಯೆನಿಸುವುದು.

೫ ಸಚಿತ್ತವಿರತ ಪ್ರತಿಮೆ:- ಹಸಿಯಾದ ಕಾಯಿಪಲ್ಯ ಹಣ್ಣು ಹೂ ಬೀಜ ಎಲೆ ಮೊದಲಾದುವನ್ನು ತಿನ್ನದಿರುವುದು ಸಚಿತ್ತವಿರತ ಪ್ರತಿಮೆಯು.

೬ ರಾತ್ರಿ ಭೋಜನವಿರತ ಪ್ರತಿಮೆ.- ಕೃತ, ಕಾರಿತ, ಅನುಮತರೂಪವಾಗಿ ಮತ್ತು ಮನೋವಚಃಕಾಯಗಳಿಂದ ರಾತ್ರಿಯಲ್ಲಿ ಎಲ್ಲ ತರದ ಆಹಾರವನ್ನು ಬಿಡುವುದು ರಾತ್ರಿ ಭೋಜನವಿರತ ಪ್ರತಿಮೆಯು ಅದರಲ್ಲಿ ಸೂರ್ಯಾಸ್ತವಾಗುವುದಕ್ಕೆ ಮುಂಚೆ ೨ ಘಳಿಗೆ ಇರುವಾಗಳಿಂದ ಸೂರ್ಯೋದಯವಾಗಿ ೨ ಘಳಿಗೆಯಾಗುವರೆಗೆ ಅನ್ನೋದಕಗಳನ್ನು ಬಿಡಬೇಕಾಗುವುದು.

೭ ಬ್ರಹ್ಮಚರ್ಯಪ್ರತಿಮೆ.- ಮನೋವಚಃಕಾಯಗಳಿಂದ ಸ್ತ್ರೀಮಾತ್ರತ್ಯಾಗವು ಬ್ರಹ್ಮಚರ್ಯ ಪ್ರತಿಮೆಯು

೮ ಆರಂಭವಿರತಪ್ರತಿಮೆ:- ಕೃತ ಕಾರಿತ ಅನುಮತರೂಪವಾಗಿ ಗೃಹಕಾರ್ಯಸಂಬಂಧವಾಗಿ ಸರ್ವ ಪ್ರಕಾರದ ಕ್ರಿಯೆಗಳನ್ನು ಬಿಡುವುದು ಆರಂಭವಿರತಪ್ರತಿಮೆಯು. ಈ ಪ್ರತಿಮೆಲ್ಲಿರುವವರು ಸ್ನಾನದಾನಪೂಜನಗಳನ್ನು ಮಾಡಬಹುದು.

---

೧ ಸಾಮಾಯಿಕ— ಮೊದಲು ಪೂರ್ವಾಭಿಮುಖವಾಗಿ ನಿಂತು ಒಂದು ಆವರ್ತನ ಮತ್ತು ಒಂದು ನಮಸ್ಕಾರ ಇವುಗಳನ್ನು ಮಾಡಬೇಕು. ಬಳಿಕ ಕ್ರಮದಿಂದ ದಕ್ಷಿಣ, ಪಶ್ಚಿಮ, ಉತ್ತರ ದಿಕ್ಕುಗಳಿಗೆ ಮೂರು ಆವರ್ತನ ಒಂದೊಂದು ನಮಸ್ಕಾರ ಇವುಗಳನ್ನು ಮಾಡಬೇಕು. ಬಳಿಕ ಪೂರ್ವಕ್ಕೆ ತಿರುಗಿ ನಿಲ್ಲಬೇಕು ಇಲ್ಲವೆ ಕುಳ್ಳಿರಬೇಕು. ಮನೋವಾಕ್ಕಾಯಗಳನ್ನು ಪರಿಶುದ್ಧವಾಗಿ ಮಾಡಿ ಪಂಚ ವಿಧ ಪಾಪಗಳನ್ನು ಬಿಟ್ಟು ಸಾಮಾಯಿಕ ಪಾಠಗಳನ್ನು ಅನ್ನಬೇಕು. ಮತ್ತು ಮಂತ್ರ ಜಪ ಇಲ್ಲವೆ ಜಿನಸ್ವಾಮಿಯ ಶಾಂತಮುದ್ರೆಯ ಧ್ಯಾನ ಇಲ್ಲವೆ ಶುದ್ಧವಾದ ಆತ್ಮಸ್ವರೂಪ ಇಲ್ಲವೆ ಕರ್ಮದ ಉದಯರೂಪ ರಸದ ಧ್ಯಾನಮಾಡಬೇಕು. ಈ ಸಾಮಾಯಿಕ ಮಾಡುವ ಅವಧಿಯು ಉತ್ತಮ ಮಧ್ಯಮಾಧಮ ಕ್ರಮದಿಂದ ೬, ೪, ೨ ಘಳಿಗೆಯದಿರುವುದು.

೯ ಪರಿಗ್ರಹವಿರತಪ್ರತಿಮೆ:- ಧನಧಾನ್ಯಾದಿ ಪರಿಗ್ರಹಗಳು ಬಂಧಕಾರಣವೆಂದು ಗ್ರಹಿಸಿ, ಉತ್ಸಾಹಪೂರ್ವಕವಾಗಿ ಅವುಗಳ ತ್ಯಾಗಮಾಡುವುದು ಪರಿಗ್ರಹವಿರತಪ್ರತಿಮೆಯು.

೧೦ ಅನುಮತಿವಿರತಪ್ರತಿಮೆ:- ಗೃಹಸ್ಥಾಶ್ರಮದ ಯಾವ ಕಾರ್ಯಕ್ಕಾಗಿಯೂ ಅನುಮತಿಯನ್ನು ಕೊಡದಿರುವುದು ಅನುಮತವಿರತಪ್ರತಿಮೆಯು. ಈ ಪ್ರತಿಮೆಯನ್ನು ಧರಿಸುವವನು ಉದಾಸೀನನಾಗಿ ಮನೆಯಲ್ಲಿ ಇಲ್ಲವೆ ದೇವಾಲಯ ಮಠ ಮೊದಲಾದ ಕಡೆಯಲ್ಲಿ ವಾಸಿಸುವನು. ಮನೆಯವರು ಇಲ್ಲವೆ ಬೇರೆ ಶ್ರಾವಕರು ಊಟಕ್ಕೆ ಕರೆದರೆ ಹೋಗಿ ಊಟಮಾಡಿ ಬರುವನು. ಆದರೆ ತನ್ನ ಸಲುವಾಗಿ ಇಂತಹ ಅಡಿಗೆಯನ್ನು ಮಾಡಿರಿ ಎಂದು ಹೇಳುವುದಿಲ್ಲ.

೧೧ ಉದ್ದಿಷ್ಟ ವಿರತಪ್ರತಿಮೆ:- ಮನೆಯನ್ನು ಬಿಟ್ಟು ಅಡವಿಯಲ್ಲಿ ಇಲ್ಲವೆ ಮಠದಲ್ಲಿ ತಪಸ್ಸನ್ನಾಚರಿಸುತ್ತ ವಾಸಿಸುವುದು, ಅಪೂರ್ಣ ವಸ್ತ್ರವನ್ನು ಧರಿಸುವುದು, ಯಾಚನೆಯಿಲ್ಲದೆ ಭಿಕ್ಷಾಲಬ್ಧವಾದ ಯೋಗ್ಯ ಆಹಾರವನ್ನು ಸೇವಿಸುವುದು ಇದು ಉದ್ದಿಷ್ಟವಿರತಪ್ರತಿಮೆಯೆನಿಸುವುದು. ಈ ಪ್ರತಿಮೆಯನ್ನು ಧರಿಸುವವರಲ್ಲಿ ಕ್ಷುಲ್ಲಕ, ಐಲಕ, ಎಂದು ಎರಡು ಪ್ರಕಾರಗಳುಂಟು. ಐಲಕನು ಕೌಪೀನಧಾರಿಯಾಗಿರುವನು. ಕ್ಷುಲ್ಲಕನು ಕೌಪೀನ, ಖಂಡವಸ್ತ್ರಧಾರಿಯಾಗಿರುವನು

---

## ೭ ತ್ರಿಷಷ್ಟಿ ಶಲಾಕಾಪುರುಷರು.

ಪ್ರಥಮಾನುಯೋಗಶಾಸ್ತ್ರದಲ್ಲಿ ೬೩ ಜನ ಶಲಾಕಾಪುರುಷರ ವರ್ಣನೆಯುಂಟು. ಇವರು ಮಹಾಪುರುಷರು; ಅದೇ ಜನ್ಮದಲ್ಲಿ ಇಲ್ಲವೆ ಮುಂದಿನ ಯಾವದೊಂದು ಜನ್ಮದಲ್ಲಿ ಮೋಕ್ಷವನ್ನೈದುವರು. ೨೪ ಜನ ತೀರ್ಥಂಕರರು, ೧೨ ಜನ ಚಕ್ರವರ್ತಿಗಳು, ೯ ಜನ ನಾರಾಯಣರು, ೯ ಜನ ಪ್ರತಿನಾರಾಯಣರು, ೯ ಜನ ಬಲಭದ್ರರು, ಸೇರಿ ಅರವತ್ತು ಮೂವರಾಗುವರು. ಚತುರ್ಥ ಕಾಲದ ಆರಂಭದಿಂದ ಕೊನೆಯವರೆಗೆ ಇವರು ಆಗಿ ಹೋದರು.

ತೀರ್ಥಂಕರರು:- ಇವರು ೨೪ ಜನರು. ಭೂತಕಾಲದಲ್ಲಿ ೨೪ ಜನರೂ, ವರ್ತಮಾನ ಕಾಲದಲ್ಲಿ ೨೪ ಜನರೂ, ಭವಿಷ್ಯತ್ಕಾಲದಲ್ಲಿ ೨೪ ಜನರೂ ಆಗುವರು. ಮೂರೂ ಕಾಲಗಳ ತೀರ್ಥಂಕರರ ಪರಿಚಯವನ್ನು ಮಾಡಿಕೊಡುವ ಕೋಷ್ಟಕಗಳನ್ನು ಕೆಳಗೆ ಕೊಟ್ಟಿದ್ದೇವೆ.

## ವರ್ತಮಾನಕಾಲದ ೨೪ ಜನ ತೀರ್ಥಂಕರರು.

| ಅ. ಕ್ರ | ಹೆಸರು | ಪೂರ್ವಜನ್ಮದ ಜನ್ಮಸ್ಥಾನ | ಜನ್ಮ ನಗರ | ತಂದೆ | ತಾಯಿ | ದೇಹದ ಉನ್ನತಿ. ಬಿಲ್ಲು | ದೇಹದ ಬಣ್ಣ |
|---|---|---|---|---|---|---|---|
| ೧ | ಋಷಭ | ಸರ್ವಾರ್ಥಸಿದ್ಧಿ | ಅಯೋಧ್ಯೆ | ನಾಭಿರಾಜ | ಮರುದೇವಿ | ೫೦೦ | ಹೊಂಬಣ್ಣ |
| ೨ | ಅಜಿತ | ವೈಜಯಂತ | ,, | ಜಿತಶತ್ರು | ವಿಜಯಸೇನೆ | ೪೫೦ | ,, |
| ೩ | ಶಂಭವ | ಗ್ರೈವೇಯಕ | ಶ್ರಾವಸ್ತಿ | ಜಿತಾರಿ | ಸುಷೇಣೆ | ೪೦೦ | ,, |
| ೪ | ಅಭಿನಂದನ | ವೈಜಯಂತ | ಅಯೋಧ್ಯೆ | ಸಂವರ | ಸಿದ್ಧಾರ್ಥೆ | ೩೫೦ | ,, |
| ೫ | ಸುಮತಿ | ಊರ್ಧ್ವಗ್ರೈವೇಯಕ | ,, | ಮೇಘಪ್ರಭ | ಸುಮಂಗಲೆ | ೩೦೦ | ,, |
| ೬ | ಪದ್ಮಪ್ರಭ | ವೈಜಯಂತ | ಕೌಶಾಂಬಿ | ಧಾರಣ | ಸುಸೀಮೆ | ೨೫೦ | ಕಮಲವರ್ಣ |
| ೭ | ಸುಪಾರ್ಶ್ವನಾಥ | ಮಧ್ಯಗ್ರೈವೇಯಕ | ಕಾಶಿ | ಸುಪ್ರತಿಷ್ಠ | ಪೃಥ್ವಿ | ೨೦೦ | ಪ್ರಿಯಂಗು (ಹಸರು) |
| ೮ | ಚಂದ್ರಪ್ರಭ | ವೈಜಯಂತ | ಚಂದ್ರಪುರಿ | ಮಹಾಸೇನ | ಲಕ್ಷ್ಮಣೆ | ೧೫೦ | ಶುಭ್ರ |
| ೯ | ಪುಷ್ಪದಂತ | ಅಪರಾಜಿತ | ಕಾಕಂದಿ | ಸುಗ್ರೀವ | ಜಯರಾಮೆ | ೧೦೦ | ,, |
| ೧೦ | ಶೀತಲ | ಆರಣಸ್ವರ್ಗ | ಭದ್ರಕಾಪುರಿ | ದೃಢರಥ | ಸುನಂದೆ | ೯೦ | ಹೊಂಬಣ್ಣ |
| ೧೧ | ಶ್ರೇಯಾಂಸ | ಪುಷ್ಪೋತ್ತರ | ಸಿಂಹಪುರಿ | ವಿಷ್ಣು | ವಿಷ್ಣುಶ್ರೀ | ೮೦ | ,, |
| ೧೨ | ವಾಸುಪೂಜ್ಯ | ಕಾಪಿಷ್ಟಸ್ವರ್ಗ | ಚಂಪಾಪುರಿ | ವಾಸು | ವಿಜಯೆ | ೭೦ | ಆರಕ್ತ |
| ೧೩ | ವಿಮಲ | ಶುಕ್ರಸ್ವರ್ಗ | ಕಪಿಲೆ | ಕೃತವರ್ಮ | ಸುರಮ್ಯ ಜಯಭಾಮೆ | ೬೦ | ಹೊಂಬಣ್ಣ |
| ೧೪ | ಅನಂತನಾಥ | ಸಹಸ್ರಾರ (ಸ್ವರ್ಗ) | ಅಯೋಧ್ಯೆ | ಸಿಂಹಸೇನ | ಸರ್ವಯಶ (ಜಯಶ್ಯಾಮೆ) | ೫೦ | ,, |
| ೧೫ | ಧರ್ಮನಾಥ | ಪುಷ್ಪೋತ್ತರ ವಿಮಾನ | ರತ್ನಪುರಿ | ಭಾನು | ಸುಪ್ರಭೆ | ೪೫ | ,, |
| ೧೬ | ಶಾಂತಿನಾಥ | ,, | ಹಸ್ತಿನಾಪುರ | ವಿಶ್ವಸೇನ | ಐರಾದೇವಿ (ಅಜಿತೆ) | ೪೦ | ,, |
| ೧೭ | ಕುಂಥುನಾಥ | ,, | ,, | ಸೂರ್ಯ | ಶ್ರೀಕಾಂತೆ | ೩೫ | ,, |
| ೧೮ | ಅರನಾಥ | ಸರ್ವಾರ್ಥಸಿದ್ಧಿ | ,, | ಸುದರ್ಶನ | ಮಿತ್ರಸೇನೆ | ೩೦ | ,, |
| ೧೯ | ಮಲ್ಲಿನಾಥ | ವಿಜಯ ವಿಮಾನ | ಮಿಥಿಲೆ | ಕುಂಭ | ಪ್ರಜಾವತಿ | ೨೫ | ,, |
| ೨೦ | ಮುನಿಸುವ್ರತ | ಅಪರಾಜಿತ ವಿಮಾನ | ಕುಶಾಗ್ರ ನಗರ | ಸುಮಿತ್ರ | ಪದ್ಮಾವತಿ (ಸೋಮೆ) | ೨೦ | ಕೃಷ್ಣ |
| ೨೧ | ನಮಿನಾಥ | ಪ್ರಾಣತ ಸ್ವರ್ಗ | ಮಿಥಿಲೆ | ವಿಜಯ | ವಪ್ರಾಸೇನಿ | ೧೫ | ಹೊಂಬಣ್ಣ |
| ೨೨ | ನೇಮಿನಾಥ | ವೈಜಯಂತ | ಶೌರಿಪುರ (ದ್ವಾರಕೆ) | ಸಮುದ್ರವಿಜಯ | ಶಿವಾದೇವಿ | ೧೦ | ಮಯೂರಕಂಠವರ್ಣ |
| ೨೩ | ಪಾರ್ಶ್ವನಾಥ | ಆನತಸ್ವರ್ಗ | ಕಾಶಿ | ಅಶ್ವಸೇನ | ವಾಮೆ | ೯ ಹಸ್ತ | ಹಸರು |
| ೨೪ | ವರ್ಧಮಾನ | ಪುಷ್ಪೋತ್ತರವಿಮಾನ | ಕುಂಡಲಪುರ | ಸಿದ್ಧಾರ್ಥ | ಪ್ರಿಯಕಾರಿಣಿ | ೭ ಹಸ್ತ | ಹೊಂಬಣ್ಣ |

| ಆಯುಷ್ಯ | ದೀಕ್ಷಾ ಸ್ಥಾನ | ಗಣಧರರ ಸಂಖ್ಯೆ | ಆಸನ | ನಿರ್ವಾಣ ಸ್ಥಾನ | ವಂಶ | ಚಿಹ್ನ | ತೀರ್ಥಂಕರನ ಯಕ್ಷ | ಯಕ್ಷಿಣಿ |
|---|---|---|---|---|---|---|---|---|
| ೮೪ ಲಕ್ಷ ಪೂ. | ಆಲದ ಮರ | ೮೪ | ಪರ್ಯಂಕ | ಕೈಲಾಸ | ಇಕ್ಷ್ವಾಕು | ಗೋ | ಗೋಮಾಲ್ಯ | ಚಕ್ರೇಶ್ವರಿ |
| ೭೨ | ಸಪ್ತಚ್ಛದವೃಕ್ಷ | ೯೦ | ಖಡ್ಗಾಸನ | ಸಮ್ಮೇದ ಶಿಖರ | ,, | ಗಜ | ಮಹಾಯಕ್ಷ | ರೋಹಿಣಿ |
| ೬೦ | ಶಾಲ | ೧೦೫ | ,, | ,, | ,, | ಅಶ್ವ | ತ್ರಿಮುಖ | ಪ್ರಜ್ಞಪ್ತಿ |
| ೫೦ ಲಕ್ಷ | ಸರಲ | ೧೦೩ | ,, | ,, | | ಕಪಿ | ಯಕ್ಷೇಶ್ವರ | ವಜ್ರಶೃಂಖಲೆ |
| ೪೦ | ಪ್ರಿಯಂಗು | ೧೧೬ | ,, | ,, | | ಕೋಕ | ತುಂಬುರು | ಪುರುಷದತ್ತ |
| ೩೦ | ,, | ೧೧೧ | ,, | ,, | | ಕಮಲ | ಕುಸುಮಾವರ | ಮನೋವೇಗೆ |
| ೨೦ | ಶಿರೀಷ | ೯೫ | ,, | ,, | ಉಗ್ರ | ಸ್ವಸ್ತಿಕ | ನಂದಿ | ಕಾಲಿ |
| ೧೦ | ನಾಗ | ೯೩ | ,, | ,, | ಇಕ್ಷ್ವಾಕು | ಚಂದ್ರ | ವಿಜಯ | ಜ್ವಾಲಾಮಾಲಿನಿ |
| ೨ | ಶಾಲ | ೮೮ | ,, | ,, | | ಮಕರ | ಅಜಿತ | ಮಹಾಕಾಲಿ |
| ೧ | ಪ್ಲಕ್ಷ | ೮೧ | ,, | ,, | | ಶ್ರೀದ್ರುಮ (ಕಲ್ಪವೃಕ್ಷ) | ಬ್ರಹ್ಮೇಶ್ವರ | ಮಾನವಿ |
| ೮೪ ಲಕ್ಷ | ತಿಂದುಕ | ೭೭ | ,, | ,, | | ಗಂಡಕ | ಕುಮಾರ | ಗೌರಿ |
| ೭೨ ಲಕ್ಷ | ಪಾಟಲ | ೬೬ | ಪರ್ಯಂಕ | ಚಂಪಾಪುರಿಜಯವನ | | ಮಹಿಷ | ಷಣ್ಮುಖ | ಗಾಂಧಾರಿ |
| ೬೦ ,, | ಜಂಬು | ೫೫ | ಖಡ್ಗ | ಸಮ್ಮೇದ | | ವರಾಹ | ಪಾತಾಲ | ವೈರೋಚಿ |
| ೩೦ ,, | ಪಿಪ್ಪಲ | ೫೦ | ,, | ,, | | ಭಲ್ಲೂಕ | ಕಿನ್ನರ | ಅನಂತಮತಿ |
| ೧೦ ,, | ದಧಿಪರ್ಣ | ೪೩ | ಖಡ್ಗ | ,, | ಕುರು | ವಜ್ರ | ಕಿಂಪುರುಷ | ಮಾನಸಿ |
| ೧ | ನಂದಿ | ೩೬ | ,, | ,, | ,, | ಹರಿಣ | ಗರುಡ | ಮಹಾಮಾನಸಿ |
| ೯೫ ಸಾ. | ತಿಲಕ | ೩೫ | ,, | ,, | ,, | ಮೇಷ | ಗಂಧರ್ವ | ಜಯೆ |
| ೮೪ ಸಾ. | ಆಮ್ರ | ೩೦ | ,, | ,, | ಇಕ್ಷ್ವಾಕು | ಮತ್ಸ್ಯ | ಮಹೇಂದ್ರ | ವಿಜಯೆ |
| ೫೫ ,, | ಅಶೋಕ | ೨೮ | ,, | ,, | | ಕಲಶ | ಕುಬೇರ | ಅಪರಾಜಿತೆ |
| ೩೦ | ಚಂಪಕ | ೧೮ | ,, | ,, | | ಕೂರ್ಮ | ವರುಣ | ಬಹುರೂಪಿಣಿ |
| ೧೦ | ಬೇಲಫಲ | ೧೭ | ,, | ,, | | ಇಂದೀವರ | ವಿದ್ಯುತ್ಪ್ರಭ | ಚಾಮುಂಡಿ |
| ೧ | ಮೇಷಶೃಂಗಿತ | ೧೧ | ಪರ್ಯಂಕ | ಗಿರನಾರಗಿರಿ | | ಶಂಖ | ಸರ್ವಾಹ್ಣ | ಕುಸುಮಾಂಡಿ |
| ೧೦೦ ವ. | ಧವಲವೃಕ್ಷ | ೧೦ | ಖಡ್ಗ | ಸಮ್ಮೇದ | ಉಗ್ರ | ಸರ್ಪ | ಧರಣೇಂದ್ರ | ಪದ್ಮಾವತಿ |
| ೭೨ ವ. | ಶಾಲವೃಕ್ಷ | ೧೧ | ,, | ಪಾವಾಪುರಿ | ನಾಥ | ಸಿಂಹ | ಮಾತಂಗ | ಸಿದ್ಧಾಯನಿ |

## ಭವಿಷ್ಯತ್ ಕಾಲದ ೨೪ ಜಿನ ತೀರ್ಥಂಕರರು.

| ಅನುಕ್ರಮ | ಹೆಸರು | ತೀರ್ಥಂಕರರ ಪದವಿಯನ್ನು ಹೊಂದುವವರ ಹೆಸರು | ಎಲ್ಲಿಂದ ಬರುವರು | ಪರಮಾಯು | ಎತ್ತರ | ಅಂತರಕಾಲ ಪ್ರಮಾಣ |
|---|---|---|---|---|---|---|
| ೧ | ಮಹಾಪದ್ಮ | ಶ್ರೇಣಿಕ ರಾಜ | ೧ನೆಯ ನರಕ | ೧೧೬ | ೭ ಮೊಳ | ೪೨೦೦೦ ವರ್ಷ |
| ೨ | ಸುರದೇವ | ದ್ವಿಪಿಷ್ಟ ನಾರಾಯಣ. (೨ನೆಯ.) | ೬ನೆಯ ನರಕ | ೧೨೦ | ೯ ಮೊಳ | ೨೫೦ ವರ್ಷ |
| ೩ | ಸುಪಾರ್ಶ್ವ | ಸ್ವಯಂಭು ನಾರಾಯಣ. (೩ನೆಯ) | ೬ನೆಯ ನರಕ | ೧೦೦೦ | ೧೦ ಧನುಷ್ಯ | ೪೩೦೦೦ ವರ್ಷ |
| ೪ | ಸ್ವಯಂ ಪ್ರಭ | ಪುರುಷೋತ್ತಮ ನಾರಾಯಣ (೪ನೆಯ) | ೬ನೆಯ ನರಕ | ೧೦೦೦೦ | ೧೫ ಧನುಷ್ಯ | ೫೦೦೦೦೦ ,, |
| ೫ | ಸರ್ವಾತ್ಮ ಭೂತ | ಪುರುಷಸಿಂಹ ನಾರಾಯಣ (೫ನೆಯ) | ೬ನೆಯ ನರಕ | ೩೦೦೦೦ | ೨೦ ಧನುಷ್ಯ | ೬೦೦೦೦೦ ,, |
| ೬ | ದೇವಪುತ್ರ | ಪುಂಡರೀಕ ನಾರಾಯಣ (೬ನೆಯ) | ೬ನೆಯ ನರಕ | ೫೫೦೦೦ | ೨೫ ಧನುಷ್ಯ | ೫೪೦೦೦೦೦ ,, |
| ೭ | ಕುಲಪುತ್ರ | ದತ್ತ ದೇವ ನಾರಾಯಣ (೭ನೆಯ) | ೫ನೆಯ ನರಕ | ೮೪೦೦೦ | ೩೦ ಧನುಷ್ಯ | ೧೦೧೦೦೦೦೦೦ ,, |
| ೮ | ಉದಂಕ | ಅಶ್ವಗ್ರೀವ. ಪ್ರತಿ ನಾರಾಯಣ (೧ನೆಯ) | ೭ನೆಯ ನರಕ | ೯೫೦೦೦ | ೩೫ ಧನುಷ್ಯ | ಪಾದ ಪಲ್ಯ |
| ೯ | ಪ್ರೌಷ್ಠಿಲ | ತಾರಕ. ಪ್ರತಿ ನಾರಾಯಣ (೨ನೆಯ) | ೬ನೆಯ ನರಕ | ೧೦೦೦೦೦ | ೪೦ ಧನುಷ್ಯ | ಅರ್ಧ ಪಲ್ಯ |
| ೧೦ | ಜಾತಕೀರ್ತಿ | ಮೇರಕ. ಪ್ರತಿ ನಾರಾಯಣ (೩ನೆಯ) | ,, | ೧೦೦೦೦೦ | ೪೫ ಧನುಷ್ಯ | ೩ ಲಕ್ಷ ಸಾಗರ |
| ೧೧ | ಮುನಿಸುವ್ರತ | ನಿಶುಂಭ ಪ್ರತಿನಾರಾಯಣ (೪ನೆಯ) | ,, | ೩೦೦೦೦೦೦ | ೫೦ ಧನುಷ್ಯ | ೪ ಲಕ್ಷ ಸಾಗರ |
| ೧೨ | ಅರ | ಮಧು ಕೈಟಭ ಪ್ರತಿನಾರಾಯಣ (೫ನೆಯ) | ,, | ೬೦೦೦೦೦೦ | ೬೦ ಧನುಷ್ಯ | ೯ ಲಕ್ಷ ಸಾಗರ |
| ೧೩ | ನಿಷ್ಪಾಪ | ಪ್ರಹ್ಲಾದ ಪ್ರತಿನಾರಾಯಣ (೬ನೆಯ) | ,, | ೭೨ ಲಕ್ಷ | ೭೦ ಧನುಷ್ಯ | ೩೦ ಲಕ್ಷ ಸಾಗರ |
| ೧೪ | ನಿಷ್ಕಷಾಯ | ಬಲಿ. ಪ್ರತಿನಾರಾಯಣ (೭ನೆಯ) | ೫ನೆಯ ನರಕ | ೮೪ ಲಕ್ಷ | ೮೦ ಧನುಷ್ಯ | ೫೪ ಲಕ್ಷ ಸಾಗರ |
| ೧೫ | ವಿಪುಲ | ರಾವಣ. ಪ್ರತಿನಾರಾಯಣ (೮ನೆಯ) | ೪ನೆಯ ನರಕ | ೧೮ ಪೂರ್ವ | ೯೦ ಧನುಷ್ಯ | ೯೯ ಲಕ್ಷ ಸಾಗರ |

| | | | | | | | |
|---|---|---|---|---|---|---|---|
| ೧೬ | ನಿರ್ಮಲ | ಕೃಷ್ಣ. ನಾರಾಯಣ (೯ನೆಯ) | ೩ನೆಯ ನರಕ | ೨ಲ. ಪೂರ್ವ | ೧೨೦ ಧ. | ೯ಕೋಟಿ ಸಾಗರ |
| ೧೭ | ಚಿತ್ರಗುಪ್ತ | ಜರಾಸಂಧ ಪ್ರತಿನಾರಾಯಣ (೯ನೆಯ.) | ೩ನೆಯ ನರಕ | ೧೦ಲ. ಪೂರ್ವ | ೧೫೦ ಧ | ೯ಕೋಟಿ ಸಾಗರ |
| ೧೮ | ಸಮಾಧಿ ಗುಪ್ತ | ಮಘವಾ ಚಕ್ರವರ್ತಿ (೩ನೆಯ.) | ೩ನೆಯ ಸ್ವರ್ಗ | ೨೦ಲ. ಪೂರ್ವ | ೨೦೦ ಧ. | ೯೦೦ಕೋಟಿ ಸಾಗರ |
| ೧೯ | ಸ್ವಯಂಭು | ಸನತ್ಕುಮಾರ ಚಕ್ರವರ್ತಿ (೪ನೆಯ) | ೩ನೆಯ. ಸ್ವರ್ಗ | ೩೦ಲ | ಪೂರ್ವ | ೨೫೦ ಧ. | ೯ಸಹಸ್ರಕೋಟಿ ಸಾಗರ |
| ೨೦ | ಅನಿವೃತ್ತಕ | ಸಭೌಮ ಚಕ್ರವರ್ತಿ (೮ನೆಯ) | ೭ನೆಯ ನರಕ | ೪೦ಲ. ಪೂರ್ವ | ೩೦೦ ಧ. | ೯೦ಸಹಸ್ರಕೋಟಿ ಸಾಗರ |
| ೨೧ | ಜಯನಾಥ | ಬ್ರಹ್ಮದತ್ತ ,, (೧೨ನೆಯ) | ೭ನೆಯ ನರಕ | ೫೦ಲ. ಪೂರ್ವ | ೩೫೦ ಧ. | ೯ಲಕ್ಷ ಕೋಟಿ ಸಾಗರ |
| ೨೨ | ವಿಮಲ | ಪದ್ಮ. ಬಲಿಭದ್ರ (೮ನೆಯ) | ೫ನೆಯ. ಸ್ವರ್ಗ | ೬೦ಲ. ಪೂರ್ವ | ೪೦೦ ಧ. | ೧೦ಲಕ್ಷ ಕೋಟಿ ಸಾಗರ |
| ೨೩ | ದೇವಪಾಲ | ಸಮಂತಭದ್ರ | ೧ನೆಯ ಸ್ವರ್ಗ | ೭೨ಲ. ಪೂರ್ವ | ೪೫೦ ಧ. | ೩೦ಲಕ್ಷ ಕೋಟಿ ಸಾಗರ |
| ೨೪ | ಅನಂತ ವೀರ್ಯ | ಸಾತ್ಯಕಿ ರುದ್ರ (೧೧ನೆಯ) | ೩ನೆಯ ನರಕ | ೧ಕೋಟಿ ಪೂರ್ವ | ೫೦೦ ಧ | ೫೦ಲಕ್ಷ ಕೋಟಿ ಸಾಗರ |

ಜೈನಧರ್ಮಾಮೃತಸಾರ

## ಭೂತಕಾಲದ ೨೪ ಜಿನ ತೀರ್ಥಂಕರರು.

| | | | |
|---|---|---|---|
| ೧ ನಿರ್ವಾಣ | ೭ ಅಮಲಪ್ರಭ | ೧೪ ಉತ್ಸಾಹ | ೨೧ ಶುದ್ಧಮತಿ |
| ೨ ಸಾಗರ | ೮ ಉದ್ಧರ | ೧೫ ಜ್ಞಾನೇಶ್ವರ | ೨೨ ಶ್ರೀಭದ್ರ |
| ೩ ಮಹಾಸಾಧು | ೯ ಅಂಗಿರ | ೧೬ ಪರಮೇಶ್ವರ | ೨೩ ಅತಿಕ್ರಾಂತ |
| ೪ ವಿಮಲಪ್ರಭ | ೧೦ ಸನ್ಮತಿ | ೧೭ ವಿಮಲೇಶ್ವರ | ೨೪ ಶಾಂತ |
| ೫ ಶ್ರೀಧರ | ೧೧ ಸಿಂಧು | ೧೮ ಯಶೋಧರ | |
| ೬ ಸುದತ್ತ | ೧೨ ಕುಸುಮಾಂಜಲಿ | ೧೯ ಕೃಷ್ಣಮತಿ | |
| | ೧೩ ಶಿವಗಣ | ೨೦ ಜ್ಞಾನಮತಿ | |

## ಹನ್ನೆರಡು ಜನ ಚಕ್ರವರ್ತಿಗಳು

೧ **ಭರತ**– ಈತನು ಶ್ರೀವೃಷಭತೀರ್ಥಂಕರರ ಜ್ಯೇಷ್ಠ ಪುತ್ರನು ಭರತನು ಇಕ್ಷ್ವಾಕುಕುಲದಲ್ಲಿ ಮೊದಲನೆಯ ಚಕ್ರವರ್ತಿ. ಷಟ್ಖಂಡಗಳ ಆಧಿಪತ್ಯವು ಇವನಿಗೆ ಸೇರಿತ್ತು. ಈತನಿಂದಲೇ ಆರ್ಯಾವರ್ತಕ್ಕೆ ಭರತವರ್ಷವೆಂದು ಹೆಸರಾಯಿತು. ಶ್ರೀವೃಷಭದೇವನು ತಾನೇ ಭರತನಿಗೆ ವಿದ್ಯಾಭ್ಯಾಸ ಮಾಡಿಸಿದನು. ಭರತನು ವಿಶೇಷವಾಗಿ ನೀತಿಶಾಸ್ತ್ರದಲ್ಲಿ ಪಾರಂಗತನಾದನು. ಭರತನಿಗೆ ರಾಜ್ಯವನ್ನು ಕೊಟ್ಟು ಶ್ರೀವೃಷಭ ತೀರ್ಥಂಕರನು ದೀಕ್ಷೆಯನ್ನು ಸ್ವೀಕರಿಸಲು ಈತನು ರಾಜ್ಯಾರೂಢನಾದನು. ಬಳಿಕ ಒಂದಾನೊಂದು ದಿವಸ ಈತನ ಸೇವಕರು ಬಂದು ವೃಷಭದೇವನಿಗೆ ಕೇವಲ ಜ್ಞಾನವುಂಟಾಯಿತೆಂದೂ, ಶಸ್ತ್ರಶಾಲೆಯಲ್ಲಿ ಚಕ್ರರತ್ನವು ಪ್ರಕಟವಾಯಿತೆಂದೂ, ಮಹಾರಾಣಿಗೆ ಪುತ್ರರತ್ನವು ಜನಿಸಿತೆಂದೂ ಹೇಳಿದರು. ಈ ಮೂರು ಮಂಗಲಮಹೋತ್ಸವಗಳನ್ನು ಕೇಳಿದ ಭರತನು ಧಾರ್ಮಿಕ ಮಹೋತ್ಸವವನ್ನು ಮೊದಲು ಮಾಡತಕ್ಕದೆಂದು ತಿಳಿದು ತೀರ್ಥಂಕರನ ಕೇವಲಜ್ಞಾನಮಹೋತ್ಸವಕ್ಕೆ ನಡೆದನು. ಅದನ್ನು ತೀರಿಸಿಕೊಂಡು ಬಂದು ಚಕ್ರರತ್ನದ ಪೂಜೆಯನ್ನು ಮಾಡಿದನು. ಆ ಬಳಿಕ ಪುತ್ರಜನ್ಮೋತ್ಸವವನ್ನು ಮಾಡಿದನು. ಭರತನು ದಿಗ್ವಿಜಯಕ್ಕೆ ಹೊರಟು ಎಲ್ಲ ರಾಜ್ಯಗಳ ಅರಸರನ್ನು ಜಯಿಸಿದನು. ಬಳಿಕ ಕೈಲಾಸ ಪರ್ವತದಲ್ಲಿದ್ದ ವೃಷಭತೀರ್ಥಂಕರನ ಪೂಜೆಯನ್ನು ಮಾಡಿ ಧರ್ಮೋಪದೇಶವನ್ನು ಕೇಳಿದನು. ಮರಳಿ ಬರುವಾಗ ಅಯೋಧ್ಯಾ ಪಟ್ಟಣವನ್ನು ಸೇರುವುದಕ್ಕೆ ಮೊದಲು ತನ್ನ ತಮ್ಮನಾದ ಬಾಹುಬಲಿಗೆ ನನ್ನ ಅಪ್ಪಣೆಯನ್ನು ನೀನು ಪಾಲಿಸಬೇಕು ಎಂದು ಹೇಳಿಕಳುಹಿದನು. ಆದರೆ ಬಾಹುಬಲಿಯು ಅದನ್ನೊಪ್ಪಲಿಲ್ಲ. ತಂದೆಯು ವಿಭಾಗಿಸಿಕೊಟ್ಟ ಪ್ರದೇಶದ ಮೇಲೆ ಸ್ವಾಮಿತ್ವವಿರುವಾಗ ಎರಡನೆಯವರ ಆಧೀನತೆಯನ್ನೊಪ್ಪುವುದು ಆತನ ಮನಸ್ಸಿಗೆ ಬರಲಿಲ್ಲ. ತಮ್ಮನ ಈ ನಡತೆಯನ್ನು

ಭರತನು ಒಪ್ಪಲಿಲ್ಲ. ಆದುದರಿಂದ ಭರತನು ಬಾಹುಬಲಿಯೊಡನೆ ದೃಷ್ಟಿ ಯುದ್ಧ, ಜಲಯುದ್ಧ, ಮಲ್ಲಯುದ್ಧಗಳೆಂಬ ಮೂರು ತರದ ಯುದ್ಧಗಳನ್ನು ಮಾಡಿದನು. ಭರತನು ಅಪಜಯ ಹೊಂದಿದನು. ಆದರೆ ಬಾಹುಬಲಿಯು ನಿರ್ವೇಗವನ್ನು ಹೊಂದಿ ಜಿನದೀಕ್ಷೆಯನ್ನು ಸ್ವೀಕರಿಸಿದನು. ಆದರಿಂದ ಎಲ್ಲ ರಾಜ್ಯಕ್ಕೂ ಭರತನು ಒಡೆಯನಾದನು. ಭರತಚಕ್ರವರ್ತಿಯ ಶರೀರವು ಸಮ ಚತುರಸ್ರಸಂಸ್ಥಾನವಾದುದು. (ಎಲ್ಲ ಅವಯವಗಳು ಪ್ರಮಾಣಾನುರೂಪವಾಗಿಯೂ ಸುಂದರವಾಗಿಯೂ ಇದ್ದುವು) ಆತನ ಮೈಲೆ ೬೪ ಶುಭ ಚಿಹ್ನೆಗಳಿದ್ದುವು. ಆತನ ಪಟ್ಟದ ರಾಣಿಯ ಹೆಸರು ಸುಭದ್ರೆ. ಆತನು ದಾನಕ್ಕೆ ಪಾತ್ರವಾದವರನ್ನು ವ್ರತಿಗಳಾದ ಶ್ರಾವಕರೊಳಗಿಂದ ಪರೀಕ್ಷಿಸಿ ಆರಿಸಿ ಬ್ರಾಹ್ಮಣವರ್ಗವನ್ನುಂಟುಮಾಡಿದನು. ಭರತರಾಜನು ಕೈಲಾಸ ಪರ್ವತದ ಮೇಲೆ ಭೂತ ಭವಿಷ್ಯದ್ವರ್ತಮಾನಕಾಲೀನರಾದ ಎಪ್ಪತ್ತೆರಡು ಜನ ತೀರ್ಥಂಕರರ ಮಂದಿರಗಳನ್ನು ಕಟ್ಟಿಸಿದನು. ಆತನು ಬಹು ಕಾಲ ರಾಜ್ಯವಾಳಿ ಕೊನೆಗೆ ಜಿನದೀಕ್ಷೆಯನ್ನು ಸ್ವೀಕರಿಸಿದನು. ಬಳಿಕ ಆತನಿಗೆ ಕೇವಲಜ್ಞಾನವುಂಟಾಯಿತು. ಅದರಿಂದ ಅದೇ ಜನ್ಮದಲ್ಲಿ ಆತನು ಮೋಕ್ಷವನ್ನೈದಿದನು.

೨ **ಸಗರ**– ಶ್ರೀ ಅಜಿತನಾಥ ತೀರ್ಥಂಕರನ ಕಾಲದಲ್ಲಿ ಸಗರಚಕ್ರವರ್ತಿಯು ಆಗಿಹೋದನು. ಈತನ ತಂದೆ ಇಕ್ಷ್ವಾಕುವಂಶದ ಸಮುದ್ರವಿಜಯ. ಚಕ್ರರತ್ನವು ಆವಿರ್ಭವಿಸಿದ ತರುವಾಯ ಈತನೂ ಭರತನಂತೆ ದಿಗ್ವಿಜಯಮಾಡಿದನು. ಸಗರಚಕ್ರವರ್ತಿಗೆ ಅರವತ್ತುಸಾವಿರಜನ ಮಕ್ಕಳು. ಒಂದಾನೊಂದು ದಿವಸ ಚತುರ್ಮುಖನೆಂಬ ಮುನಿಗೆ ಕೇವಲ ಜ್ಞಾನವುಂಟಾದುದನ್ನು ಕೇಳಿ ಆ ಕೇವಲ ಜ್ಞಾನೋತ್ಸವಕ್ಕೆ ಹೋದಾಗ ಈತನಿಗೆ ಅಲ್ಲಿಗೆ ಬಂದಿದ್ದ 'ಮಣಿಕೇತುದೇವ' ನ ದರ್ಶನವಾಯಿತು. ಮಣಿಕೇತುವು ಸಗರನ ಪೂರ್ವಜನ್ಮದ ಮಿತ್ರನು. ಆ ಜನ್ಮದಲ್ಲಿ ಸಗರನೂ ಮಣಿಕೇತುವೂ ಯಾರಿಗೆ ಮೊದಲು ಮನುಷ್ಯಜನ್ಮವು ಬರುವುದೋ ಅವರು ಜಿನದೀಕ್ಷೆಯನ್ನು ಸ್ವೀಕರಿಸಬೇಕು ' ಎಂದು ತಮ್ಮತಮ್ಮೊಳಗೆ ಕಟ್ಟುಮಾಡಿಕೊಂಡಿದ್ದರು. ಆ ಮೇರೆಗೆ ಮಣಿಕೇತುವು ಪೂರ್ವಜನ್ಮದ ನೆನಪನ್ನು ಕೊಟ್ಟು ದೀಕ್ಷೆಯನ್ನು ಸ್ವೀಕರಿಸೆಂದು ಸಗರನಿಗೆ ಹೇಳಿದನು. ಆದರೆ ಆತನು ಒಪ್ಪಲಿಲ್ಲ. ಮುಂದೆ ಕೆಲವು ದಿವಸಗಳ ತರುವಾಯ ಒಂದು ದಿವಸ ಸಗರನ ೬೦ ಸಾವಿರ ಮಕ್ಕಳು ತಂದೆಯ ಬಳಿಗೆ ಬಂದು "ನಾವು ಕ್ಷತ್ರಿಯಕುಮಾರರು, ಅಸಾಧ್ಯವೆನಿಸುವಂತಹ ಯಾವುದೊಂದು ಕಾರ್ಯವನ್ನು ನಮಗೆ ಹೇಳಿರಿ " ಎಂದು ಕೇಳಿಕೊಂಡರು. ಆಗ ಸಗರನು ಹಾಗಾದರೆ ನೀವು ಕೈಲಾಸಪರ್ವತಕ್ಕೆ ಹೋಗಿ ಭರತ ಚಕ್ರವರ್ತಿಯು ಕಟ್ಟಿಸಿದ ಜಿನಮಂದಿರಗಳ ರಕ್ಷಣಕ್ಕಾಗಿ ಅವುಗಳ ಸುತ್ತಲು ದೊಡ್ಡ ಗೋಡೆಗಳನ್ನು ಕಟ್ಟಿ ಕೆಳಗೆ ಅಗಳ

ತೆಗಳನ್ನು ಮಾಡಿ ಅಲ್ಲಿ ಗಂಗೆಯ ಪ್ರವಾಹವನ್ನು ತಂದು ಬಿಡಿರಿ ಎಂದು ಹೇಳಿದನು. ತಂದೆಯ ಅಪ್ಪಣೆಯಂತೆ ಸಗರಪುತ್ರರು ಆ ಕೆಲಸವನ್ನು ಮಾಡಿದರು. ಆ ಕಾಲದಲ್ಲಿ ಸಗರನ ಮಿತ್ರನಾದ ಮಣಿಕೇತುವು ಸರ್ಪರೂಪವನ್ನು ಧರಿಸಿ ಅಲ್ಲಿಗೆ ಬಂದು ತನ್ನ ವಿಷಮಯ ಫೂತ್ಕಾರಗಳಿಂದ ಅಲ್ಲಿಯೇ ಅವರನ್ನು ನಿಶ್ಚೇಷ್ಟರನ್ನಾಗಿ ಮಾಡಿ ಬೀಳಿಸಿ ಈ ಸುದ್ದಿಯನ್ನು ಸಗರನಿಗೆ ತಿಳುಹಿದನು. ಇದನ್ನು ಕೇಳಿ ಸಗರನು ನಿರ್ವೇಗ ಹೊಂದಿ ಜಿನದೀಕ್ಷೆಯನ್ನು ಸ್ವೀಕರಿಸಿದನು. ಇದರಿಂದ ಮಣಿಕೇತುವಿನ ಮನೋರಥವು ಪೂರ್ಣವಾಯಿತು. ಆತನು ಮತ್ತೆ ಕೈಲಾಸಪರ್ವತದ ಮೇಲೆ ಹೋಗಿ ಸಗರಪುತ್ರರನ್ನು ಸಚೇತನರನ್ನು ಮಾಡಿ ಸಗರನು ದೀಕ್ಷೆ ಹೊಂದಿದ ಸುದ್ದಿಯನ್ನರುಹಿದನು. ಅದನ್ನು ಕೇಳಿ ಅವರೆಲ್ಲರೂ ದೀಕ್ಷೆಯನ್ನು ಹೊಂದಿದರು. ಸಗರನು ದೀಕ್ಷೆಯನ್ನು ಸ್ವೀಕರಿಸುವುದಕ್ಕೆ ಮುಂಚೆ ಭಗೀರಥನಿಗೆ ರಾಜ್ಯವನ್ನು ಕೊಟ್ಟಿದ್ದನು. ಸಗರನು ಮೋಕ್ಷವನ್ನೈದಿದ ಬಳಿಕ ಭಗೀರಥನು ವರದತ್ತನಿಗೆ ರಾಜ್ಯವನ್ನು ಕೊಟ್ಟು ತಪಶ್ಚರ್ಯೆಗೆ ಹೊರಟುಹೋದನು. ಭಗೀರಥರಾಜನು ಕೈಲಾಸಪರ್ವತದ ಮೇಲೆ ಗಂಗಾನದಿಯ ತೀರದಲ್ಲಿ ದೀಕ್ಷೆಯನ್ನು ಹೊಂದಿದನು. ದೇವತೆಗಳು ಗಂಗೋದಕದಿಂದ ಭಗೀರಥಮುನಿಗೆ ಅಭಿಷೇಕಮಾಡಿದರು. ಆಗ ಗಂಗೆಗೂ ಭಗೀರಥಮುನಿಯ ಪಾದಕ್ಕೂ ಸಂಪರ್ಕವುಂಟಾದುದರಿಂದ ಅಂದಿನಿಂದ ಗಂಗಾನದಿಗೆ ಭಾಗೀರಥಿಯೆಂದು ಹೇಳಲಾರಂಭಿಸಿದರು. ಮತ್ತು ಗಂಗಾನದಿಯು ಆಗನಿಂದ ತೀರ್ಥವೆನಿಸಿತು. ಭಗೀರಥನು ಕೇವಲ ಜ್ಞಾನವನ್ನು ಹೊಂದಿ ಮೋಕ್ಷವನ್ನೈದಿದನು.

೩ **ಮಘವ**– ಈ ಚಕ್ರವರ್ತಿಯು ಧರ್ಮನಾಥ ಶಾಂತಿನಾಥ ತೀರ್ಥಂಕರರ ಮಧ್ಯಕಾಲದಲ್ಲಿ ಆಗಿಹೋದನು. ಅಯೋಧ್ಯಾನಗರದಲ್ಲಿ ಆಳುತ್ತಿದ್ದ ಸುಮಿತ್ರನೆಂಬ ರಾಜನಿಗೆ ಸುಭದ್ರಾದೇವಿಯ ಉದರದಲ್ಲಿ ಈತನು ಜನಿಸಿದನು. ಈತನೂ ಆರು ಖಂಡಗಳ ರಾಜ್ಯವನ್ನಾಳಿದನು. ನವನಿಧಿಗಳೂ, ಚತುರ್ದಶ ರತ್ನಗಳೂ ಈ ಚಕ್ರವರ್ತಿಗೆ ಪ್ರಾಪ್ತವಾದುವು. ಈ ಚಕ್ರವರ್ತಿಯು ಬಹುಕಾಲ ರಾಜ್ಯಭೋಗಗಳನ್ನನುಭವಿಸಿದ ತರುವಾಯ ಒಂದಾನೊಂದು ದಿವಸ ಅರಣ್ಯಕ್ಕೆ ಹೋದಾಗ ಅಭಯಘೋಷರೆಂಬ ಮುನಿಗಳನ್ನು ಕಂಡು ಅವರ ಬಳಿಯಲ್ಲಿ ಧರ್ಮೋಪದೇಶವನ್ನು ಕೇಳಿ ಅಲ್ಲಿಯೇ ದೀಕ್ಷೆಯನ್ನು ಪಡೆದು ಘೋರವಾದ ತಪಸ್ಸನ್ನಾಚರಿಸಿದನು. ಮಘವಚಕ್ರವರ್ತಿಯ ಶರೀರವು ೪೨ ಬಿಲ್ಲು ಉನ್ನತವಾಗಿತ್ತು. ಆತನ ಆಯುಷ್ಯವು ೫ ಲಕ್ಷ ಪೂರ್ವಪರಿಮಿತವಾದುದಿತ್ತು.

೪ **ಸನತ್ಕುಮಾರ**– ಮಘವ ಚಕ್ರವರ್ತಿಯ ತರುವಾಯ ಬಹುಕಾಲವು ಗತಿಸಿದ ಬಳಿಕ ಕುಂಥು ಮತ್ತು ಅರ ಎಂಬ ತೀರ್ಥಂಕರರ ಮಧ್ಯಕಾಲ

ದಲ್ಲಿ ಸನತ್ಕುಮಾರ ಚಕ್ರವರ್ತಿಯು ಆಗಿಹೋದನು. ಸೂರ್ಯವಂಶದ ಅನಂತವೀರ್ಯನೆಂಬ ಅರಸನಿಗೆ ಆತನ ರಾಣಿ ಸಹದೇವಿಯ ಉದರದಲ್ಲಿ ಈತನು ಜನಿಸಿದನು. ಈತನು ಷಟ್‌ಖಂಡ ರಾಜ್ಯವನ್ನು ಸಂಪಾದಿಸಿ ಧರ್ಮಮಾರ್ಗದಿಂದಲೂ ದಕ್ಷತೆಯಿಂದಲೂ ರಾಜ್ಯವನ್ನಾಳಿದನು. ಸನತ್ಕುಮಾರ ಚಕ್ರವರ್ತಿಯು ಬಲು ಸುಂದರನೆಂದು ಎಲ್ಲ ಕಡೆಗೆ ಪ್ರಸಿದ್ಧಿಯಿತ್ತು. ಬಹುಕಾಲ ರಾಜಭೋಗಗಳನ್ನು ಅನುಭವಿಸಿ ಆತನು ನಿರ್ವೇಗವನ್ನು ಹೊಂದಿದನು. ಯೌವನ ಧನ,ಶರೀರಗಳು ನಶ್ವರವಾದವುಗಳೆಂದು ತಿಳಿದು ಆತನು ದೇವಕುಮಾರನೆಂಬ ಮಗನಿಗೆ ರಾಜ್ಯವನ್ನು ಕೊಟ್ಟು ಜಿನದೀಕ್ಷೆಯನ್ನು ಹೊಂದಿದನು. ತಪಶ್ಚರ್ಯೆಯನ್ನು ಮಾಡುವಾಗ ಹಲವು ತರದ ರೋಗಗಳಿಂದ ಆತನ ಶರೀರವು ಜರ್ಜರಿತವಾಯಿತು. ಈ ಸಮಯದಲ್ಲಿ ಆತನ ತಪಶ್ಚರ್ಯೆಯ ಪರೀಕ್ಷೆಮಾಡುವುದಕ್ಕಾಗಿ ಸ್ವರ್ಗದೊಳಗಿನ ಒಬ್ಬ ದೇವನು ವೈದ್ಯನ ರೂಪವನ್ನು ಧರಿಸಿ ಆತನ ಬಳಿಗೆ ಬಂದು— ನಾನು ಹೆಸರುವಾಸಿಯಾದ ವೈದ್ಯನು; ತಮಗೆ ಔಷಧವೇನಾದರೂ ಬೇಕಾಗಿದ್ದರೆ ಹೇಳಬೇಕು ಎಂದು ಕೇಳಿದನು. ಆಗ ಮುನಿಯು ಅಯ್ಯಾ, ನೀನು ಹೆಸರಾದ ವೈದ್ಯನಾಗಿದ್ದರೆ ಜನ್ಮಜರಾಮರಣಗಳೆಂಬ ವ್ಯಾಧಿಗಳಿಂದ ಬಳಲುತ್ತಿರುವ ಈ ಶರೀರಕ್ಕೆ ತಕ್ಕ ಔಷಧವನ್ನಿತ್ತು ನನ್ನನ್ನು ಇದರಿಂದ ತೀವ್ರ ಬಿಡುಗಡೆ ಮಾಡು ಎಂದು ಹೇಳಿದನು- ವೈದ್ಯವೇಷಧಾರಿ ದೇವನು ನಾಚಿ ಕೂಡಲೆ ನಿಜರೂಪವನ್ನು ತೋರಿ ಹೊರಟುಹೋದನು. ಸನತ್ಕುಮಾರ ಮುನಿಯು ಶುಭಧ್ಯಾನದಿಂದ ಕರ್ಮನಾಶ ಮಾಡಿ ಕೊನೆಗೆ ಸದ್ಗತಿಯನ್ನು ಹೊಂದಿದನು. ಈ ಚಕ್ರವರ್ತಿಯ ಶರೀರವು ೪೧ ಬಿಲ್ಲು ಉನ್ನತವಾಗಿತ್ತು. ಆಯುಷ್ಯವು ೩ ಲಕ್ಷ ಪೂರ್ವ ಪರಿಮಿತವಾಗಿತ್ತು.

**೫. ಶಾಂತಿನಾಥ**- ಹಸ್ತಿನಾಪುರದಲ್ಲಿ ಕಶ್ಯಪವಂಶದ ವಿಶ್ವಸೇನನೆಂಬ ಅರಸನಿಗೆ ಆತನ ಪತ್ನಿ ಐರಾದೇವಿಯ ಉದರದಲ್ಲಿ ಈ ಚಕ್ರವರ್ತಿಯು ಜನಿಸಿದನು. ಈತನೂ ಇತರ ಚಕ್ರವರ್ತಿಗಳಂತೆ ಷಟ್‌ಖಂಡರಾಜ್ಯವನ್ನೂ ನವನಿಧಿಗಳನ್ನೂ, ಚತುರ್ದಶರತ್ನಗಳನ್ನೂ ಸಂಪಾದಿಸಿ ಹಲವು ಕಾಲ ರಾಜ್ಯವಾಳಿದನು. ಪೂರ್ವಜನ್ಮದಲ್ಲಿ ಷೋಡಶಭಾವನೆಗಳನ್ನು ಭಾವಿಸಿದುದರಿಂದ ಈತನಿಗೆ ತೀರ್ಥಂಕರ ನಾಮಕರ್ಮದ ಬಂಧವಾಗಿತ್ತು. ಧರ್ಮನಾಥನ ತರುವಾಯ ಈತನೇ ಹದಿನಾರನೆಯ ತೀರ್ಥಂಕರನಾದನು.

**೬. ಕುಂಥುನಾಥ**- ಶಾಂತಿನಾಥನಂತೆ ಕುಂಥುನಾಥನೂ ಷಟ್‌ಖಂಡ ರಾಜ್ಯವನ್ನು ಸಂಪಾದಿಸಿ ಸಾರ್ವಭೌಮ-ಚಕ್ರವರ್ತಿಪದವನ್ನು ಹೊಂದಿದನು. ಈತನಿಗೆ ತೀರ್ಥಂಕರನಾಮಕರ್ಮದ ಬಂಧವಾಗಿದ್ದುದರಿಂದ ಇವನು ಮುಂದೆ ತೀರ್ಥಂಕರನಾದನು.

**೭. ಅರನಾಥ–** ಕುಂಥುನಾಥ ತೀರ್ಥಂಕರರ ತರುವಾಯ ಈತನೂ ಅವ ನಂತೆಯೆ ಚಕ್ರವರ್ತಿಯಾಗಿ ಕೊನೆಗೆ ತೀರ್ಥಂಕರನಾದನು.

**೮. ಸುಭೌಮ–** ಇಪ್ಪತ್ತೊಂದು ಬಾರಿ ಪೃಥ್ವಿಯನ್ನು ನಿಃಕ್ಷತ್ರಿಯವಾಗಿ ಮಾಡಿ ಪರಾಕ್ರಮಿಯೆನಿಸಿಕೊಂಡ ಪರಶುರಾಮನು ಆಗಿಹೋದ ಕಾಲದಲ್ಲಿ ಸಹ ಸ್ರಬಾಹು ಎಂಬ ಅರಸನು ತನ್ನ ಚಿತ್ರಮತಿಯೆಂಬ ರಾಣಿಯೊಡನೆ ರಾಜ್ಯ ವಾಳುತ್ತಿದ್ದನು. ಪರಶುರಾಮನಿಂದ ಸಹಸ್ರಬಾಹುವು ಹತನಾದಾಗ ಚಿತ್ರಮ ತಿಯು ಗರ್ಭಿಣಿಯಾಗಿದ್ದಳು. ಆಕೆಯ ಉದರದಲ್ಲಿ ಸುಭೌಮನೆಂಬ ಅರಸನು ಹುಟ್ಟಿದನು. ಸುಭೌಮನು ಷಟ್‌ಖಂಡ ಪೃಥ್ವಿಯನ್ನು ಜಯಿಸಿ ಅತುಲಪರಾಕ್ರ ಮವನ್ನು ಪ್ರಕಟಿಸಿದನು. ಈತನು ಪರಶುರಾಮನೊಡನೆ ಯುದ್ಧಮಾಡಿ ತನ್ನ ಸುದರ್ಶನಚಕ್ರದಿಂದ ಪರಶುರಾಮನನ್ನು ವಧಿಸಿದನು. ಬಳಿಕ ಸಾಕೇತಪುರ ದಲ್ಲಿ ತನ್ನ ರಾಜ್ಯವನ್ನು ಸ್ಥಾಪಿಸಿದನು. ಸುಭೌಮನು ಸುಖದಿಂದ ರಾಜ್ಯವಾ ಳುತ್ತಿರುವಾಗ ಒಂದಾನೊಂದು ದಿವಸ ಪೂರ್ವಜನ್ಮದ ವೈರದಿಂದ ಸುಭೌ ಮನ ಮುಯ್ಯ ತೀರಿಸಿಕೊಳ್ಳುವುದಕ್ಕಾಗಿ ಒಬ್ಬ ಜ್ಯೋತಿಷ್ಕದೇವನು ವಣಿ ಜನ ವೇಷವನ್ನು ಧರಿಸಿ ಅರಸನ ಓಲಗಕ್ಕೆ ಬಂದು ಒಂದು ಅಮೃತ ಮಯ ಫಲವನ್ನು ತೋರಿಸಿದನು. ಅರಸನು ಅದಕ್ಕೆ ಮರುಳಾಗಿ ಆ ಹಣ್ಣಿನ ಆಶೆಯಿಂದ ಆ ವಣಿಜನ ಬೆನ್ನಹಿಡಿದು ನಡೆದನು. ಆ ಮಾಯಾದೇವನು ಅರ ಸನನ್ನು ಒಂದು ಸಮುದ್ರಕ್ಕೆ ಕರೆದೊಯ್ದು ಬಹಳವಾಗಿ ಪೀಡಿಸತೊಡಗಿದನು. ಸುಭೌಮನು ತಾನು ಏಕಾಂಗಿಯಾಗಿರುವುದನ್ನರಿತು ಆ ದೇವನಿಗೆ ಕ್ಷಮೆಬೇಡಿ ದನು. ಆಗ ದೇವನು– ನೀನು ನೀರಮೇಲೆ ಣಮೋಕಾರಮಂತ್ರವನ್ನು ಬರೆದು ಅದರಮೇಲೆ ಪಾದವನ್ನಿಡು ಎಂದು ಹೇಳಿದನು. ದುರ್ದೈವಿಯಾದ ಚಕ್ರವ ರ್ತಿಯು ಬಿಡುಗಡೆಯಾದೀತೆಂದು ತಿಳಿದು ಹಾಗೆ ಮಾಡಿದನು. ಈ ಪಾತಕವು ಘಟಿಸಿದ ಅರಸನನ್ನು ಆ ಮಾಯಾದೇವನು ಆಕ್ರಮಿಸಿ ಕೊಂದುಹಾಕಿದನು. ಸುಭೌಮಚಕ್ರವರ್ತಿಯು ಅದೇ ಪಾತಕದಿಂದ ಏಳನೆಯ ನರಕಕ್ಕಿಳಿದನು. ಆತನ ದೇಹದ ಉನ್ನತಿ ಇಪ್ಪತ್ತೆರಡು ಬಿಲ್ಲು. ಆಯುಷ್ಯವು ೬೬೦೦೦ ವರ್ಷ ಗಳು. ಅರ ಮತ್ತು ಮಲ್ಲಿ ಈ ತೀರ್ಥಂಕರರ ಮಧ್ಯಕಾಲದಲ್ಲಿ ಈ ಚಕ್ರವ ರ್ತಿಯು ಆಗಿಹೋದನು. ಸುಭೌಮಚಕ್ರವರ್ತಿಯು ಭವಿಷ್ಯತ್‌ಕಾಲದಲ್ಲಿ ಇಪ್ಪ ತ್ತನೆಯ ಅನಿವೃತ್ತನೆಂಬ ತೀರ್ಥಂಕರನಾಗುವನು.

**೯ ಪದ್ಮನಾಭ–** ವಾರಾಣಸಿಯಲ್ಲಿ ಪದ್ಮಕಾಂತನೆಂಬ ರಾಜನು ಆಳುತ್ತಿ ದ್ದನು. ಆತನಿಗೆ ಪದ್ಮನಾಭನೆಂಬ ಮಗನಾದನು. ಪೂರ್ವಪುಣ್ಯದಿಂದ ಆತ ನಿಗೆ ಎಲ್ಲ ವಿದ್ಯೆಗಳು ಪ್ರಾಪ್ತವಾದುವು. ಮುಂದೆ ಪದ್ಮನಾಭನಿಗೆ ನವನಿಧಿ

ಗಳೂ ಚತುರ್ದಶರತ್ನಗಳೂ ಲಭಿಸಿದುವು. ಅವುಗಳ ಬಲದಿಂದ ಆತನು ಷಟ್ ಖಂಡ ಪೃಥ್ವಿಯನ್ನು ಜಯಿಸಿ ಎಲ್ಲ ಕಡೆಗೆ ತನ್ನ ಆಧಿಪತ್ಯವನ್ನು ನೆಲೆಗೊಳಿಸಿದನು. ಸುಕೇತುವೆಂಬ ಅರಸನ ಮಗಳೊಡನೆ ಆತನ ಮದುವೆಯಾಯಿತು. ಆತನು ದಿವ್ಯ ಸುಖೋಪಭೋಗಗಳನ್ನು ಅನುಭವಿಸುತ್ತಿರುವಾಗ ತಾರುಣ್ಯದಲ್ಲಿಯೇ ಆತನಿಗೆ ವೈರಾಗ್ಯವುಂಟಾಯಿತು. ಆಗ ಸುಕೇತುವು ಇದು ಮನಸ್ಸಿಗೆ ಬಾರದುದರಿಂದ ಪದ್ಮನಾಭನನ್ನು ಬಹಳವಾಗಿ ಉಪದೇಶಿಸಿದನು. ಆದರೆ ಅದರಿಂದೇನೂ ಪರಿಣಾಮವಾಗಲಿಲ್ಲ. ಪದ್ಮನಾಭನು ತನ್ನ ಮಗನಿಗೆ ಪಟ್ಟಗಟ್ಟಿ ತಾನು ತಪೋವನಕ್ಕೆ ಹೊರಟುಹೋದನು. ಅಲ್ಲಿ ಸಮಾಧಿಗುಪ್ತರೆಂಬ ಮುನಿಗಳ ಬಳಿಯಲ್ಲಿ ದೀಕ್ಷೆಯನ್ನು ಹೊಂದಿ ಘೋರವಾದ ತಪಸ್ಸನ್ನಾಚರಿಸಿ ಮೋಕ್ಷವನ್ನೈದಿದನು. ಈ ಚಕ್ರವರ್ತಿಯು ಮಲ್ಲಿ, ಮತ್ತು ಮುನಿಸುವ್ರತ ಇವರ ಮಧ್ಯಕಾಲದಲ್ಲಿ ಆಗಿಹೋದನು. ಈತನ ದೇಹದ ಉನ್ನತಿ ೨೦ ಬಿಲ್ಲು. ಆಯುಷ್ಯವು ೩೦೦೦೦ ವರ್ಷ.

೧೦ **ಹರಿಷೇಣ**- ಭೋಗಪುರವೆಂಬುದು ಈ ಚಕ್ರವರ್ತಿಯ ರಾಜಧಾನಿ. ತಾಯಿ ಐರಾದೇವಿ. ತಂದೆ ಪದ್ಮನಾಭ. ಈತನ ಉನ್ನತಿ ೧೫ ಬಿಲ್ಲು. ೧೦೦೦೦ ವರ್ಷ ಆಯುಷ್ಯ. ಈ ಚಕ್ರವರ್ತಿಯು ಮುನಿಸುವ್ರತ ಮತ್ತು ನಮಿ ಈ ತೀರ್ಥಂಕರರ ಮಧ್ಯಕಾಲದಲ್ಲಿ ಆಗಿಹೋದನು. ಈತನೂ ಬೇರೆ ಚಕ್ರವರ್ತಿಗಳಂತೆ ಷಟ್ಖಂಡಗಳ ಒಡೆಯನಾಗಿ ಕೊನೆಗೆ ದೀಕ್ಷೆಹೊಂದಿ ಮೋಕ್ಷವನ್ನೈದಿದನು.

೧೧ **ಜಯಸೇನ** ಈ ಚಕ್ರವರ್ತಿಯು ನಮಿ ಮತ್ತು ನೇಮಿ ಇವರ ಮಧ್ಯಕಾಲದಲ್ಲಿ ಆಗಿಹೋದನು. ಕೌಶಾಂಬಿ ಈತನ ರಾಜಧಾನಿ. ತಾಯಿಯ ಹೆಸರು ಪ್ರಭಂಕರಿ. ತಂದೆಯ ಹೆಸರು ವಿಜಯ. ಉನ್ನತಿ ೧೦ ಬಿಲ್ಲು. ಮೂರು ಸಾವಿರ ವರ್ಷಗಳ ಆಯುಷ್ಯ. ಕೆಲಕಾಲ ರಾಜ್ಯಸುಖವನ್ನನುಭೋಗಿಸಿ ಕೊನೆಗೆ ದೀಕ್ಷೆಹೊಂದಿ ಮೋಕ್ಷಕ್ಕೆ ಸಂದನು.

೧೨ **ಬ್ರಹ್ಮದತ್ತ**- ವರ್ತಮಾನಕಾಲದ ಈ ಕೊನೆಯ ಚಕ್ರವರ್ತಿಯು ನೇಮಿ ಮತ್ತು ಪಾರ್ಶ್ವ ಇವರ ಮಧ್ಯಕಾಲದಲ್ಲಿ ಆಗಿಹೋದನು. ಅಯೋಧ್ಯೆ ಈತನ ರಾಜಧಾನಿ. ತಾಯಿಯ ಹೆಸರು ಚೂಡಾದೇವಿ. ತಂದೆಯ ಹೆಸರು ಬ್ರಹ್ಮ. ಈತನ ಉನ್ನತಿ ೭ ಬಿಲ್ಲು. ವಯಸ್ಸು ೭೦೦೦ ವರ್ಷ. ಈತನು ತನ್ನ ದುಷ್ಕರ್ಮದಿಂದ ನರಕಗತಿಯನ್ನೈದಿದನು.

---

## ಚಕ್ರವರ್ತಿಯ ಐಶ್ವರ್ಯ.

೧. ಷಟ್ಖಂಡ ಪೃಥ್ವಿಯ ಆಧಿಪತ್ಯ ೨. ನವನಿಧಿಗಳು. ೩. ಚತುರ್ದಶ ರತ್ನಗಳು. ೪. ಸಪ್ತಾಂಗಗಳು. ೫ ದಶಾಂಗ ಭೋಗಗಳು ೬ ಚತುರಂಗ ಸೈನ್ಯ. ಮುಂ.

ಷಟ್‌ಖಂಡಗಳು- ಐದು ಮ್ಲೇಚ್ಛ ಖಂಡಗಳೂ ಒಂದು ಆರ್ಯಖಂಡವೂ ಸೇರಿ ಆರು ಖಂಡಗಳು.

ನವನಿಧಿಗಳು– ಕಾಲ, ಮಹಾಕಾಲ, ಪಾಂಡುಕ, ಮಾಣವಕ, ನೈಸರ್ಪ, ಸರ್ವರತ್ನ, ಶಂಖ, ಪದ್ಮ, ಪಿಂಗಲ.

ಚತುರ್ದಶ ರತ್ನಗಳು- ಚಕ್ರ, ಖಡ್ಗ, ದಂಡ, ಚರ್ಮ, ಛತ್ರ, ಚೂಡಾಮಣಿ, ಚಿಂತಾಮಣಿ, ಗೃಹಮಹತ್ತರ, (ಮನೆಯ ವ್ಯವಸ್ಥಾಪಕ) ಸೇನಾಪತಿ, ಗಜಪತಿ, ಅಶ್ವ, ತಕ್ಷಕ, ಪುರೋಹಿತ, ಸ್ತ್ರೀ. ಮೊದಲಿನ ಏಳು ಅಜೀವಗಳು. ಕೊನೆಯ ಏಳು ಸಜೀವಗಳು.

ಸಪ್ತಾಂಗ– ಸ್ವಾಮಿ, ಅಮಾತ್ಯ, ಸುಹೃತ್, ರಾಷ್ಟ್ರ, ಕೋಶ, ದುರ್ಗ, ಷಡಂಗಬಲ

ದಶಾಂಗಭೋಗ- ದಿವ್ಯ ಭಾಜನ, ದಿವ್ಯ ಭೋಜನ, ದಿವ್ಯ ಶಯ್ಯೆ, ದಿವ್ಯ ಆಸನ, ದಿವ್ಯ ನಾಟ್ಯ, ದಿವ್ಯ ರತ್ನ, ದಿವ್ಯ ನಿಧಿ, ದಿವ್ಯ ಸೇನೆ, ದಿವ್ಯ ವಾಹನ, ದಿವ್ಯ ಪುರ.

**ಚತುರಂಗ** ಸೇನೆ– ೧ ಆನೆ ೨ ಕುದುರೆ, ೩, ರಥ ೪ ಪದಾತಿ, ೮೪ ಲಕ್ಷ ಆನೆಗಳು, ೮೪ ಲಕ್ಷ ರಥಗಳು, ೧೮ ಕೋಟಿ ಕುದುರೆಗಳು, ೯೬ ಕೋಟಿ ಕಾಲವರು ಇಷ್ಟು ಚಕ್ರವರ್ತಿಯ ಸೈನ್ಯವು.

ಪ್ರತಿ ಒಬ್ಬ ಚಕ್ರವರ್ತಿಗೂ ಈ ಐಶ್ವರ್ಯವಿರುವುದು.

---

## ನವನಾರಾಯಣರು.

ನಾರಾಯಣರ ಸಂಪತ್ತಿಮೊದಲಾದುವು ಚಕ್ರವರ್ತಿಗಳ ಅರ್ಧದಷ್ಟು. ಆದುದರಿಂದ ನಾರಾಯಣರನ್ನು ಅರ್ಧ ಚಕ್ರಿಗಳೆಂದೂ ಹೇಳುವರು. ಇವರು ಒಂಬಯ್ವರು.

೧. ತ್ರಿಪೃಷ್ಟ ೨. ದ್ವಿಪೃಷ್ಟ ೩. ಸ್ವಯಂಭು ೪. ಪುರುಷೋತ್ತಮ ೫. ನರಸಿಂಹ ೬. ಪುಂಡರೀಕ ೭ ದತ್ತದೇವ ೮. ಲಕ್ಷ್ಮಣ ೯. ಕೃಷ್ಣ

## ನವ ಪ್ರತಿನಾರಾಯಣರು.

ನಾರಾಯಣರಿಗೆ ವಿರೋಧಿಗಳಾದ ಒಂಬಯ್ವರು ಆಯಾ ನಾರಾಯಣರ ಕಾಲದಲ್ಲಿ ಆಗಿಹೋದರು. ನಾರಾಯಣರು ಈ ಪ್ರತಿನಾರಾಯಣರನ್ನು ಜಯಿಸುವರು.

ಅವರ ಹೆಸರುಗಳು:– ೧ ಅಶ್ವಗ್ರೀವ ೨ ತಾರಕ ೩ ಮೇರಕ ೪ ನಿಶುಂಭ ೫ ಮಧುಕೈಟಭ ೬ ಪ್ರಹ್ಲಾದ ೭ ಬಲಿಸೇನ ೮ ರಾವಣ ೯ ಜರಾಸಂಧ

ಮೇಲೆ ಹೇಳಿದ ನಾರಾಯಣರೂ ಪ್ರತಿನಾರಾಯಣರೂ ವರ್ತಮಾನಕಾಲದವರು. ಭೂತಭವಿಷ್ಯತ್ಕಾಲಗಳ ನಾರಾಯಣ ಪ್ರತಿನಾರಾಯಣರ ಹೆಸರುಗಳೂ ಬೇರೆ ಬೇರೆ ಉಂಟು. ವಿಸ್ತಾರಭಯದಿಂದ ಅವನ್ನು ಇಲ್ಲಿ ಹೇಳಲಿಲ್ಲ. ಇವರಿಗೆ ವಾಸುದೇವ ಪ್ರತಿವಾಸುದೇವ ಎಂಬ ಹೆಸರುಗಳೂ ಉಂಟು.

**ನವನಾರದರು**- ಭೀಮ, ಮಹಾಭೀಮ, ರುದ್ರ, ಮಹಾರುದ್ರ, ಕಾಳ, ಮಹಾಕಾಳ, ದುರ್ಮುಖ, ನರಕಕರೋರು, ಅಧೋಮುಖ.

**ನವ ಬಲದೇವರು**- ವಿಜಯ, ಅಚಲ, ಸುಧರ್ಮ, ಸುಪ್ರಭ, ಸುದರ್ಶನ, ನಂದಿ, ನಂದಿಮಿತ್ರ, ರಾಮ, ಪದ್ಮ. (ಇವರು ವರ್ತಮಾನಕಾಲದವರು.)

ಏಕಾದಶ ರುದ್ರರು- ಭೀಮಾವಳಿ, ಜಿತಶತ್ರು, ರುದ್ರ, ವಿಶಾಲ, ಸುಪ್ರತಿಷ್ಠ, ಅಚಲ, ಪುಂಡರೀಕ, ಅಜಿತಂಧರ, ಅಜಿತನಾಭಿ, ಸಾತ್ವಿಕೇಯ, ಪೀಠ.

ತೀರ್ಥಂಕರರನ್ನೊಳಗೊಂಡ ಮೇಲೆ ಹೇಳಿದ ಕುಲಂಕರರು ಮೊದಲಾದವರಿಗೆಲ್ಲ ಕಾರಣಪುರುಷರೆಂಬ ಹೆಸರುಂಟು. ಇವರಲ್ಲಿ ತೀರ್ಥಂಕರರೆಲ್ಲರೂ ಮೋಕ್ಷಗಾಮಿಗಳು. ತೀರ್ಥಂಕರರ ಮಾತಾಪಿತೃಗಳೂ, ಕುಲಂಕರರೂ, ಕಾಮದೇವರೂ ಬಲದೇವರೂ ಊರ್ಧ್ವಗಾಮಿಗಳು. ಬಲದೇವರಲ್ಲಿ ಎಂಟು ಜನರು ಮೋಕ್ಷಗಾಮಿಗಳು; ಕಡೆಯ ಬಲದೇವನು, ಕೃಷ್ಣನು ತೀರ್ಥಂಕರನಾದಾಗ ಅಲ್ಲಿ ಗಣಧರನಾಗಿ ಮುಕ್ತಿಗೆ ಸಲ್ಲುವನು. ವಾಸುದೇವ, ನಾರದ, ರುದ್ರರೆಲ್ಲರೂ ಅಧೋಗಾಮಿಗಳು. ಚಕ್ರಿಗಳಲ್ಲಿ ಕೆಲವರು ಊರ್ಧ್ವಗಾಮಿಗಳು, ಕೆಲವರು ಅಧೋಗಾಮಿಗಳು. ಜೈನ ಪುರಾಣಗಳೆಂದರೆ ಈ ತೀರ್ಥಂಕರ ಪರಮದೇವರ ಮತ್ತು ಚಕ್ರವರ್ತಿಗಳ ಕಥೋಪಕಥನೆಗಳೇ ಸರಿ. ಇವರೆಲ್ಲರೂ ಪಂಚಮಂದರಗಿರಿಗಳ ಪೂರ್ವಾಪರವಿದೇಹಕ್ಷೇತ್ರಗಳಲ್ಲಿ ಎಲ್ಲ ಕಾಲದಲ್ಲಿಯೂ ಇರುವರು.

---

## ೭. ಜೈನರ ಜೀವನಕ್ರಮ.

ಜೈನರಲ್ಲಿ ಬ್ರಹ್ಮಚಾರಿ, ಗೃಹಿ, ವಾನಪ್ರಸ್ಥ, ಭಿಕ್ಷು ಎಂಬ ನಾಲ್ಕು ಆಶ್ರಮಗಳುಂಟು. ಗೃಹಿಗಳಿಗೆ ಶ್ರಾವಕರೆಂಬ ಹೆಸರೂ ಉಂಟು. ಶ್ರಾವಕರು ಅಣುವ್ರತ ಮೊದಲಾದ ವ್ರತಗಳನ್ನಾಚರಿಸುವರು. ದಾನ, ಪೂಜಾ, ಶೀಲ, ಉಪವಾಸಗಳೆಂಬಿವು ಶ್ರಾವಕರ ಧರ್ಮಗಳು. ಶ್ರಾವಕರು ದ್ಯೂತ, ಮಾಂಸ, ಮದ್ಯ, ವೇಶ್ಯಾಗಮನ, ಮೃಗಯೆ, ಪರಧನಹರಣ, ಪರದಾರಗಮನ ಎಂಬ ಸಪ್ತವ್ಯಸನಗಳನ್ನು ಬಿಡಬೇಕು. ಗೃಹಸ್ಥಾಶ್ರಮದಲ್ಲಿರುವ ಉಪಾಸಕರು ಆಚರಿಸಬೇಕಾದ ಈಜ್ಯೆ, ವಾರ್ತೆ, ದತ್ತಿ, ಸ್ವಾಧ್ಯಾಯ ಸಂಯಮ, ತಪ ಎಂಬಿವು ಆರ್ಯಷಟ್ಕರ್ಮಗಳೆನಿಸುವುವು.

**ಈಜ್ಯೆ**- ದೇವೇಂದ್ರರು ಮಾಡುವ ಮಹಾಮಹಪೂಜೆ, ಐಂದ್ರಧ್ವಜ, ಚತುರ್ನಿಕಾಯಾಮರರು ಮಾಡುವ ಸರ್ವತೋಭದ್ರ, ಚಕ್ರವರ್ತಿಗಳು ಮಾಡುವ ಚತುರ್ಮುಖಪೂಜೆ, ವಿದ್ಯಾಧರರು ಮಾಡುವ ರಥಾವರ್ತನ, ಮಹಾಮಂಡಲಿಕರು ಮಾಡುವ ಇಂದ್ರಕೇತು, ಮಂಡಲಿಕರು ಮಾಡುವ ಮಹಾಪೂಜೆ. ಅರ್ಧಮಂಡಲಿಕರು ಮಾಡುವ ಮಹಿಮೆ, ನಂದೀಶ್ವರದೆಂಟು ದಿನಗಳಲ್ಲಿ ಮಾಡುವ ಅಷ್ಟಾಹ್ನಿಕಪೂಜೆ, ಜಿನಗೃಹಕ್ಕೆ ಗಂಧಾಕ್ಷತಪುಷ್ಪಾದ್ಯಷ್ಟವಿಧಾರ್ಚನಾದ್ರವ್ಯಗಳನ್ನು ಕೊಡುವುದು ಮುಂತಾದುವು ಈಜ್ಯೆಯಲ್ಲಿ ಸೇರುವುವು.

**ವಾರ್ತೆ**- ದ್ರವ್ಯೋಪಾರ್ಜನೆಗೆ ಮಾಡಬೇಕಾದ ಕರ್ಮವು ವಾರ್ತೆಯೆನಿಸುವುದು. ಅಸಿ, ಮಷಿ, ಕೃಷಿ, ವಾಣಿಜ್ಯ, ಪಶುಪಾಲನ, ಶಿಲ್ಪಕರ್ಮ, ಎಂಬಿವು ಆರು ವಾರ್ತೆಗಳು. (ಅಸಿ=ಕ್ಷತ್ರವೃತ್ತಿ; ಮಷಿ=ಬರಹ)

**ದತ್ತಿ** (ದಾನ)- ದಯಾದತ್ತಿ, ಪಾತ್ರದತ್ತಿ, ಸಮದತ್ತಿ, ಸಕಲದತ್ತಿ, ಎಂದು ದತ್ತಿಯು ನಾಲ್ಕು ಬಗೆಯಾಗಿದೆ. ದಯಾದತ್ತಿ- ಸಕಲಪ್ರಾಣಿಗಳಲ್ಲಿ ದಯೆತೋರುವುದು; ಪಾತ್ರದತ್ತಿ- ಸತ್ಪಾತ್ರದಲ್ಲಿ ಆಹಾರಾದಿದಾನ; ಸಮದತ್ತಿ- ತನ್ನ ವಂಶಕ್ಕೆ ಅನುರೂಪನಾದ ಯೋಗ್ಯ ವರನಿಗೆ ಕನ್ಯಾದಾನ ಮಾಡುವುದು. ಸಕಲದತ್ತಿ- ಮಗನಿಗೆ, ಮಗನಿಲ್ಲದಿದ್ದರೆ ಗೋತ್ರಜನಿಗೆ ಮನೆವಾರ್ತೆಯನ್ನೊಪ್ಪಿಸುವುದು;

**ಸ್ವಾಧ್ಯಾಯ**- ಅಧ್ಯಯನ ಅಧ್ಯಾಪನಗಳು.

**ತಪ**- ಅಣುವ್ರತ ಮೊದಲಾದ ಸಂಯಮವೂ, ಚಾಂದ್ರಾಯಣ (ಆಹಾರವನ್ನು ಕಡಿಮೆ ಮಾಡುತ್ತ ಹೋಗುವುದು) ಮುಂತಾದುವೂ, ರಸಪರಿತ್ಯಾಗ (ಆಹಾರದಲ್ಲಿ ಕೆಲವು ರಸಗಳನ್ನು ಬಿಡುವುದು) ಮುಂತಾದುವೂ, ಶಯನಾಸನಗಳ ನಿಯಮನವೂ, ಕುಕ್ಕುಟಾಸನ ಮುಂತಾದ ಕಾಯಕ್ಲೇಶವೂ ತಪವೆನಿಸುವುವು.

ಆರ್ಯಷಟ್ಕರ್ಮನಿರತರಾದ ಕ್ಷತ್ರಿಯರಲ್ಲಿ ಜಾತಿಕ್ಷತ್ರಿಯ, ತೀರ್ಥಕ್ಷತ್ರಿಯ ಎಂಬ ಎರಡು ಭೇದಗಳು. ಜಾತಿಕ್ಷತ್ರಿಯರಲ್ಲಿ ಕ್ಷತ್ರಿಯ, ಬ್ರಾಹ್ಮಣ, ವೈಶ್ಯ, ಶೂದ್ರ, ಎಂಬ ನಾಲ್ಕು ಭೇದಗಳು.

ಭಿಕ್ಷುಗಳಲ್ಲಿ ಅನಗಾರ, ಯತಿ, ಮುನಿ, ದೇವಋಷಿ ಎಂದು ನಾಲ್ಕು ಭೇದಗಳು. ಯತಿಗಳಲ್ಲಿ ಉಪಶಮಶ್ರೇಣ್ಯಾರೋಹಣ, ಕ್ಷಪಕಶ್ರೇಣ್ಯಾರೋಹಣ ಎಂದು ಎರಡು ಭೇದಗಳು. ಮುನಿಗಳಲ್ಲಿ ಅವಧಿಜ್ಞಾನಿ, ಮನಃಪರ್ಯಯಜ್ಞಾನಿ, ಕೇವಲಜ್ಞಾನಿ ಎಂದು ಮೂರು ಭೇದಗಳು. ಋಷಿಗಳಲ್ಲಿ ಋದ್ಧಿಪ್ರಾಪ್ತಋಷಿ, ರಾಜಋಷಿ, ಬ್ರಹ್ಮರ್ಷಿ, ದೇವರ್ಷಿ, ಪರಮರ್ಷಿ ಎಂದು ಐದು ಭೇದಗಳು. ರಾಜರ್ಷಿಗಳಲ್ಲಿ ವಿಕ್ರಿಯಾಶಕ್ತಿಯುಕ್ತರೂ, ಅಕ್ಷೀಣಋದ್ಧಿಪ್ರಾಪ್ತರೂ

ಎಂದು ಎರಡು ಭೇದಗಳು. ಬ್ರಹ್ಮರ್ಷಿಗಳಲ್ಲಿ ಬುದ್ಧಿಋದ್ಧಿಯುಳ್ಳವರೂ, ಔಷಧ ಋದ್ಧಿಯುಳ್ಳವರೂ ಎಂದು ಎರಡು ಭೇದಗಳು. ಗಗನಗಮನಸಾಮರ್ಥ್ಯವುಳ್ಳವರು ದೇವರ್ಷಿಗಳು; ಕೇವಲಜ್ಞಾನಿಗಳು ಪರಮರ್ಷಿಗಳೆನಿಸುವರು. ಜೈನರಲ್ಲಿ **ಸಪ್ತಪರಮಸ್ಥಾನಗಳು** ವಾಂಛನೀಯಗಳು; ಅವು ಯಾವುವೆಂದರೆ- ಸಜ್ಜಾತಿತ್ವ ಸದ್ಗೃಹಸ್ಥತ್ವ, ಪಾರಿವ್ರಾಜ್ಯ, ದೇವೇಂದ್ರತ್ವ, ಚಕ್ರವರ್ತಿತ್ವ, ಪರಮಾರ್ಹಂತ್ಯತ್ವ ನಿರ್ವಾಣ ಎಂಬಿವು. ಸತ್ಕುಲದಲ್ಲಿ ಸಮ್ಯಗ್‌ದೃಷ್ಟಿಯಾಗಿ ಹುಟ್ಟುವುದು ಸಜ್ಜಾತಿತ್ವವು; ಕ್ರಮದಿಂದ ಅಭಿವೃದ್ಧಿಯನ್ನೈದಿ ಶ್ರಾವಕಾಗ್ರಣಿಯಾಗಿ ಬಾಳುವುದು ಸದ್ಗೃಹಸ್ಥತ್ವವು; ಇಂತಹ ಸದ್ಗೃಹಸ್ಥತ್ವಕ್ಕೆ ಹೇಸಿ ಸಂಸಾರನಿರ್ವೇಗದಿಂದ ತನ್ನ ಸಂತತಿಗೆ ಸಕಲದತ್ತಿಯನ್ನಿತ್ತು ದಿವ್ಯತಪೋಧನರ ಪಾದಮೂಲದಲ್ಲಿ ಜಾತರೂಪಧರನಾಗಿ ಬಾಹ್ಯಾಭ್ಯಂತರ ತಪದಿಂದ ಏಕಾದಶಾಂಗಧಾರಿಯಾಗಿ, ಷೋಡಶ ಭಾವನೆಗಳನ್ನು ಭಾವಿಸಿ ತೀರ್ಥಕರಪುಣ್ಯವನ್ನು ಪಡೆದು ಚತುರ್ವಿಧಾರಾಧನ ಪುರಸ್ಸರವಾಗಿ ಸಮಾಧಿವಿಧಿಯಿಂದ ಪ್ರಾಣಪರಿತ್ಯಾಗ ಮಾಡುವುದು ಪಾರಿವ್ರಾಜ್ಯವು; ಈ ಪಾರಿವ್ರಾಜ್ಯದ ಫಲದಿಂದ ದೇವಲೋಕದಲ್ಲಿ ದಿವ್ಯಶರೀರವನ್ನು ಪಡೆದು ದೇವೇಂದ್ರನಾಗುವುದು ದೇವೇಂದ್ರತ್ವವು; ಅಲ್ಲಿಂದ ಬಂದು ಮರ್ತ್ಯಲೋಕದಲ್ಲಿ ಪುಟ್ಟಿ ಸುರೇಂದ್ರವಂದ್ಯನಾಗಿ ಗರ್ಭಾವತರಣಾದಿ ಪಂಚಕಲ್ಯಾಣಗಳನ್ನು ಪಡೆದು ಕುಮಾರ ಕಾಲಾನಂತರದಲ್ಲಿ ಷಟ್‌ಖಂಡ ಮಂಡಲಾಧಿಪತ್ಯವನ್ನು ಪಡೆವುದು ಚಕ್ರವರ್ತಿತ್ವವು. ಆ ಚಕ್ರವರ್ತಿತ್ವದಲ್ಲಿ ವಿರಕ್ತಿಯನ್ನು ಪಡೆದು ಲೌಕಾಂತಿಕದೇವರು ಬಂದು ಪ್ರತಿಬೋಧಿಸಲು ದೀಕ್ಷೆಯನ್ನು ಗ್ರಹಿಸಿ ಶುಕ್ಲಧ್ಯಾನದಿಂದ ಘಾತಿಕರ್ಮಚತುಷ್ಟಯವನ್ನು ನಾಶಗೊಳಿಸಿ ಅನಂತ ಚತುಷ್ಟಯವನ್ನು ಪಡೆದು ಸಮವಸರಣ ಲಕ್ಷ್ಮಿಯನ್ನೈದಿರುವುದು ಪರಮಾರ್ಹಂತ್ಯವು. (ಸಮವಸರಣ-ತೀರ್ಥಕರನಾಗುವ ಮಹಾಪುರುಷನಿಗೆ ಕೇವಲಜ್ಞಾನೋತ್ಪತ್ತಿಯಾದ ಬಳಿಕ ಉಂಟಾಗುವ ಮಹಾಸಭೆ.) ಘಾತಿ ಚತುಷ್ಟಯದ ನಾಶವಾದ ಬಳಿಕ ಅಘಾತಿಚತುಷ್ಟಯವನ್ನು ನಿಃಶ್ಶೇಷವಾಗಿ ನಾಶಗೊಳಿಸಿ ಸಮ್ಯಕ್ತ್ವವೊದಲಾದ ಎಂಟು ಗುಣಗಳನ್ನು ಪಡೆದು ಪರಿನಿರ್ವಾಣವನ್ನೈದುವುದು ನಿರ್ವಾಣತ್ವವೆನಿಸುವುದು.

**ಸಲ್ಲೇಖನೆ**- ಶ್ರಾವಕನು ತನಗೆ ಮರಣವು ಸಮೀಪಿಸಿದುದನ್ನು ಬೇರೆ ಬೇರೆಬೇರೆ ಶಕುನ, ನಿಮಿತ್ತಗಳಿಂದ ಮೊದಲೇ ತಿಳಿದುಕೊಳ್ಳಬಹುದು. ಹೀಗೆ ತನ್ನ ಆಯುರವಸಾನವನ್ನು ತಿಳಿದಬಳಿಕ ಎಲ್ಲರಲ್ಲಿ ಕ್ಷಮೆಯನ್ನು ಮಾಡಿ ಗುರುಗಳ ಸನ್ನಿಧಿಯಲ್ಲಿ, ಜೀವಿತಾವಧಿಯಲ್ಲಿ ಘಟಿಸಿದ ಸಮಸ್ತ ವಿಚಾರಗಳನ್ನಾಲೋಚಿಸಿ ಕ್ರಮದಿಂದಾಹಾರವನ್ನು ತೊರೆದು ಪಂಚಪದಗಳನ್ನು ಭಾವಿಸುತ್ತ ನಿಜ ಶುದ್ಧಾತ್ಮನನ್ನು ಚಿಂತಿಸುತ್ತ ಲೋಕಾಗ್ರದಲ್ಲಿ ಮತಿಯನ್ನಿರಿಸಿ ಶರೀರಭಾರವನ್ನಿಳುಹುವುದು.

**ಗೃಹಸ್ಥರು ಮಾಡುವ ಸಲ್ಲೇಖನೆಯ ಕ್ರಮ–** ಸಲ್ಲೇಖನೆಯಲ್ಲಿ ಶರೀರ ಸಲ್ಲೇಖನೆ, ಕಷಾಯಸಲ್ಲೇಖನೆ ಎಂದು ಎರಡು ಭೇದಗಳುಂಟು. ಅನಶನಾದಿ ಬಾಹ್ಯತಪಗಳಿಂದ ಶರೀರವನ್ನು ಕೃಶಮಾಡುವುದು ಶರೀರಸಲ್ಲೇಖನೆಯು. ಪರಿಣಾಮೋತ್ಪತ್ತಿ ಕಾರಣಗಳಾದ ಸಮಸ್ತ ವಸ್ತುಗಳನ್ನು ತೊರೆವುದೂ, ಕಷಾಯಗಳನ್ನಡಗಿಸುವುದೂ ಕಷಾಯಸಲ್ಲೇಖನೆಯೆನಿಸುವುದು. ಉಪಸರ್ಗ, ದುರ್ಭಿಕ್ಷಾದಿಗಳು ಒದಗಿದರೆ ಅವುಗಳಿಗೆ ಪ್ರತೀಕಾರವನ್ನೇನೂ ಮಾಡಲಾರದಂತಿದ್ದರೆ ಆಗ ಶರೀರಪರಿತ್ಯಾಗವನ್ನೇ ಮಾಡಬಹುದು. ಇದೂ ಸಲ್ಲೇಖನೆಯೇ ಎನಿಸುವುದು.

ಉಪಸರ್ಗೇ ದುರ್ಭಿಕ್ಷೇ ಜರಸಿ ರುಜಾಯಾಂಚ ನಿಷ್ಪ್ರತೀಕಾರೇ।
ಧರ್ಮಾಯ ತನುವಿಮೋಚನಮಾಹುಃ ಸಲ್ಲೇಖನಾಮಾರ್ಯಾಃ॥
ಸಮಂತಭದ್ರಸ್ವಾಮಿ.

**ಅರ್ಥ–** ಉಪಸರ್ಗ, ದುರ್ಭಿಕ್ಷ, ಮುಪ್ಪು, ರೋಗ ಇವುಗಳಿಗೆ ಪ್ರತೀಕಾರವಿಲ್ಲದಿರುವಾಗ ಧರ್ಮಕ್ಕಾಗಿ ಶರೀರವನ್ನು ಬಿಡುವುದು ಸಲ್ಲೇಖನೆಯೆನಿಸುವುದು. ಇದು ತಪದ ಫಲವು; ಇದೇ ತಪಸ್ವಿಗಳು ಬಯಸುವ ಸಮಾಧಿಮರಣವೆನಿಸುವುದು.

**ಸಲ್ಲೇಖನೆಯ ವಿಧಾನ–** ಸಲ್ಲೇಖನಾಮರಣವನ್ನು ಬಯಸುವ ತಪೋಧನನು ಜಿನಾಗಮಕುಶಲರಾದ ಆಚಾರ್ಯರ ಬಳಿಯನ್ನೈದಿ ಜೀವಿತ ಕಾಲದಲ್ಲಿ ಮಾಡಿದ ದೋಷಗಳನ್ನೂ ನಿಂದಾಗರ್ಹಣೆಗಳನ್ನೂ ಅವರೊಡನೆ ಆಲೋಚಿಸಿ ಪ್ರಾಯಶ್ಚಿತ್ತವನ್ನು ಮಾಡಿಕೊಂಡು, ಬಳಿಕ ಸಮಚತುರಸ್ರವೂ ಚತುರ್ಗೋಪುರಸಮನ್ವಿತವೂ ಆದ ಮಂಡಪವನ್ನು ಗೃಹಸ್ಥರಿಂದ ಮಾಡಿಸಿ ಅದರ ನಡುವೆ ಒಂದು ಮೃತ್ತಿಕಾವೇದಿಕೆಯನ್ನು ಮಾಡಿಸಿ ಪೂರ್ವದಿಕ್ಕಿನಲ್ಲಿಯೂ ಉತ್ತರದಿಕ್ಕಿನಲ್ಲಿಯೂ ಜಿನಪ್ರತಿಮೆಯನ್ನು ಪೂಜಾಪೂರ್ವಕವಾಗಿ ಸ್ಥಾಪಿಸಿ ವೇದಿಕೆಯ ನಡುವೆ ಸಮಾಧಿಮರಣಾಪೇಕ್ಷಿಯಾದ ತಪೋಧನನು ಪಲ್ಯಂಕಾಸನದಲ್ಲಾಗಲಿ, ಏಕಪಾರ್ಶ್ವದಲ್ಲಾಗಲಿ ಕುಳಿತುಕೊಳ್ಳಬೇಕು. ಆ ವೇದಿಕೆಯನ್ನು ತೋರಣ, ಧ್ವಜ, ವಿತಾನ, ಪುಷ್ಪದಾಮ, ದೀಪ, ಧೂಪ ಭೃಂಗಾರ, ಕಲಶ, ದರ್ಪಣ, ಚಾಮರಾದಿ ದ್ರವ್ಯಗಳಿಂದಲಂಕರಿಸಿ ಜಿನಾಭಿಷೇಕಪೂರ್ವಕವಾಗಿ ಪೂಜಾರ್ಚನಾದಿಗಳನ್ನು ಮುಗಿಸಿದ ಬಳಿಕ ಮೊದಲೇ ಆಮಂತ್ರಿತರಾದ ಋಷಿಗಳಲ್ಲಿ ಏಳು ತಂಡ ಋಷಿಗಳನ್ನು ಪೂರ್ವದ್ವಾರದಲ್ಲಿ ಪ್ರಥಮಾನುಯೋಗಶಾಸ್ತ್ರವನ್ನೋದುತ್ತಿರಿಯೆಂದು ನಿಯೋಜಿಸಿ, ದಕ್ಷಿಣದ್ವಾರದಲ್ಲಿ ಏಳು ತಂಡ ಋಷಿಗಳನ್ನು ಕರಣಾನುಯೋಗವನ್ನೋದುತ್ತಿರಿಯೆಂದು ನಿಯೋಜಿಸಿ, ಪಶ್ಚಿಮದ್ವಾರದಲ್ಲಿ ಏಳು ತಂಡ ಋಷಿ

ಗಳನ್ನು ಕರಣಾನುಯೋಗವನ್ನೋದುತ್ತಿರಿಯೆಂದು ನಿಯೋಜಿಸಿ, ಉತ್ತರದ್ವಾರದಲ್ಲಿ ದ್ರವ್ಯಾನುಯೋಗವನ್ನೋದುತ್ತಿರಿಯೆಂದು ಏಳು ತಂಡ ಋಷಿಗಳನ್ನು ನಿಯೋಜಿಸಿ ತನ್ನ ಬಳಿಯಲ್ಲಿ ಚತುರ್ವಿಧಾರಾಧನಾ ಗ್ರಂಥಗಳನ್ನೋದುತ್ತಿರಿಯೆಂದು ಏಳು ತಂಡ ಋಷಿಗಳನ್ನು ನಿಯೋಜಿಸಿ ಪಥ್ಯಪಾನಗಳಿಂದ ಮಲಮೂತ್ರಾದಿಗಳನ್ನು ಪರಿಹರಿಸಿ ನಿರವದ್ಯವೃತ್ತಿಯಿಂದ ವಿಸರ್ಜಿಸುವುದಕ್ಕೆ ಏಳು ತಂಡ ಋಷಿಗಳನ್ನು ನಿಯಮಿಸಿ ಗ್ರಾಮದ ಅಗಸೆಯ ವರೆಗೆ ಹೋಗಿ ದೇಶಕಾಲಗ್ರಾಮರಾಜ್ಯಾದಿಗಳ ಸುಸ್ಥಿತಿದುಸ್ಥಿತಿಗಳ ಸಮಾಚಾರವನ್ನು ತರಲು ಏಳು ಜನ ಋಷಿಗಳನ್ನು ನಿಯಮಿಸಿ ಈ ಮೇರೆಗೆ ನಾಲ್ವತ್ತೊಂಭತ್ತು ಋಷಿಗಳನ್ನು ಹಿಂದೆ ಹೇಳಿದ ಅವರವರ ಕಾರ್ಯದಲ್ಲಿ ತೊಡಗಿಸಬೇಕು. ಬಳಿಕ ಬೇರೆ ಒಬ್ಬ ಆಚಾರ್ಯರನ್ನು ಕರೆದು ಷೋಡಶ ಭಾವನೆಗಳನ್ನೂ, ೩೪ ಅತಿಶಯಗಳನ್ನೂ, ಚಿದಾನಂದೈಕಸ್ವರೂಪವನ್ನೂ ವೀತರಾಗನಿರ್ವಿಕಲ್ಪಸಮಾಧಿಸ್ವರೂಪವನ್ನೂ ಅವರು ಹೇಳುತ್ತಿರಲು ತಾನು ಕೇಳುತ್ತಲೂ, ಮನದಲ್ಲಿ ಭಾವಿಸುತ್ತಲೂ ಇರಬೇಕು. ತರುವಾಯ ಗುರುವು ಹೇಳಿದ ಮೇರೆಗೆ ಶರೀರವನ್ನು ಜುಗುಪ್ಸೆಬಟ್ಟು, ಪರಿತ್ಯಜಿಸಿ ಗತ್ಯಂತರನನ್ನೈದುವುದು ಭಕ್ತಪ್ರತ್ಯಾಖ್ಯಾನಮರಣವೆನಿಸುವುದು. ಇದೊಂದು ಸಲ್ಲೇಖನೆಯ ಭೇದವು. ಇದೇ ಮೇರೆಗೆ ಇಂಗಿನೀಮರಣ ಪ್ರಾಯೋಗಮರಣ ಎಂಬ ಸಲ್ಲೇಖನೆಗಳು ಸ್ವಲ್ಪ ಹೆಚ್ಚುಕಡಿಮೆಯಾಗಿ ಹೇಳಲ್ಪಟ್ಟಿವೆ. ಹೀಗೆ ಉಪವಾಸವನ್ನು ಕೈಕೊಂಡು, ಪಂಚ ನಮುಸ್ಕಾರಗಳಲ್ಲಿಯೂ ಸ್ವಾತ್ಮಸ್ವರೂಪದಲ್ಲಿಯೂ ಮನವನ್ನಿಟ್ಟು ಸರ್ವ ಪ್ರಯತ್ನದಿಂದ ಶೀತೋಷ್ಣಾದಿ ಪರೀಷಹಗಳನ್ನು ಸೈರಿಸುತ್ತ ಪಲ್ಯಂಕಾಸನದಲ್ಲಿ ದೃಢನಾಗಿ ಇಲ್ಲವೆ ಮಲಗಿ ಮುನಿಜನಗಳು ಓದುವ ಪಂಚನಮಸ್ಕಾರಗಳನ್ನು ಕೇಳುತ್ತ ತಾನೂ ಅವನ್ನು ಬಾಯಿಂದ ಹೇಳುತ್ತ ಅಶಕ್ತನಾಗಿದ್ದರೆ ಅವುಗಳ ಆದ್ಯಕ್ಷರಗಳನ್ನುಮಾತ್ರ ಹೇಳುತ್ತ ಇಲ್ಲವೆ ಓಂ ಎಂಬ ಅಕ್ಷರವನ್ನಾದರೂ ಹೇಳುತ್ತ ಇಲ್ಲವೆ ಮನದಲ್ಲಿ ಭಾವಿಸುತ್ತ ಅದಕ್ಕೂ ಶಕ್ತಿ ಸಾಲದಂತಾದರೆ ಮತ್ತೊಂದು ವಸ್ತುವಿನ ಕಡೆಗೆ ಮನವನ್ನು ಹೋಗಗೊಡದೆ ತನ್ನ ನಿರ್ಮಲ ಸ್ವರೂಪವನ್ನು ಭಾವಿಸುತ್ತ ಶರೀರಪರಿತ್ಯಾಗವನ್ನು ಮಾಡಬೇಕು.

ಮರಣವು ನಿತ್ಯಮರಣ, ತದ್ಭವಮರಣವೆಂದು ಎರಡು ಬಗೆಯಾಗಿ, ಇಲ್ಲವೆ ಭಕ್ತಪ್ರತ್ಯಾಖ್ಯಾನಮರಣ, ಇಂಗಿನೀಮರಣ, ಪ್ರಾಯೋಪಗಮನಮರಣವೆಂದು ಮೂರು ಬಗೆಯಾಗಿ, ಇಲ್ಲವೆ ಸಮ್ಯಕ್ತ್ವಮರಣ, ಸಮಾಧಿಮರಣ, ಪಂಡಿತಮರಣ, ವೀರ್ಯಮರಣ ಎಂದು ನಾಲ್ಕು ಬಗೆಯಾಗಿ ಇಲ್ಲವೆ ಬಾಲಬಾಲಮರಣ ಬಾಲಮರಣ, ಬಾಲ ಪಂಡಿತ ಮರಣ, ಪಂಡಿತಮರಣ ಪಂಡಿತ ಪಂಡಿತಮರಣ ಎಂದು ಐದು ಬಗೆಯಾಗಿ ಇರುವುದು.

ಗರ್ಭದಿಂದಾರಂಭಿಸಿ ಪ್ರತಿಕ್ಷಣದಲ್ಲಿ ಆಯುಷ್ಯವು ಕುಂದುತ್ತಿರುವುದು ನಿತ್ಯ ಮರಣವು ಇಲ್ಲವೆ ಆವೀಚಿಮರಣವೆನಿಸುವುದು. ಜನ್ಮಾಂತರ ಪ್ರಾಪ್ತಿಯನ್ನು ತರುವುದು ತದ್ಭವ ಮರಣವು.

ಸಮ್ಯಗ್ದರ್ಶನಜ್ಞಾನಚಾರಿತ್ರತಪಗಳೆಂಬ ಚತುರ್ವಿಧಾರಾಧನೆಗಳಲ್ಲಿ ಒಂದೂ ಇಲ್ಲದ ಮಿಥ್ಯಾದೃಷ್ಟಿಯಾದವನ ಸಾವು ಬಾಲಬಾಲಮರಣವು; ಸಮ್ಯಗ್ದರ್ಶನಾರಾಧನೆಯುಳ್ಳ ಅಸಂಯತಸಮ್ಯಗ್‌ದೃಷ್ಟಿಯ ಸಾವು ಬಾಲಮರಣವು; ಸಮ್ಯಗ್ದರ್ಶನಜ್ಞಾನ ಏಕದೇಶಚಾರಿತ್ರಗಳನ್ನು ತನಗೆ ವಶಮಾಡಿಕೊಂಡ ದೇಶವ್ರತಿಯ ಮರಣವು ಬಾಲಪಂಡಿತ ಮರಣವು; ಚತುರ್ವಿಧಾರಾಧನೆಯಲ್ಲಿಯೂ ನಿರತಿಚಾರವಾಗಿ ಕೂಡಿದ ಮಹಾವ್ರತಿಯ ಮರಣವು ಪಂಡಿತಮರಣವು; ಅದೇ ಜನ್ಮದಲ್ಲಿ ಕರ್ಮನಾಶವನ್ನು ಮಾಡಿ ಸಮಯಮಾತ್ರದಲ್ಲಿ ಲೋಕಾಗ್ರವಾಸಿಯಾದವನ ಸಾವು ಪಂಡಿತಪಂಡಿತ ಮರಣವು. ಇಂತು ಮರಣಭೇದಗಳು ಹಲವು ಹೇಳಲ್ಪಟ್ಟಿವೆ.

---

## ೮. ಜೈನಮಹಾಪುರುಷ ಪರಂಪರೆ.

ಜೈನ ಧರ್ಮವು ಅನಾದಿಯಾದುದು. ಅತಿಪ್ರಾಚೀನಕಾಲದಿಂದ ತೀರ್ಥಂಕರರು, ಚಕ್ರವರ್ತಿಗಳು, ನಾರಾಯಣರು ಮೊದಲಾದವರೂ, ಇನ್ನೂ ಹಲವು ಜನ ಮಹಾಪುರುಷರೂ ವಿದ್ವಾಂಸರೂ ಆಗಿ ಹೋದರು. ವರ್ತಮಾನ ಕಾಲದ ಕೊನೆಯ ತೀರ್ಥಂಕರನಾದ ಮಹಾವೀರ ಸ್ವಾಮಿಯು ನಿರ್ವಾಣಹೊಂದಿದ ಬಳಿಕ ಇಂದಿಗೆ ೨೪೫೦ ವರ್ಷಗಳಾದುವು. ಮಹಾವೀರ ಸ್ವಾಮಿಯ ನಿರ್ವಾಣವಾದ ತರುವಾಯ ಗೌತಮ, ಸುಧರ್ಮ ಜಂಬುಸ್ವಾಮಿ, ಎಂಬವರು ಸಾಮಾನ್ಯಕೇವಲಿಗಳಾಗಿ ಮೋಕ್ಷವನ್ನೈದಿದರು. ತರುವಾಯ ನಂದಿಮಿತ್ರ, ಅಪರಾಜಿತ, ವಿಷ್ಣುಮುನಿ, ಗೋವರ್ಧನ, ಭದ್ರಬಾಹುಗಳೆಂಬ ಐವರು ಶ್ರುತಕೇವಲಿಗಳಾದರು. ಆಬಳಿಕ ವಿಶಾಲದತ್ತ, ನಾಗಸೇನ, ಧರ್ಮಸೇನ ಮೊದಲಾದ ಹನ್ನೊಂದು ಜನರು ಹನ್ನೊಂದು ಅಂಗಗಳನ್ನೂ ದಶಪೂರ್ವಶಾಸ್ತ್ರಗಳನ್ನೂ ಧರಿಸುವ ಮಹಾತ್ಮರು ಆಗಿ ಹೋದರು. ಆ ಬಳಿಕ ಸುಭದ್ರ, ಯಶೋಭದ್ರ, ಅರ್ಹದ್ಬಲಿ, ಮಾಘನಂದಿ, ಪುಷ್ಪದಂತ, ಭೂತಬಲಿ ಮೊದಲಾದ ಆಚಾರ್ಯರು ಆಗಿ ಹೋದರು. ಅವರಲ್ಲಿ ಕುಂದ ಕುಂದಾಚಾರ್ಯ, ಉಮಾಸ್ವಾಮಿ ಆಚಾರ್ಯ, ಸಮಂತ ಭದ್ರಾಚಾರ್ಯ, * ಪೂಜ್ಯಪಾದಾಚಾರ್ಯ

---

* ಸಮಂತಭದ್ರ, ಪೂಜ್ಯಪಾದ, ಕವಿಪರಮೇಷ್ಠಿ ಈ ಆಚಾರ್ಯರನ್ನು ಹಲವು ಪ್ರಾಚೀನ ಜೈನ ಕನ್ನಡಕವಿಗಳು ತಂತಮ್ಮ ಗ್ರಂಥಗಳ ಆದಿಯಲ್ಲಿ ಸ್ತುತಿಸಿರುವರು. ಈ ಮೂವರ ಚರಿತಗಳನ್ನು ಕನ್ನಡ ಕವಿಚರಿತ್ರೆಯ ಒಂದನೆಯ ಭಾಗದಲ್ಲಿ ನೋಡಿಕೊಳ್ಳಬಹುದು.

ನೇಮಿಚಂದ್ರಸಿದ್ಧಾಂತಚಕ್ರವರ್ತಿ, ಮಾನತುಂಗಾಚಾರ್ಯ, ಅಕಲಂಕಾಚಾರ್ಯ, ಜಿನಸೇನಾಚಾರ್ಯ, ಸೋಮದೇವಸೂರಿ, ಶಾಕಟಾಯನಾಚಾರ್ಯ, ಮೊದಲಾದವರು ಪ್ರಸಿದ್ಧರಾಗಿರುವರು. ಇದಲ್ಲದೆ ಹಿಂದೆ, ಕನ್ನಡ ಗುಜರಾಥಿ, ಮರಾಠಿ, ಭಾಷೆಗಳಲ್ಲಿ ಹಲವರು ಗಂಥಗಳನ್ನು ಬರೆದ ವಿದ್ವಾಂಸರೂ ಕವಿಗಳೂ ಆಗಿ ಹೋಗಿರುವರು. ಕನ್ನಡ ಭಾಷೆಯಲ್ಲಿ ಗ್ರಂಥಗಳನ್ನು ಬರೆದವರಲ್ಲಿ ಶ್ರೀವರ್ಧದೇವ, ನಾಗಾರ್ಜುನ, ಶ್ರೀವಿಜಯ, ನೃಪತುಂಗ, ಪಂಪ, ಅಸಗ, ಪೊನ್ನ, ಚಾವುಂಡರಾಯ, ರನ್ನ, ನಾಗಚಂದ್ರ, ಕಂತಿ, ನಯಸೇನ, ಕರ್ಣಪಾರ್ಯ, ನಾಗವರ್ಮ, ವೃತ್ತವಿಲಾಸ ಮೊದಲಾದ ಹಲವು ಜನರು ಪ್ರಮುಖರಾಗಿರುವರು. (೧)

ಕುಂಡಕುಂದಾಚಾರ್ಯ.

ಈತನು ನಂದಿಸಂಘದೊಳಗಿನವನು. ಈತನು ವೀರಸಂವತ್ ೬೯೭ರಲ್ಲಿ ಮಾಳವಾಪ್ರಾಂತದಲ್ಲಿ ಬುಂದಿಕೋಟದ ಬಳಿಯಲ್ಲಿ ಬಾರಾಪುರದಲ್ಲಿ ಜನಿಸಿದನು. ತಂದೆ ಕುಂದಶ್ರೇಷ್ಠಿ, ತಾಯಿ ಕಂದಲತೆ. ಆ ಕಾಲದಲ್ಲಿ ಅಧ್ಯಾತ್ಮವಿದ್ಯೆಯ ಕಡೆಗೆ ಜನರ ಒಲವು ವಿಶೇಷವಾಗಿದ್ದದರಿಂದ ಕುಂದ ಶ್ರೇಷ್ಠಿಯು ಮಗನನ್ನು ಅಧ್ಯಾತ್ಮ ವಿಷಯದಲ್ಲಿ ಪ್ರವೀಣನನ್ನಾಗಿ ಮಾಡಿದನು. ಈ ಆಚಾರ್ಯನು ಆ ವಿಷಯದಲ್ಲಿ ಸುಮಾರು ಐವತ್ತು ಗ್ರಂಥಗಳನ್ನು ಬರೆದಿರುವನು. ಅವುಗಳಲ್ಲಿ ಕೆಲವು ಉಪಲಬ್ಧವಿರುವವು. ಈತನು ತನ್ನ ಮುನಿಸಂಘದೊಡನೆ ಗಿಂನಾರ ಪರ್ವತಕ್ಕೆ ಹೋಗಿ ದಿಗಂಬರಮತದ ಮಹತ್ತ್ವವನ್ನು ಸ್ಥಾಪಿಸಿದನು. ಈತನು ತನ್ನ ವಯಸ್ಸಿನ ಮೂವತ್ತು ಮೂರನೆಯ ವರ್ಷ ಜಿನದೀಕ್ಷೆಯನ್ನು ಸ್ವೀಕರಿಸಿದನು. ಈತನ ಗುರು ಜಿನಚಂದ್ರಸ್ವಾಮಿ. ಉಮಾಸ್ವಾಮಿಯು ಈತನ ಶಿಷ್ಯನು.

ಉಮಾಸ್ವಾಮ್ಯಾಚಾರ್ಯ.

ತತ್ತ್ವಾರ್ಥಸೂತ್ರವೆಂಬ ಸುಪ್ರಸಿದ್ಧ ಮೋಕ್ಷಶಾಸ್ತ್ರಗ್ರಂಥವನ್ನು ರಚಿಸಿದವನು. ಈತನು ಹದಿನೇಳನೆಯ ವರ್ಷವೇ ದೀಕ್ಷೆಯನ್ನು ಹೊಂದಿ ಚೆನ್ನಾಗಿ ಶಾಸ್ತ್ರಾಭ್ಯಾಸ ಮಾಡಿದ್ದನು.

ನೇಮಿಚಂದ್ರ (ಸಿದ್ಧಾಂತ ಚಕ್ರವರ್ತಿ)

ಈತನು ನಂದಿಸಂಘದಲ್ಲೊಬ್ಬನು. ಈತನ ಗುರು ಅಭಯನಂದಿಸ್ವಾಮಿ. ಇವನು ವಿ. ಸಂ. ೭೩೫ರಲ್ಲಿ ದ್ರಾವಿಡದೇಶದ ಮಧುರೆಯಲ್ಲಿ ವಾಸಿಸುತ್ತಿದ್ದನು. ಆಗ ಅಲ್ಲಿ ಗಂಗವಂಶದ ರಾಜಮಲ್ಲನು ಆಳುತ್ತಿದ್ದನು. ಚಾಮುಂಡರಾಯನು ಆತನ ಮಂತ್ರಿಯು. ಇವರಿಬ್ಬರಿಗೂ ನೇಮಿಚಂದ್ರನು ಪೂಜ್ಯನಾಗಿದ್ದನು. ಅರಸನು ಗುಣಾಲುಬ್ಧನಾಗಿ ಸಿದ್ಧಾಂತ ಚಕ್ರವರ್ತಿಯೆಂಬ ಬಿರುದನ್ನು ನೇಮಿಚಂದ್ರನಿಗೆ ಕೊಟ್ಟನು. ಈ ಆಚಾರ್ಯನು ಗೋಮಟ್ಟಸಾರ, ತ್ರೈಲೋಕ್ಯಸಾರ, ಕ್ಷಪಣ, ದ್ರವ್ಯಸಂಗ್ರಹ, ಮೊದಲಾದ ಗ್ರಂಥಗಳನ್ನು ಬರೆದಿರುವನು. ಇವುಗಳಲ್ಲಿ ಗೋಮಟ್ಟಸಾರವು ಬಹಳ ಮಹತ್ತ್ವದ ಗ್ರಂಥವಾಗಿದೆ.

---

(೧) ಕರ್ನಾಟಕ ಜೈನ ಕವಿಗಳ ಚರಿತ್ರೆಗಳನ್ನು ಕವಿ ಚರಿತೆಯಲ್ಲಿ ನೋಡಿಕೊಳ್ಳಬಹುದು.

## ಅಕಲಂಕಾಚಾರ್ಯ.

ಖೇಟ ನಗರದ ಶುಭತುಂಗರಾಜನ ಮಂತ್ರಿಯಾದ ಪುರುಷೋತ್ತಮನಿಗೆ ಅಕಲಂಕ ಮತ್ತು ನಿಷ್ಕಲಂಕ ಎಂದು ಇಬ್ಬರು ಮಕ್ಕಳು. ಅವರು ಬ್ರಹ್ಮಚರ್ಯ ವ್ರತದಿಂದ ಜೈನಶಾಸ್ತ್ರಗಳನ್ನು ಚೆನ್ನಾಗಿ ಓದಿದರು. ಆ ಕಾಲದಲ್ಲಿ ಬೌದ್ಧಧರ್ಮವು ಪ್ರಬಲವಾಗಿದ್ದದರಿಂದ ಅವರ ಗ್ರಂಥಗಳನ್ನೋದಿ ಆ ಧರ್ಮವನ್ನು ಖಂಡಿಸಬೇಕೆಂದು ಈ ಇಬ್ಬರು ಒಂದು ಬೌದ್ಧ ಪಾಠಶಾಲೆಯಲ್ಲಿ ಬೌದ್ಧವೇಷದಿಂದ ಅಭ್ಯಾಸ ಮಾಡತೊಡಗಿದರು. ಒಮ್ಮೆ ಬೌದ್ಧಗುರುವೊಬ್ಬನು ಜೈನರ ಸಪ್ತ ಭಂಗಿಯವಿಚಾರ ನಡೆಸಿದಾಗ ಆ ಪುಸ್ತಕದಲ್ಲಿ ತಪ್ಪು ಇದ್ದದರಿಂದ ಅದರ ಅರ್ಥವು ಆತನಿಗೆ ಚೆನ್ನಾಗಿ ತಿಳಿದಿರಲಿಲ್ಲ. ಅದರಿಂದ ಆ ಪುಸ್ತಕವನ್ನು ಅಷ್ಟಕ್ಕೇ ಬಿಟ್ಟು ಆ ಗುರುವು ಬೇರೆ ಕೆಲಸಕ್ಕೆ ಹೋಗಿರುವಾಗ ಅಕಲಂಕನು ಆ ಅರ್ಥವಾಗದ ತಪ್ಪು ಪದ್ಯವನ್ನು ತಿದ್ದಿ ಬಂದನು. ಬೌದ್ಧಗುರುವಿಗೆ ಸಂಶಯ ಬರಲು ಆತನು ತನ್ನ ಪಾಠಶಾಲೆಯಲ್ಲಿ ಜೈನರು ಬೌದ್ಧವೇಷದಿಂದ ಇರುವರೆಂದು ಅರಸನಿಗೆ ತಿಳಿಸಿ ಅವರ ನಾಶಕ್ಕಾಗಿ ಪ್ರಯತ್ನಿಸಿದನು. ನಿಷ್ಕಲಂಕನು ಹತನಾದನು. ಅಕಲಂಕನು ಪಾರಾಗಿ ಹಿಮಶೀತಲನೆಂಬ ಅರಸನ ಸಭೆಗೆ ಹೋಗಿ ಬೌದ್ಧರೊಡನೆ ವಾದಮಾಡಿ ಅವರನ್ನು ಸೋಲಿಸಿದನು. ಆಗ ಆ ಅರಸನು ಬೌದ್ಧ ಧರ್ಮವನ್ನು ಬಿಟ್ಟು ಜೈನಧರ್ಮವನ್ನು ಸ್ವೀಕರಿಸಿದನು.

ಇನ್ನೂ ಹಲವು ಜನ ಮಹಾಪುರುಷರು ಆಗಿಹೋಗಿರುವರು. ಶಾಕಟಾಯನಾಚಾರ್ಯ, ಹೇಮಚಂದ್ರಾಚಾರ್ಯ, ಅಮರಸಿಂಹ ಮುಂತಾದ ಮಹಾವಿದ್ವಾಂಸರೂ ಜೈನರಲ್ಲಿ ಆಗಿ ಹೋಗಿರುವರು. ಆ ಎಲ್ಲ ಮಹಾಪುರುಷರ ಚರಿತ್ರವನ್ನು ವಿಸ್ತಾರಭಯದಿಂದ ಇಲ್ಲಿ ಹೇಳಿಲ್ಲ.

---

## ಉಪಸಂಹಾರ.

ಜೈನ ಧರ್ಮವು ಅನಾದಿಕಾಲದಿಂದ ಬಂದುದಾದುದರಿಂದ ಅದು ಸರ್ವಾಂಗಗಳಿಂದ ಪರಿಪೂರ್ಣವಾಗಿದೆ. ಅದರ ಎಲ್ಲ ಅಂಗಗಳನ್ನು ಒಂದು ಸಣ್ಣ ಪುಸ್ತಕದಲ್ಲಿ ಹೇಳುವುದು ಅಸಾಧ್ಯವು. ಇಲ್ಲಿ ಕೆಲವು ವಿಷಯಗಳು ಸಂಕ್ಷೇಪವಾಗಿ ಹೇಳಲ್ಪಟ್ಟಿವೆ. ಇನ್ನೂ ಹೇಳಬೇಕಾದ ಪ್ರಮಾಣ, ನಯ ಮುಂತಾದ ಹಲವು ಶಾಸ್ತ್ರವಿಷಯಗಳೂ ಬೇರೆ ವಿಷಯಗಳೂ ಉಳಿದುವು. ಜಿಜ್ಞಾಸುಗಳು ಅವುಗಳನ್ನು ಬೇರೆ ಗ್ರಂಥಗಳಿಂದ ತಿಳಿದುಕೊಳ್ಳಬೇಕು.

ಶ್ರೀ ಪಿತೃಚರಣಾರವಿಂದಾರ್ಪಿತಂ.